ಮುದ್ರಕರು:
ವಿ. ಯು. ಜಠಾರ, ಬಿ.ಎಸ್.ಸಿ.,
ಕರ್ನಾಟಕ ಪ್ರಿಂಟಿಂಗವರ್ಕ್ಸ್
ಧಾರವಾಡ.

ಪ್ರಕಾಶಕರು:
ಕಮಲಾಪುರ ನರಸಿಂಗರಾಯರು, ಬಿ.ಎ.ಎಲೆಲ್.ಬಿ.
ಕಾರ್ಯದರ್ಶಿ, ಕರ್ನಾಟಕ ಇತಿಹಾಸ
ಸಂಶೋಧಕಮಂಡಲ, ಧಾರವಾಡ.

# ಅರ್ಪಣ

ಭಾರತವರ್ಷದ ಮುಖ್ಯ ಅಂಗವಾಗಿದ್ದ ಕರ್ನಾಟಕದ ಪ್ರಮಾಣ ಭೂತವಾದ ಸಂಸ್ಕೃತಿಯ ತಿರುಳನ್ನು ತಿಳಿಯಲು ಟೊಂಕಕಟ್ಟಿ ನಿಂತಿದ್ದ ಐತಿಹಾಸಿಕ ಸಂಶೋಧಕರಲ್ಲಿ ಈ ಗ್ರಂಥವನ್ನು ಆದರದಿಂದ ಸಮರ್ಪಿಸಿದ್ದೇವೆ.

—**ಗ್ರಂಥಕರ್ತರು.**

# ವಿಷಯಾನುಕ್ರಮಣಿಕೆ

## ಭಾಗ ೧. ಕದಂಬರು.

ಪುಟಗಳು


ಅವತರಣಿಕೆ :— ಕದಂಬರ ಪೂರ್ವದಲ್ಲಿ ಕರ್ನಾಟಕದಲ್ಲಿ ಆಳಿದ ಮೌರ್ಯ-ಸಾತವಾಹನ ಚುಟುಕುಲ ( ಚ್ಯೂತಕುಲ )ದ ಸಾತಕರ್ಣಿಗಳ ಸಂಕ್ಷಿಪ್ತ ವಿವರ .. .. .. ೧– ೪

ಆ ಕಾಲದ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿ .. ೫– ೬

ಕದಂಬರ ಮೂಲ ವೃತ್ತ .. .. .. ೭– ೮

ಕದಂಬರ ರಾಜ್ಯಸ್ಥಾಪನೆ ಮತ್ತು ಅವರ ಬನವಾಸಿ, ಹಲಸಿಗೆ, ಉಚ್ಚಶೃಂಗಿ ಮತ್ತು ತ್ರಿಪರ್ವತಗಳಲ್ಲಿ ಆಳಿದ ಅರಸು ಮನೆತನಗಳು ೯–೧೧

ಕದಂಬರ ವಂಶವೃಕ್ಷ ಮತ್ತು ಕಾಲನಿರ್ಧಾರ ೧೨–೧೫

ಅರಸರ ಚರಿತ್ರೆ .. .. .. ೧೬–೩೭

ಕದಂಬರ ರಾಜ್ಯವಿಸ್ತಾರ .. .. .. ೩೮–೪೦

ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿ .. .. ೪೦–೪೩

ಕರ್ನಾಟಕದ ರಾಜಕೀಯ ಪರಿಸ್ಥಿತಿ .. .. ೪೧–೪೪


## ಭಾಗ ೨. ಚಲುಕ್ಯರು.


ಚಲುಕ್ಯರ ಮೂಲವೃತ್ತ .. .. .. ೪೫–೪೬

ಚಲುಕ್ಯರ ಭಾಷೆ ಕನ್ನಡ .. .. .. ೪೬–೪೮

ಚಲುಕ್ಯರ ವಂಶಾವಳಿ .. .. .. ೪೮–೫೧

ಚಲುಕ್ಯ ಅರಸುಮನೆತನದ ಚರಿತ್ರೆ .. .. ೫೧–೯೬

೨ನೆಯ ಕೀರ್ತಿವರ್ಮನ ತರುವಾಯ ಬಾಳಿದ ಅರಸರು .. ೯೭–೯೮

ಚಲುಕ್ಯರ ರಾಜ್ಯವಿಸ್ತಾರ .. .. .. ೯೯–೧೦೩

ಮಹಾರಾಷ್ಟ್ರಕತ್ರಯ .. .. .. ೧೦೩–೧೦೮


## ಭಾಗ ೩. ತಲಕಾಡಿನ ಗಂಗರು.


ಗಂಗರ ಮೂಲವೃತ್ತ .. .. .. ೧೦೯–೧೧೧

ಗಂಗರ ಶಾಸನಗಳು; ಅವುಗಳ ಪ್ರಾಮಾಣ್ಯ ವಿಚಾರ .. ೧೧೨–೧೧೮

ಗಂಗರ ವಂಶವೃಕ್ಷ ನಿರ್ಧಾರ .. .. .. ೧೧೯–೧೨೩

ಗಂಗ ರಾಜರ ಚರಿತ್ರೆ .. .. .. ೧೨೪–೨೦೪


## ಭಾಗ ೪. ನೊಳಂಬರು.


ನೊಳಂಬರ ಮೂಲವೃತ್ತ .. .. .. ೨೦೫–

ನೊಳಂಬ ಅರಸರ ಚರಿತ್ರೆ .. .. .. ೨೦೬–೨೨೨

ನೊಳಂಬರ ವಂಶವೃಕ್ಷ .. .. .. ೨೨೩


## ಭಾಗ ೫ ಬಾಣರು.


ಬಾಣರ ಇತಿವೃತ್ತ .. .. .. .. ೨೨೪–೨೨೫

ಬಾಣರ ವಂಶವೃಕ್ಷ ಮತ್ತು ಚರಿತ್ರೆ .. .. .. ೨೨೬–೨೨೭

# ಚಿತ್ರಪಟಗಳ ಪರಿವಿಡಿ


ಪುಟ

| | | |
|---|---|---|
| ೧. | ಬಾದಾಮಿಯ ಹತ್ತಿರ ರಾಮತೀರ್ಥದ ಗುಡ್ಡದಲ್ಲಿದ್ದ ಪ್ರಾಗೈತಿಹಾಸಿಕ ಕಲ್ಮನೆ ( Dolmen ) | ೮ |
| ೨. | ಬಾದಾಮಿ ತಾಲೂಕು ಬಾಚನಗುಡ್ಡ ಗ್ರಾಮದ ಹತ್ತಿರ ಇರುವ ಪ್ರಾಗೈತಿಹಾಸಿಕ ಕಲ್ಮನೆ | ೧೨ |
| ೩. | ಬನವಾಸಿಯ ಪ್ರಾಕೃತಶಾಸನವುಳ್ಳ ನಾಗಪ್ರತಿಮೆ ( ಸು. ಕ್ರಿ. ಶ. ೨ನೆಯ ಶತಮಾನ ) | ೨೪ |
| ೪. | ಕದಂಬ ೨ನೆಯ ಕೃಷ್ಣವರ್ಮನ ಕಿಱು ಕುಪ್ಪಟೂರು ತಾಮ್ರಶಾಸನ | ೩೨ |
| ೫. | ೧ನೆಯ ಪುಲಿಕೇಶಿಯ ಬಾದಾಮಿಯ ಬಂಡೆಗಲ್ಲಿನ ಶಾಸನ—ಶಕವರ್ಷ ೪೬೫ | ೪೮ |
| ೬. | ಬಾದಾಮಿಯ ೧ನೆಯ ಗವಿಯಲ್ಲಿ ಕೊರೆಯಲ್ಪಟ್ಟ ನಟರಾಜನ ಮೂರ್ತಿ | ೬೪ |
| ೭. | ಬಾದಾಮಿಯ ಗುಡ್ಡದ ಮೇಲಿರುವ ಪ್ರಾಚೀನ ಶಿವಾಲಯ ( ಗೋಪುರದ ನೋಟ ) | ೭೨ |
| ೮. | ಬಾದಾಮಿಯ ೩ನೆಯ ವೈಷ್ಣವಗವಿಯ ಮುಂಭಾಗ | ೮೦ |
| ೯. | ೨ನೆಯ ಪುಲಿಕೇಶಿಯ ದಿಗ್ವಿಜಯದ ಶಾಸನವುಳ್ಳ ಮೇಗುಟಿ ( Jain temple ) | ೯೬ |
| ೧೦. | ಔತ್ತರೀಯ ಮತ್ತು ದಾಕ್ಷಿಣಾತ್ಯ ವಾಸ್ತುಶೈಲಿಗಳಲ್ಲಿ ಕಟ್ಟಲ್ಪಟ್ಟ ೮ನೆಯ ಶತಮಾನದ ದೇವಾಲಯಗಳು—ಪಟ್ಟದಕಲ್ಲು | ೧೧೨ |
| ೧೧. | ಬಾದಾಮಿಯ ಜಂಬುಲಿಂಗ ಗುಡಿಯ ಕಂಬದ ಮೇಲೆ ಕೊರೆಯಲ್ಪಟ್ಟ ಶಾಸನ | ೧೩೬ |
| ೧೨. | ಮಹಾಕೂಟೇಶ್ವರ ದೇವಾಲಯದ ಮಹಾದ್ವಾರದಲ್ಲಿ ಕೆತ್ತಲ್ಪಟ್ಟ ಪಾಶುಪತ ವಿಗ್ರಹಗಳು | ೧೬೦ |
| ೧೩. | ವಿಜಯಾದಿತ್ಯದ ೩ನೆಯ ವರ್ಷದ ಬಾದಾಮಿಯ ಶಿಲಾಶಾಸನ | ೧೭೬ |
| ೧೪. | ೨ನೆಯ ಕೀರ್ತಿವರ್ಮನ ಆಡೂರು ಶಿಲಾಶಾಸನ | ೧೯೨ |
| ೧೫. | ಶ್ರವಣಬೆಳ್ಗೊಳದ ಚಾವುಂಡರಾಯ ಬಸ್ತಿ | ೨೦೮ |
| ೧೬. | ಶ್ರವಣಬೆಳ್ಗೊಳದ ಗೊಮ್ಮಟೇಶ್ವರ | ೨೨೪ |


---


ಇವುಗಳಲ್ಲಿ ೧, ೨, ೪, ೫, ೧೦, ೧೧, ೧೨, ೧೩, ೧೪ ಈ ಚಿತ್ರಗಳ ಪಡಿಯಚ್ಚುಗಳನ್ನು ಕೃಪೆಯಿಂದ ಈ ಗ್ರಂಥದಲ್ಲಿ ಉಪಯೋಗಿಸಲಿಕ್ಕೆ ಕೊಟ್ಟುದಕ್ಕೆ ಕನ್ನಡ ರಿಸರ್ಚ ಡಾಯರೆಕ್ಟರಾದ ಶ್ರೀ. ಆರ್. ಎಸ್. ಪಂಚಮುಖಿ, ಎಂ. ಎ. ಇವರಿಗೆ ಕೃತಜ್ಞರಾಗಿದ್ದೇವೆ.

—ಶ್ರೀ. ನರಸಿಂಗರಾವ ಕಮಲಾಪುರ

ಸೆಕ್ರೆಟರಿ ಇ. ಸಂಶೋಧಕ ಮಂಡಳ, ಧಾರವಾಡ

# ಗ್ರಂಥಕರ್ತರ ನಿವೇದನೆ



೧೯೩೬ ನೆಯ ಜುಲೈ ತಿಂಗಳು, ನಾವಿಬ್ಬರೂ ಉಟಕಮಂಡಲದಲ್ಲಿ ಹಿಂದುಸ್ಥಾನ ಸರಕಾರದ ಶಾಸನಖಾತೆಯ ಕೇಂದ್ರ ಕಚೇರಿಯಲ್ಲಿ ಕನ್ನಡ ಭಾಗದಲ್ಲಿ ನಿಯುಕ್ತರಾಗಿ ಕೆಲಸಮಾಡುತ್ತಿದ್ದಾಗ ಮೂಲಭೂತವಾದ ಶಾಸನ, ನಾಣ್ಯ, ಮೂರ್ತಿಗಳು ಇತ್ಯಾದಿ ಸಾಮಗ್ರಿಗಳ ಆಧಾರದ ಮೇಲೆ ಕರ್ನಾಟಕದ ಅರಸುಮನೆತನಗಳ ಪ್ರಮಾಣಭೂತವಾದ ಚರಿತ್ರೆಯನ್ನು ಬರೆಯಬೇಕೆಂದು ಸಂಕಲ್ಪಿಸಿದೆವು. ಮುಂಬಯಿ ಕರ್ನಾಟಕದ ಶಾಸನಗಳ ಸಂಗ್ರಹ ಮತ್ತು ಸಂಶೋಧನೆಯ ಕಾರ್ಯವೂ ನಮ್ಮ ಹೊಣೆಯದಾಗಿದ್ದುದರಿಂದ ಸಮಗ್ರ ಶಾಸನ ಸಂಗ್ರಹದ ಉಪಯೋಗವನ್ನು ಮಾಡಿಕೊಳ್ಳಲು ನಮಗೆ ಶಕ್ಯವಾಗಿದ್ದಿತು. ಪ್ರತಿವರ್ಷ ಶಾಸನ ಸಂಗ್ರಹಕ್ಕಾಗಿ ೩-೪ ತಿಂಗಳು ಒಬ್ಬರಾದ ಮೇಲೆ ಒಬ್ಬರು ಅಥವಾ ಒಂದೇಕಾಲಕ್ಕೆ ಸಂಚರಿಸಬೇಕಾದ್ದರಿಂದ ಈ ಚರಿತ್ರೆಯನ್ನು ಬರೆಯುವ ಕಾರ್ಯವು ಬಹು ಮಂದವಾಗಿ ಸಾಗಬೇಕಾಯಿತು. ಆದರೂ ಬಿಡುವು ಸಿಕ್ಕಾಗೆಲ್ಲ ಇದೇ ಕೆಲಸವನ್ನೇ ಮುಖ್ಯವಾಗಿಟ್ಟುಕೊಂಡಿದ್ದೆವು.

ಪ್ರಮಾಣಭೂತವಾದ ಆಧಾರಗಳನ್ನು ಪ್ರತ್ಯೇಕ ಓದಿಕೊಂಡು ಅವುಗಳಲ್ಲಿಯ ಉಪಯುಕ್ತ ಅಂಶಗಳನ್ನು ಇಬ್ಬರೂ ಸೇರಿ ಚರ್ಚಿಸಿ ಇಬ್ಬರಿಗೂ ಸಮ್ಮತವಾದ ನಿರ್ಣಯಗಳನ್ನು ಈ ಗ್ರಂಥದಲ್ಲಿ ಕೊಟ್ಟಿದ್ದೇವೆ. ವಿಷಯ ವಿವೇಚನೆಯಲ್ಲಿಯೂ ಭಾಷೆಯಲ್ಲಿಯೂ ಚರ್ಚೆಯಿಂದ ನಿರ್ಣಯಿಸಲ್ಪಟ್ಟವುಗಳನ್ನು ಇಲ್ಲಿ ಕೊಟ್ಟಿದ್ದರಿಂದ ನಮ್ಮಿಬ್ಬರಲ್ಲಿ ಈ ನಿರ್ಣಯಗಳಲ್ಲಿ ವಾದಭೂಮಿಗೆ ಅವಕಾಶವಿಲ್ಲ. ಹೀಗೆ ೧೯೩೬ ರಿಂದ ೧೯೪೯ ರ ಅವಧಿಯಲ್ಲಿ ಈ ಗ್ರಂಥವನ್ನು ಬರೆದು ಮುಗಿಸಿದೆವು. ಇದರ ಪ್ರಕಟನೆಗೆ ಹಿಂದುಸ್ಥಾನ ಸರಕಾರದ ಅಪ್ಪಣೆಯು ಅವಶ್ಯವಿದ್ದುದರಿಂದ ೧೯೫೦ ರಲ್ಲಿ ಅದನ್ನೂ ಸಂಪಾದಿಸಿದೆವು.

ಇಷ್ಟರಲ್ಲಿ ಧಾರವಾಡದ ಇತಿಹಾಸ ಸಂಶೋಧಕ ಮಂಡಲದ ಅಧಿಕಾರಿಗಳು ಈ ಗ್ರಂಥವನ್ನು ತಮ್ಮ ಕಡೆಗೆ ಪ್ರಕಟನೆಗೆ ಕೊಡಬೇಕೆಂದು ಕೇಳಿದ್ದರಿಂದ ೧೯೫೧ ರಲ್ಲಿ ಅದನ್ನು ಅವರಿಗೆ ಒಪ್ಪಿಸಿದೆವು. ಅನೇಕ ಅನಾನುಕೂಲ್ಯಗಳ ಮೂಲಕ ಅವರಿಗೆ ಈ ಕಾರ್ಯವನ್ನು ಕೈಕೊಳ್ಳುವದಾಗಲಿಲ್ಲ. ಮೈಸೂರು ವಿಶ್ವವಿದ್ಯಾಲಯದ ಪ್ರಕಟಣಾ ಶಾಖೆಯ ಅಧಿಕಾರಿಗಳಾದ ಶ್ರೀ. ( ಈಗ

ದಿಂವಗತ) ಟಿ. ಎಸ್. ವೆಂಕಣ್ಣಯ್ಯನವರು ಪ್ರಬುದ್ಧಕರ್ಣಾಟಕದಲ್ಲಿ ಇದನ್ನು ಲೇಖರೂಪವಾಗಿ ಪ್ರಕಾಶಿಸುವೆವೆಂದೂ ಪೂರ್ಣ ಹಸ್ತಪ್ರತಿಯನ್ನು ತಮಗೆ ಒಪ್ಪಿಸಬೇಕೆಂದೂ ಕೇಳಿಕೊಂಡರು. ಧಾರವಾಡದ ಇತಿಹಾಸ ಸಂಶೋಧಕ ಮಂಡಲದಿಂದ ಯಾವ ಕಾರ್ಯವೂ ನಡೆಯದ್ದರಿಂದ ಅದರ ಅಪ್ಪಣೆಯನ್ನು ಪಡೆದು ಮೈಸೂರು ವಿಶ್ವವಿದ್ಯಾಲಯಕ್ಕೆ ಅಷ್ಟಷ್ಟೆ ಹಸ್ತಪ್ರತಿಯನ್ನು ಕಳಿಸಬಹುದೆಂದು ನಿರ್ಧರಿಸಿ ಪ್ರಾಚೀನ ಕದಂಬರ ಭಾಗವನ್ನು ಕಳಿಸಿದೆವು. ಪ್ರಬುದ್ಧ ಕರ್ಣಾಟಕದ ಎರಡು ಸಂಚಿಕೆಗಳಲ್ಲಿ (ಸಂಪುಟ ೨೦, ಸಂಚಿಕೆ ೧, ೨) ಈ ಭಾಗವು ಪ್ರಸಿದ್ಧವಾಯಿತು. ಆದರೆ ಇಡಿಯ ಗ್ರಂಥವನ್ನು ಪುಸ್ತಕರೂಪವಾಗಿ ಪ್ರಕಟಿಸುವದು ನಮ್ಮ ಮುಖ್ಯ ಅಭಿಪ್ರಾಯವಾಗಿದ್ದುದರಿಂದ ತುಂಡುತುಂಡಾಗಿ ಪ್ರಸಿದ್ಧಿಸುವದು ನಮಗೆ ಯುಕ್ತವೂ ತೃಪ್ತಿಕರವೂ ಅನಿಸಲಿಲ್ಲ. ಇಷ್ಟರಲ್ಲಿ ಧಾರವಾಡದ ಇತಿಹಾಸ ಸಂಶೋಧಕ ಮಂಡಲದ ಅಧಿಕಾರಿಗಳು ಈ ಗ್ರಂಥವನ್ನು ಪೂರ್ತಿ ಒಂದೇ ಸಂಪುಟವಾಗಿ ಪ್ರಸಿದ್ಧಿಸುವೆವೆಂದೂ ಹಸ್ತಪ್ರತಿಯನ್ನು ತಮಗೆ ಒಪ್ಪಿಸಬೇಕೆಂದೂ ಮತ್ತೆ ಕೇಳಿಕೊಂಡರು. ಮತ್ತೂ ಮುಂಬಯಿ ಸರಕಾರದ ಕನ್ನಡ ಸಂಸ್ಕೃತಿ ಸಂಶೋಧನ ಮಂಡಲದಿಂದ ಮುದ್ರಣ ಪ್ರಸಿದ್ಧಿಗಳಿಗೆ ಸಾಕಷ್ಟು ಹಣವು ಸಿಗುವದಾದ್ದರಿಂದ ಇನ್ನು ಈ ಪುಸ್ತಕವನ್ನು ಕೂಡಲೆ ಪ್ರಸಿದ್ಧಿಸುವೆವೆಂದೂ ತಿಳಿಸಿದರು. ಮತ್ತೆ, ಮೈಸೂರು ವಿಶ್ವವಿದ್ಯಾಲಯದ ಅಪ್ಪಣೆಯನ್ನು ಪಡೆದು ಸಂಪೂರ್ಣ ಹಸ್ತಪ್ರತಿಯನ್ನು ೧೯೩೯ ರಲ್ಲಿ ಧಾರವಾಡಕ್ಕೆ ಕಳಿಸಲಾಯಿತು. ಇತಿಹಾಸಮಂಡಲದವರು ಆ ಪ್ರತಿಯ ಮುದ್ರಣ ಪ್ರತಿಯನ್ನು ಸಿದ್ಧಗೊಳಿಸಿದರು. ಅಚ್ಚುಕೂಟಕ್ಕೆ ಕಳುಹಿ ಮುದ್ರಣಕಾರ್ಯವನ್ನು ಪ್ರಾರಂಭಿಸಿದರು. ಆದರೆ ಅಷ್ಟರಲ್ಲಿ ಜಾಗತಿಕ ಮಹಾಯುದ್ಧವು ಎಲ್ಲ ಚಟುವಟಿಕೆಗಳನ್ನು ನಿಲ್ಲಿಸಿತು. ಸಾಕಷ್ಟು ಕಾಗದವು ಸಿಗದಂತಾಯಿತು. ಆದರೂ ಎಡವುತ್ತ ತಡವುತ್ತ ಮುದ್ರಣಕಾರ್ಯವನ್ನು ಧಾರವಾಡದ ಪ್ರಸಿದ್ಧ ಮುದ್ರಕರಾದ ಕರ್ನಾಟಕ ಪ್ರಿಂಟಿಂಗ್ ವರ್ಕ್ಸದವರು ಮುಗಿಸಿದರು. ಅದರಲ್ಲಿ ಸೇರಿಸಲ್ಪಡಬೇಕಾಗಿದ್ದ ಚಿತ್ರಗಳ ಮುದ್ರಣೆಗೂ ಗ್ರಂಥ ಪ್ರಸಿದ್ಧಿಗೂ ಅನೇಕ ವಿಘ್ನಗಳು ಬಂದವು. ೧೯೪೧ ರಲ್ಲಿ ಮುದ್ರಣಕಾರ್ಯವು ಮುಗಿದಿದ್ದರೂ ಇಡಿಯ ಗ್ರಂಥವನ್ನು ಪ್ರಸಿದ್ಧಿಸುವದಾಗಲಿಲ್ಲ. ಈಗ ಯುದ್ಧ ಮುಗಿದು ಕಾಗದ ಮುದ್ರಣಗಳ ಸೌಕರ್ಯಗಳು ಸುಲಭವಾಗಹತ್ತಿದ್ದರಿಂದ ಕಡೆಗೊಮ್ಮೆ ಈ ಗ್ರಂಥವು ಅಚ್ಚುಕೂಟದಿಂದ ಹೊರಬೀಳುವ ಸುಯೋಗವು ಬಂದಿದೆ.

ಮೊದಲೇ ಉದ್ದೇಶಿಸಿದಂತೆ, ಈ ಸಂಪುಟದಲ್ಲಿ ಪ್ರಾಚೀನಕಾಲದಿಂದ

೧೦ನೆಯ ಶತಮಾನದ ಅವಧಿಯ ಕರ್ನಾಟಕದ ಇತಿಹಾಸವು ಅಡಕವಾಗಿದೆ. ಮುಂದಿನ ಇತಿಹಾಸವನ್ನು ಬೇರೆ ಸಂಪುಟಗಳಾಗಿ ಪ್ರಸಿದ್ಧಿಸಬೇಕೆಂದು ಯೋಚಿಸಿದ್ದೇವೆ. ಪ್ರಕೃತ ಗ್ರಂಥದಲ್ಲಿ ರಾಷ್ಟ್ರಕೂಟರ ಭಾಗವನ್ನು (ಸಿದ್ಧವಾಗಿದ್ದರೂ) ಸೇರಿಸುವದು ಮೇಲಿನ ಅಡಚಣೆಗಳ ಮೂಲಕ ಸಾಧ್ಯವಾಗಲಿಲ್ಲ. ಅದಕ್ಕೋಸ್ಕರ ತಡೆದರೆ ಮತ್ತೆ ಅನಿಯಮಿತ ಕಾಲ ಮುಂದೆ ಬೀಳಬಹುದೆಂದು ತಿಳಿದು ಮುದ್ರಿತ ಭಾಗವನ್ನು ಮಾತ್ರ ಈ ಇತಿಹಾಸ ಯೋಜನೆಯ ೧ನೆಯ ಸಂಪುಟವಾಗಿ ಪ್ರಸಿದ್ಧಗೊಳಿಸಿದೆ.

೧೯೩೧ರಲ್ಲಿ ಪೂರ್ತಿ ತಯಾರಾಗಿದ್ದರೂ ೧೯೪೬ರವರೆಗೆ ಈ ಗ್ರಂಥವು ಪ್ರಸಿದ್ಧಿಗಾಗಿ ದುರ್ದೈವದಿಂದ ಮೈಸೂರು–ಧಾರವಾಡಗಳ ನಡುವೆ ಅಲೆದಾಡಬೇಕಾಯಿತು. ಈಗ್ರಂಥವನ್ನು ಕೈಕೊಂಡು ಮುಗಿಸಿದಾಗ ಕರ್ನಾಟಕದ ಅರಸುಮನೆತನಗಳನ್ನು ಕುರಿತು ಒಂದು ಇತಿಹಾಸವೂ ಪ್ರಸಿದ್ಧವಾಗಿರಲಿಲ್ಲ. ಫ್ಲೀಟ ಭಾಂಡಾರಕರರ ಹೊತ್ತಿಗೆಗಳು ತೀರ ಹಳೆಯವಾಗಿದ್ದರಿಂದ ಹೊಸ ಶೋಧಗಳಿಂದ ಅವುಗಳನ್ನು ತಿದ್ದದೆ ಗ್ರಾಹ್ಯವಾಗುವಂತೆ ಇದ್ದಿಲ್ಲ. ಇಂಗ್ಲಿಷದಲ್ಲಿ ಬರೆದ ಶ್ರೀ. ಅಳತೇಕರರ ರಾಷ್ಟ್ರಕೂಟರ ಇತಿಹಾಸವೂ, ಬೇರೆ ಚಿಕ್ಕ ಪುಟ್ಟ ಪ್ರಬಂಧಗಳೂ ಆಮೇಲೆ ಹೊರಟವು. ಆದರೂ ನಮ್ಮ ಗ್ರಂಥದಲ್ಲಿ ಸ್ವತಂತ್ರ ಶೋಧನೆಯಿಂದ ಹೊರಟ ನಿರ್ಣಯಗಳು ಇವಾವ ಗ್ರಂಥಗಳೂ ಹೊರಡದಿರುವಾಗಲೇ ಹುಟ್ಟಿ ಅಬಾಧಿತವಾಗಿ ನಿಲ್ಲುವಂತಹವಿರುವವೆಂಬುದನ್ನು ತಿಳಿಸಲು ಸಂತೋಷವಾಗುತ್ತದೆ.

ಈ ಸಂಪುಟದಲ್ಲಿ ಕದಂಬ, ಚಲುಕ್ಯ, ಗಂಗ, ನೊಳಂಬ, ಬಾಣ ಅರಸುಮನೆತನಗಳ ಚರಿತ್ರೆಯನ್ನು ಕೊಟ್ಟಿದ್ದೇವೆ. ಈ ಭಾಗದಲ್ಲಿ ಹೊಸ ಶೋಧಗಳನ್ನು ಸೇರಿಸಿ ತಿದ್ದುವುದು ಶಕ್ಯವಾಗಲಿಲ್ಲ. ಇದಕ್ಕೆ ಪುರವಣಿ ರೂಪವಾಗಿ ಚಿಕ್ಕ ಹೊತ್ತಿಗೆಯನ್ನು ಹೊರಡಿಸುವದು ಅವಶ್ಯವಾಗಿದೆ. ಅದನ್ನು ಯಥಾವಕಾಶ ಕೈಕೊಂಡು ಪ್ರಸಿದ್ಧಿಸಲಾಗುವದು. ನಮ್ಮ ನಿರ್ಣಯಗಳಿಗೆ ವಿರೋಧಿಸುವಂಥ ಹೊಸ ಶೋಧಗಳು ಇಲ್ಲವೆಂದು ಸಾಮಾನ್ಯವಾಗಿ ಹೇಳಬಹುದು. ಆದರೆ ಹೆಚ್ಚಿನ ಮಾಹಿತಿಯನ್ನು ಸೇರಿಸಲು ಮಾತ್ರ ಅವಕಾಶವುಂಟು.

ಈ ಗ್ರಂಥ ರಚನೆಯಲ್ಲಿ ನಾವಿಬ್ಬರೇ ಸಂಪೂರ್ಣ ಹೊಣೆಗಾರರು. ಫ್ಲೀಟ, ರಾಯಿಸ್ ಭಾಂಡಾರಕರ, ನರಸಿಂಹಾಚಾರ, ವೆಂಕಯ್ಯ, ಹೊಸಕೋಟಿ ಕೃಷ್ಣಶಾಸ್ತ್ರಿ, ಹುಲ್ಷ್, ಕೀಲಹಾರ್ನ್, ಬಾರ್ನೆಟ್ ಮುಂತಾದ ಸಂಶೋಧಕರ ಲೇಖಗಳಿಂದಲೂ, ಪ್ರಬಂಧಗಳಿಂದಲೂ ಸಹಾಯವನ್ನು ತೆಗೆದುಕೊಂಡಿದ್ದೇವೆ. ದಿ. ಟಿ. ಎಸ್. ವೆಂಕಣ್ಣಯ್ಯನವರ ಆಸ್ಥೆಯನ್ನೂ ಇದರ ಪ್ರಕಟನೆಗಾಗಿ ಅವರು

ತೋರಿಸಿದ ಶ್ರದ್ಧೆಯನ್ನೂ ಕೊಂಡಾಡದೆ ಇರಲಾರೆವು. ಧಾರವಾಡ ಇತಿಹಾಸ ಮಂಡಲದ ಅಧಿಕಾರಿಗಳು ತಮ್ಮ ಎಷ್ಟೋ ಅಡಚಣಿಗಳಿದ್ದರೂ ಅವುಗಳನ್ನು ಬದಿಗಿಟ್ಟು ಕಡೆಗೆ ಈ ಗ್ರಂಥದ ಪ್ರಕಾಶನೆಯನ್ನು ಕೈಕೊಂಡದ್ದಕ್ಕಾಗಿ ಅವರನ್ನು ಅಭಿನಂದಿಸದೆ ಇರಲಾರೆವು. ಪ್ರಕಾಶನೆಯ ಕಾರ್ಯಭಾರವನ್ನು ಹೊತ್ತಿದ್ದ ಕಾರ್ಯದರ್ಶಿಗಳಾದ ಶ್ರೀಮಾನ್ ನರಸಿಂಗರಾವ ಕಮಲಾಪುರ ಎಲೆಲ್. ಬಿ. ಅವರಿಗೂ ಸಂಚಾಲಕರಾದ ಶ್ರೀಮಾನ್ ದತ್ತಾತ್ರೇಯ ಕರಮರಕರ ಎಂ. ಎ. ಎಲೆಲ್. ಬಿ., ಎಂ. ಎಲ್. ಎ. (ಕೇಂದ್ರ) ಇವರಿಗೂ ಅನೇಕ ಸೂಚನೆ ಸಲಹೆಗಳಿಗಾಗಿ ನಮ್ಮ ಉಪಕಾರಸ್ಮರಣೆಯನ್ನು ಸಲ್ಲಿಸುವೆವು.

ಅಂದವಾಗಿ ಮುದ್ರಿಸಿದ ಕರ್ನಾಟಕ ಪ್ರಿಂಟಿಂಗ್ ವರ್ಕ್ಸದ ಸಂಚಾಲಕರಾದ ಶ್ರೀ. ಜಠಾರರನ್ನೂ ಚಿತ್ರಗಳನ್ನು ಅಚ್ಚುಕಟ್ಟಾಗಿ ಮುದ್ರಿಸಿದ ಲಿಂಗರಾಜ ಪ್ರೆಸ್ಸಿನ ಶ್ರೀ. ಬೀಳಗಿಯವರನ್ನೂ ಅಭಿನಂದಿಸದೆ ಇರಲಾರೆವು.

ಧಾರವಾಡ
೨೦-೯-೧೯೪೬

**ನೆಲಮಂಗಲ ಲಕ್ಷ್ಮೀನಾರಾಯಣರಾವ**
**ರಾಘವೇಂದ್ರಾಚಾರ್ಯ ಸ್ವಾಮಿರಾಯಾಚಾರ್ಯ**
**ಪಂಚಮುಖಿ**

# ಕರ್ಣಾಟಕದ ಅರಸುಮನೆತನಗಳು

## ಭಾಗ ೧—ಕದಂಬರು

### ಅವತರಣಿಕೆ

ಕರ್ಣಾಟಕದಲ್ಲಿ ಸ್ವತಂತ್ರವಾದ ರಾಜ್ಯವನ್ನು ಸ್ಥಾಪನೆಮಾಡಿದ ಮೊದಲನೆಯ ರಾಜಮನೆತನದವರು ಕದಂಬರೇ. ಇವರು ಕರ್ಣಾಟಕದ ಕೆಲ ಭಾಗಗಳನ್ನು ಪಲ್ಲವರಿಂದ ಸ್ವಾಧೀನಪಡಿಸಿಕೊಂಡು ಸ್ವತಂತ್ರವಾಗಿ ರಾಜ್ಯವನ್ನು ಸ್ಥಾಪಿಸಿದರು. ಇವರ ರಾಜ್ಯವಿಸ್ತಾರವು ಎಷ್ಟಿತ್ತೆಂಬುದನ್ನು ತಿಳಿದುಕೊಳ್ಳುವುದಕ್ಕೆ ಮುಂಚೆ ಇವರು ಬರುವ ಮೊದಲು ಕರ್ಣಾಟಕವು ಯಾವ ಯಾವ ರಾಜರ ಆಧಿಪತ್ಯಕ್ಕೆ ಒಳಪಟ್ಟಿತ್ತೆಂಬುದನ್ನೂ ಇವರ ನೆರೆಹೊರೆಯ ಅರಸರು ಯಾರಾಗಿದ್ದರೆಂಬುದನ್ನೂ ತಿಳಿದುಕೊಳ್ಳುವುದು ಆವಶ್ಯಕ.

ಐತಿಹಾಸಿಕ ಕಲ್ಪದ ಪ್ರಾರಂಭದಲ್ಲಿ ಕರ್ಣಾಟಕದ ಕೆಲಭಾಗವು ಮೌರ್ಯರ ವಶದಲ್ಲಿತ್ತೆಂದು ಬೌದ್ಧ ಸಾರ್ವಭೌಮನಾದ ಅಶೋಕ ಮಹಾರಾಜನ ಶಾಸನಗಳಿಂದ ವ್ಯಕ್ತವಾಗುತ್ತದೆ. ನಿಜಾಂಪ್ರಾಂತಕ್ಕೆ ಸೇರಿದ ರಾಯಚೂರಿಗೆ ಸುಮಾರು ನಲವತ್ತಾರು ಮೈಲುಗಳ ದೂರದಲ್ಲಿರುವ ಮಾಸ್ಕಿ ಎಂಬ ಗ್ರಾಮದಲ್ಲಿಯೂ ಮೈಸೂರು ಸಂಸ್ಥಾನದ ಚಿತ್ರದುರ್ಗ ಜಿಲ್ಲೆಯಲ್ಲಿರುವ ಸಿದ್ದಾಪುರದಲ್ಲಿಯೂ ಗುತ್ತಿ ( ಅನಂತಪುರ ಜಿಲ್ಲೆ )ಯ ಸಮೀಪದಲ್ಲಿರುವ ಎರ್ರಗುಡಿಯಲ್ಲಿಯೂ ಈ ರಾಜನ ಶಾಸನಗಳು ಸಿಕ್ಕಿವೆ. ಸಿದ್ದಾಪುರದ ಲಿಪಿಗಳಿಂದ ಈ ಗ್ರಾಮವು ಅಶೋಕನ ರಾಜ್ಯದ ಅತ್ಯಂತ ದಕ್ಷಿಣಕ್ಕಿದ್ದ ಸುವರ್ಣಗಿರಿ ಎಂಬ ಪ್ರಾಂತಕ್ಕೆ ಸೇರಿತ್ತೆಂದೂ ಆಗ್ಗೆ ಇದಕ್ಕೆ ಇಸಿಲಾ ಎಂಬ ಹೆಸರು ಇದ್ದಿರಬಹುದೆಂದೂ ವ್ಯಕ್ತವಾಗುತ್ತದೆ. ಈ ಸುವರ್ಣಗಿರಿಯಲ್ಲಿ ಅರಸುಮನೆತನದ ರಾಜಪ್ರತಿನಿಧಿಯು ಇದ್ದುಕೊಂಡು ಈ ಭಾಗದ ಆಡಳಿತವನ್ನು ನಡೆಸುತ್ತಿದ್ದನು. ಮಾಸ್ಕಿಯ ದಕ್ಷಿಣಕ್ಕೂ ಹಂಪೆಯ ಉತ್ತರಕ್ಕೂ ಇರುವ ಕನಕಗಿರಿಯೇ ಶಾಸನಗಳಲ್ಲಿ

ಉಕ್ತವಾದ ಸುವರ್ಣಗಿರಿ ಎಂದು ಹುಲ್ಷರು ಅಭಿಪ್ರಾಯಪಟ್ಟಿದ್ದಾರೆ. ಮೌರ್ಯ ಸಾಮ್ರಾಜ್ಯದ ದಕ್ಷಿಣಭಾಗದ ರಾಜಧಾನಿಯೇ ಕರ್ಣಾಟಕದ ಉತ್ತರ ಭಾಗದಲ್ಲಿದ್ದುದರಿಂದ ಕರ್ಣಾಟಕದ ಈ ಭಾಗವು ಮೌರ್ಯರ ಕೈಯಲ್ಲಿದ್ದಿತೆಂಬುದರಲ್ಲಿ ಸಂಶಯವಿಲ್ಲ. ಇದೇ ವಿಷಯವು ಅಶೋಕ ಮಹಾರಾಜನು ಬನವಾಸಿಗೆ[2] ಧರ್ಮೋಪದೇಶಕರನ್ನು ಕಳುಹಿಸಿದ್ದನೆಂಬ ಮಹಾವಂಶದ ವಚನದಿಂದ ದೃಢವಾಗುತ್ತದೆ. ಮೌರ್ಯರಾಜ್ಯಸ್ಥಾಪಕನೂ ಅಶೋಕನ ಪಿತಾಮಹನೂ ಆದ ಚಂದ್ರಗುಪ್ತನು ಭದ್ರಬಾಹುಮುನಿಯ ಶಿಷ್ಯನಾಗಿ ಆತನೊಡನೆ ಶ್ರವಣಬೆಳ್ಗೊಳಕ್ಕೆ ಬಂದು ಅಲ್ಲಿಯೇ ಗುರುಶುಶ್ರೂಷೆಮಾಡುತ್ತಾ ನಿಂತು ಕೆಲ ಕಾಲಾನಂತರ ಮೃತನಾದನೆಂದು ಕೆಲಪಂಡಿತರು ಅಭಿಪ್ರಾಯಪಡುತ್ತಾರೆ.[3]

ಮೌರ್ಯರ ತರುವಾಯ ಸಾತವಾಹನರು ಕರ್ಣಾಟಕದ ಅಧಿಪತಿಗಳಾಗಿದ್ದರು. ಬಳ್ಳಾರಿ ಜಿಲ್ಲೆಯ ಆದವಾನಿ ತಾಲ್ಲೂಕಿಗೆ ಸೇರಿದ ಮ್ಯಾಕದೋನಿಯೆಂಬ ಗ್ರಾಮದಲ್ಲಿ ಒಂದು ಬಂಡೆಯ ಮೇಲೆ ಸಾತವಾಹನ ರಾಜನಾದ ಸಿರಿಪುಳುಮಾವಿಯ ಎಂಟನೆಯ ವರ್ಷದ ಶಾಸನವೊಂದಿದೆ. ಇಲ್ಲಿ ಉಕ್ತನಾದ ಪುಳುಮಾವಿಯು ಕ್ರಿ. ಶ. ೧೩೫ ರಿಂದ ಸುಮಾರು ಇಪ್ಪತ್ತೆಂಟು ವರ್ಷಗಳು ರಾಜ್ಯಭಾರಮಾಡಿದ ೨ನೆಯ ವಾಸಿಠೀಪುತ ಪುಳುಮಾವಿಯೆಂದು ಈ ಶಾಸನವನ್ನು ಪ್ರಕಟಿಸಿದ ಡಾ. ಸುಕ್ಥಂಕರರು ಹೇಳಿದ್ದಾರೆ.[4]

---

[1] Hultzsch : *Inscriptions of Aśōka*, p. xxxviii. ಕೊಪ್ಪಳದ ಹತ್ತಿರ ಪಾಲ್ಕಿಗುಂಡು ಗವಿಮಠಗಳ ಬಂಡೆಗಲ್ಲುಗಳ ಮೇಲೆ ಅಶೋಕನ ಶಾಸನಗಳು ಇರುತ್ತವೆಂದು ಇತ್ತೀಚೆಗೆ ತಿಳಿಯಬಂದಿದೆ. ಇವು *Hyderabad Archæological Series*, No. 10 ರಲ್ಲಿ ಪ್ರಸಿದ್ಧವಾಗಿವೆ.

[2] ಅಶೋಕನು ಮಹಿಷಮಂಡಲಕ್ಕೂ ಧರ್ಮಪ್ರಚಾರಕರನ್ನು ಕಳುಹಿಸಿದ್ದನೆಂದು ಬೌದ್ಧ ಗ್ರಂಥಗಳಿಂದ ತಿಳಿಯುತ್ತದೆ. ಈ ಮಹಿಷಮಂಡಲವು ಮೈಸೂರೆಂದು ಕೆಲವರು ಪ್ರತಿಪಾದಿಸುತ್ತಾರೆ. ಫ್ಲೀಟರು ಇದು ವಿಂಧ್ಯಪರ್ವತದ ಸಾಲಿನ ದಕ್ಷಿಣಕ್ಕೆ ಮಧ್ಯಪ್ರಾಂತಕ್ಕೆ ಸೇರಿದ ನಿಮಾರ್ ಜಿಲ್ಲೆಯ ಖಾಂಡ್ವಾ ತಹಸೀಲಿನಲ್ಲಿರುವ ಈಗಿನ ಮಾಂಧಾತವೆಂದೂ ಪತಂಜಲಿ ಮಹಾಭಾಷ್ಯ, ಮಹಾಭಾರತ, ಸುತ್ತನಿಪಾತ, ರಘುವಂಶಗಳಲ್ಲಿ ಉಕ್ತವಾದ ಮಾಹಿಷ್ಮತಿಯೇ ಈ ಮಹಿಷಮಂಡಲವೆಂದೂ ಹೇಳಿದ್ದಾರೆ. *J.R.A.S.*, 1910, pp. 425 ff., 1911, p. 816 and 1912 p. 246.

[3] *Śravaṇa Beḷagoḷa Inscriptions*, Second Edition pp. 36–42. ಆದರೆ ಫ್ಲೀಟರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. *Ep. Ind.*, Vol. IV, p. 22; *J.R.A.S.*, 1909, p. 23 and *Ibid.*, 1911, p. 816.

[4] *Ep. Ind.*, Vol. XIV, pp. 152 ff.

ಕ್ರಿ. ಶ. ೩ ನೆಯ ಶತಮಾನದಲ್ಲಿ ಇವರ ಸಾಮಂತರಾದ ಚುಟುಕುಲದ ಸಾತಕರ್ಣಿಗಳು ಬನವಾಸಿ ಪ್ರಾಂತದಲ್ಲಿ ಆಳುತ್ತಿದ್ದರು. ಮಳವಳ್ಳಿಯ[1] ಹಾರೀತಿಪುತ ವಿಣ್ಹುಕಡ್ಡ ಚುಟುಕುಲಾನಂದ ಸಾತಕರ್ಣಿ ಎಂಬ ರಾಜನ ಆಳ್ವಿಕೆಯ ಎರಡನೆಯ ವರ್ಷದ ಶಿಲಾಲಿಪಿಯಿಂದ ರಾಜನು ಕೌಂಡಿನ್ಯಗೋತ್ರದ ಕೊಂಡ-ಮಾನನೆಂಬ ಬ್ರಾಹ್ಮಣನಿಗೆ ಭೂದಾನ ಮಾಡುವಂತೆ ಮಹಾವಲಭನೆಂಬ ತನ್ನ ಅಧಿಕಾರಿಗೆ ಅಪ್ಪಣೆ ಕೊಟ್ಟನೆಂದು ತಿಳಿಯುತ್ತದೆ. ಇದರಲ್ಲಿ ರಾಜನು ವೈಜಯಂತಿಯ ಅರಸನೆಂದು ಹೇಳಿದೆ. ಬನವಾಸಿಯಲ್ಲಿ ದೊರೆತ ಇದೇ ರಾಜನ ಹನ್ನೆರಡನೆಯ ವರ್ಷದ ಶಿಲಾಶಾಸನದಲ್ಲಿ ಈ ರಾಜನ ಮಗಳು ಸಾತಸಿವಖಿದ ನಾಗಸಿರಿ ( ಸಿವಸ್ಕಂದನಾಗಶ್ರೀ )[2] ಎಂಬ ತನ್ನ ಮಗನೊಂದಿಗೆ ನಾಗವನ್ನೂ ಕೆರೆಯನ್ನೂ ಒಂದು ವಿಹಾರವನ್ನೂ ದಾನಮಾಡಿದಳೆಂದು ಬರೆದಿದೆ. ಶಿವಮೊಗ್ಗ ಜಿಲ್ಲೆಯ ತಾಳಗುಂದದ ಪ್ರಣವೇಶ್ವರ ದೇವಾಲಯದಲ್ಲಿರುವ ಕದಂಬ ಕಾಕಸ್ಥವರ್ಮನ ಲಿಪಿಯಲ್ಲಿ ಈ ದೇವಾಲಯದ ಈಶ್ವರನನ್ನು ಹಿಂದಕ್ಕೆ ಸಾತಕರ್ಣಿ ಮೊದಲಾದ ಅರಸರು ಪೂಜಿಸಿದರೆಂದು ಹೇಳಿದೆ. ಮೇಲೆ ಹೇಳಿದ ಮ್ಯಾಕದೋನಿ ಶಾಸನದಲ್ಲಿ ಮಹಾಸೇನಾಪತಿ ಖಂದನಾಕ ( ಸ್ಕಂದನಾಗ ) ನ ವಶದಲ್ಲಿದ್ದ ' ಸಾತವಹನಿಹಾರ ' ಜನಪದದಲ್ಲಿಯ ವೇಪುರಕಗ್ರಾಮದ ಗೃಹಪತಿಯೊಬ್ಬನು ಒಂದು ಕೆರೆಯನ್ನು ಅಗೆಸಿದನೆಂದು ಹೇಳಿದೆ. ಪಲ್ಲವ ಸಿವಸ್ಕಂದವರ್ಮ ರಾಜನ ಕಾಲದ ಇದೇ ಬಳ್ಳಾರಿ ಜಿಲ್ಲೆಯ ಹಿರೇಹಡಗಲಿಯಲ್ಲಿ ದೊರೆತ ತಾಮ್ರಪತ್ರಗಳಿಂದ[3] ಆ ಭಾಗಕ್ಕೆ ಸಾತಾಹನಿರಟ್ಠ ಎಂಬ ಹೆಸರಿತ್ತೆಂದು ತಿಳಿಯಬರುತ್ತದೆ. ಆದುದರಿಂದ ಸಾತವಹನಿಹಾರ ಅಥವಾ ಸಾತಾಹನಿರಟ್ಠ (ಸಾತವಾಹನರಾಷ್ಟ್ರ) ದಲ್ಲಿ ಬಳ್ಳಾರಿ ಜಿಲ್ಲೆಯ ಬಹುಭಾಗವು ಸೇರಿತ್ತೆಂದು ಹೇಳಬಹುದು. ಮೈಸೂರು ಸಂಸ್ಥಾನಕ್ಕೆ ಸೇರಿದ ಚಿತ್ರದುರ್ಗದ ಸಮೀಪದಲ್ಲಿರುವ ಚಂದ್ರವಳ್ಳಿಯಲ್ಲಿ ದೊರೆತ ಈ ವಂಶದ ರಾಜರ ನಾಣ್ಯಗಳಿಂದಲೂ[4] ಆ ಪ್ರಾಂತವು ಸಾತವಾಹನರ ಅಧೀನದಲ್ಲಿದ್ದಿತೆಂದು ಊಹಿಸಬಹುದು. ಅಂತು ಸಾತವಾಹನರು ಕರ್ಣಾಟಕ

[1] Lüders : *List of Brāhmī Inscriptions*, No. 1195.

[2] *Ibid.*, No. 1186. ಮೇಲೆ ಹೇಳಿದ ಮಳವಳ್ಳಿ ಶಾಸನದ ಕೆಳಗೆ ಕೊರೆದಿರುವ ಕದಂಬ ರಾಜನ ಶಾಸನದಲ್ಲಿ ಆತನ ಹೆಸರು ಕೊಟ್ಟಿಲ್ಲ. ಒಂದು ಲಿಪಿಯಲ್ಲಿ ಮಾನವ್ಯಗೋತ್ರನೂ ಹಾರೀತಿಪುತ್ರನೂ ಆದ ಸಿವಖಡವಮ್ಮ (ಸಿವಸ್ಕಂದವರ್ಮ)ನು ವೈಜಯಂತೀಪತಿಯಾಗಿದ್ದನೆಂದು ಹೇಳಿದೆ. ಇವನು ಸಾತಸಿವಖದ ನಾಗಸಿರಿಯೇ ಆಗಿರಬೇಕೆಂದು ಪಂಡಿತರ ಊಹೆ. (*Ind. Ant.* Vol. XLVI, pp. 154–155).

[3] *Ep. Ind.*, Vol. I, p. 2.

[4] *Mysore Archæological Report*, 1909, pp. 29 and 30.

ರಾಗಲಿ ಅಲ್ಲದಿರಲಿ, ಕರ್ಣಾಟಕವು ಇವರ ಆಳ್ವಿಕೆಗೆ ಒಳಪಟ್ಟಿತ್ತೆಂಬುದರಲ್ಲಿ ಸಂದೇಹವಿಲ್ಲ.

ಮೇಲೆ ಹೇಳಿದ ಹಿರೇಹಡಗಲಿಯ ಶಾಸನದಿಂದ ಸಾತವಾಹನರ ಬಳಿಕ ಸಾತವಾಹನರಾಷ್ಟ್ರವು ಪಲ್ಲವರ ವಶದಲ್ಲಿದ್ದಿತೆಂದು ತಿಳಿಯಿತು. ಅಂದರೆ ಸಾತ-ವಾಹನರ ವಶದಲ್ಲಿದ್ದ ಕರ್ಣಾಟಕದ ಭಾಗವೆಲ್ಲವೂ ಇವರ ಕೈಸೇರಿತು. ತಾಳಗುಂದದ ಪ್ರಣವೇಶ್ವರ ದೇವಾಲಯದ ಎದುರಿಗಿರುವ ಕಂಬದಲ್ಲಿ ಕೊರೆದಿರುವ ಶಿಲಾಲಿಪಿಯಲ್ಲಿ ಕದಂಬವಂಶದ ಮೂಲಪುರುಷನಾದ ಮಯೂರಶರ್ಮನು ಪಶ್ಚಿಮ ಸಮುದ್ರಕ್ಕೂ ಪ್ರೇಹಾರಕ್ಕೂ ಮಧ್ಯದಲ್ಲಿರುವ ಪ್ರದೇಶವನ್ನು ಪಲ್ಲವರಿಂದ ಪಡೆದನೆಂದು ಹೇಳಿದೆ. ಇದರಿಂದ ಸಾತವಾಹನರ ತರುವಾಯ ಪಲ್ಲವರ ಕೈವಶವಾಗಿದ್ದ ಕರ್ಣಾಟಕದ ಭಾಗವನ್ನು ಕದಂಬರು ಆಕ್ರಮಿಸಿಕೊಂಡರೆಂದು ಹೇಳಬೇಕಾಗುತ್ತದೆ. ಅವರು ಹೀಗೆ ಸ್ವತಂತ್ರವಾಗಿ ರಾಜ್ಯವನ್ನು ಸಂಪಾದಿಸುವಾಗ್ಗೆ ಬೃಹದ್ಬಾಣರನ್ನು ಸೋಲಿಸಿ ಅವರಿಂದ ಕರವನ್ನು ತೆಗೆದುಕೊಂಡರೆಂದು ತಾಳಗುಂದ ಶಾಸನವು ಹೇಳುತ್ತದೆ. ಈ ಬೃಹದ್ಬಾಣರು ಈ ಕಾಲದಲ್ಲಿ ಪಲ್ಲವರ ಸಾಮಂತರಾಗಿ ದತ್ತಮಂಡಲ ( Ceded Districts ) ದ ಕೆಲಭಾಗ (ಶ್ರೀಶೈಲದ ಮಗ್ಗುಲಿನ ಭಾಗ) ಗಳನ್ನು ಆಳುತ್ತಿದ್ದರು.[1]

ಇನ್ನು ಈ ಕಾಲದಲ್ಲಿ ಅಂದರೆ ಸುಮಾರು ೪ ನೆಯ ಶತಮಾನದಲ್ಲಿ ಕದಂಬರ ನೆರೆಹೊರೆಯ ರಾಜರಾಗಿ ಉತ್ತರದಲ್ಲಿ ವಾಕಾಟಕರೂ ಶಾಲಂಕಾಯನರೂ ದಕ್ಷಿಣದಲ್ಲಿ ಪ್ರಾಯಶಃ ಗಂಗರೂ ಆಳುತ್ತಿದ್ದರು. ವಾಕಾಟಕರು ಮಧ್ಯ-ಹಿಂದುಸ್ಥಾನದಲ್ಲಿ ವಿಸ್ತಾರವಾದ ರಾಜ್ಯಕ್ಕೆ ಅಧಿಪತಿಗಳಾಗಿದ್ದರು. ಅಜಂತಾ, ಗಂಜ, ಗುಲ್ವಾರಾಗಳಲ್ಲಿ ಇವರ ಲಿಪಿಗಳು ಸಿಕ್ಕಿವೆ. ಅಜಂತೆಯಲ್ಲಿರುವ ಗುಹಾಂತರ್ದೇವಾಲಯಗಳಲ್ಲಿ ಕೆಲವು ಇವರಿಂದಲೇ ಕೊರೆಯಿಸಲ್ಪಟ್ಟವು. ಹದಿನಾರನೆಯ ಗುಹೆಯ ಹೊರಭಾಗದಲ್ಲಿರುವ ಒಂದು ಶಾಸನವು[2] ಈ ಮನೆತನದ ರಾಜರ ಕೈಕೆಳಗಿದ್ದ ಮಂತ್ರಿಯೊಬ್ಬನ ಮಗನು ಈ ವಿಹಾರವನ್ನು ಮಾಡಿಸಿದನೆಂದು ಹೇಳುತ್ತದೆ. ಉತ್ತರ ಹಿಂದುಸ್ಥಾನದ ಸಾರ್ವಭೌಮರಾಗಿದ್ದ ಗುಪ್ತವಂಶದ ಅರಸರೊಂದಿಗೆ ಇವರು ಶರೀರಸಂಬಂಧವನ್ನು ಬೆಳೆಸಿದ್ದರು. ಇದರಿಂದ ಅವರು ಎಷ್ಟು ಪ್ರಬಲರಾಗಿದ್ದರೆಂಬುದು ವ್ಯಕ್ತವಾಗುತ್ತದೆ. ಗಂಗರು ಮೈಸೂರಿನ ದಕ್ಷಿಣ ಮತ್ತು ಪೂರ್ವಭಾಗಗಳಲ್ಲಿ ಆಳುತ್ತಿದ್ದರು. ಈ ಕಾಲದ ಇವರ ಇತಿಹಾಸವು ಹೆಚ್ಚಾಗಿ ತಿಳಿದಿಲ್ಲ. ತಿಳಿದುಬಂದಿರುವ ವಿಷಯಗಳನ್ನು

[1] *Ep. Ind.*, Vol. XI, p. 231.

[2] *Arch Sur. W. India*, Vol. IV, pp. 124 ff.

ಮುಂದೆ ಗಂಗರ ಪ್ರಕರಣದಲ್ಲಿ ಹೇಳುತ್ತೇವೆ. ಅಂತು ೪ ನೆಯ ಶತಮಾನದಲ್ಲಿ[1] ಮಯೂರಶರ್ಮನು ಕದಂಬ ರಾಜ್ಯವನ್ನು ಸ್ಥಾಪನೆಮಾಡುವಾಗ ಪಲ್ಲವರಲ್ಲದೆ ಒಂದೆಡೆಯಲ್ಲಿ ಕೋಲಾರದ ಗಂಗರೂ ಮತ್ತೊಂದೆಡೆಯಲ್ಲಿ ವಾಕಾಟಕರೂ ಶಾಲಂಕಾಯನರೂ ನೆರೆಹೊರೆಯ ರಾಜ್ಯಗಳನ್ನಾಳುತ್ತಿದ್ದರು.

ಈ ಪ್ರಾಚೀನ ಕಾಲದಲ್ಲಿಯ ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳನ್ನು ಕಂಡುಹಿಡಿಯಲು ಸಾಕಾದಷ್ಟು ಸಾಧನಗಳಿಲ್ಲ. ಶಾಸನಗಳಿಂದಲೇ ಶಕ್ಯವಾದ ಸಂಗತಿಗಳನ್ನು ತಿಳಿದುಕೊಳ್ಳಬೇಕಾಗಿದೆ. ಮಳವಳ್ಳಿಯ ಶಾಸನದಲ್ಲಿ ಸಾತಕರ್ಣಿಯು ಕೌಂಡಿನ್ಯಗೋತ್ರದ ಕೊಂಡಮಾನನೆಂಬ ಬ್ರಾಹ್ಮಣನಿಗೆ ಭೂದಾನಮಾಡಿದನೆಂದು ಹೇಳಿರುವುದನ್ನು ಮೇಲೆಯೇ ತಿಳಿಸಿದ್ದೇವೆ. ಇದೇ ರಾಜನ ಬನವಾಸಿ ಲಿಪಿಯಿಂದ ಅವನ ಮಗಳು ಒಂದು ಬೌದ್ಧವಿಹಾರವನ್ನು ಕಟ್ಟಿಸಿಕೊಟ್ಟಂತೆ ತಿಳಿದಿದೆ. ಈ ಶಾಸನಗಳು ಕದಂಬರಾಜ್ಯಸ್ಥಾಪನೆಯ ಕಾಲದವಲ್ಲವಾದರೂ ಈ ಕಾಲಕ್ಕೆ ಸುಮಾರು ಅರ್ಧ ಶತಮಾನಕ್ಕೆ ಮೊದಲು ಹುಟ್ಟಿದ್ದುವಾದುದರಿಂದ ಆಗಿನ ಪರಿಸ್ಥಿತಿಯಲ್ಲಿ ಈ ಅಲ್ಪಾವಧಿಯಲ್ಲಿ ಹೆಚ್ಚು ವ್ಯತ್ಯಾಸವಾಗಿರಲಿಲ್ಲವೆಂದು ಭಾವಿಸಿದರೆ ತಪ್ಪಾಗಲಾರದು.[2] ಆದುದರಿಂದ ಈ ಕಾಲದಲ್ಲಿ ವೈದಿಕಧರ್ಮ ಬೌದ್ಧಧರ್ಮಗಳೆರಡೂ ಪ್ರಚಾರದಲ್ಲಿದ್ದುವೆಂದು ಹೇಳಬಹುದು. ಹಿರೇಹಡಗಲಿಯ ಶಾಸನದಲ್ಲಿ ಪಲ್ಲವರಾಜನಾದ ಶಿವಸ್ಕಂದವರ್ಮನು ತನ್ನ ತಂದೆಯಾದ ಮಹಾರಾಜ ಬಪ್ಪಸ್ವಾಮಿಯು ಹಿಂದೆ ಕೊಟ್ಟಿದ್ದ ಬ್ರಾಹ್ಮಣ ದತ್ತಿಯನ್ನು ಸ್ಥಿರೀಕರಿಸಿದನೆಂದು ಹೇಳಿದೆ. ಮಧ್ಯಹಿಂದೂಸ್ಥಾನದಲ್ಲಿ ಕದಂಬರ ನೆರೆರಾಜರಾಗಿದ್ದ ವಾಕಾಟಕರು ಬೌದ್ಧವಿಹಾರಗಳನ್ನು ನಿರ್ಮಿಸಿದರೆಂದು ಮೊದಲೇ ಹೇಳಿದ್ದೇವೆ.

ನಾಲ್ಕನೆಯ ಶತಮಾನದ ಪ್ರಸಿದ್ಧವಾದ ವಿದ್ಯಾಪೀಠಗಳಲ್ಲಿ ಪಲ್ಲವರ ರಾಜಧಾನಿಯಾಗಿದ್ದ ಕಂಚಿಯು ಒಂದಾಗಿತ್ತು. ಕದಂಬರಾಜರ ಮೂಲಪುರುಷನಾದ ಮಯೂರಶರ್ಮನು ವ್ಯಾಸಂಗಮಾಡುತ್ತಿದ್ದುದು ಈ ಪೀಠದಲ್ಲಿಯೇ. ಈ ಕಾಲದಲ್ಲಿ ಸಂಸ್ಕೃತ ಪ್ರಾಕೃತಗಳೆರಡೂ ಆಸ್ಥಾನ ಮತ್ತು ವ್ಯಾವಹಾರಿಕ ಭಾಷೆಗಳಾಗಿದ್ದುವೆಂದು ಹೇಳಬಹುದು. ಶಾಸನಗಳೆಲ್ಲವೂ ಇವೆರಡೇ ಭಾಷೆಗಳಲ್ಲಿರುವ ಕಾರಣ ದ್ರಾವಿಡಭಾಷೆಗಳು ಇನ್ನೂ ವಾಙ್ಮಯಕ್ಕೆ ತಕ್ಕ ಭಾಷೆಗಳಾಗಿರಲಿಲ್ಲವೆಂದು ಹೇಳಬೇಕಾಗುತ್ತದೆ. ಹೆಚ್ಚಾಗಿ ಲಿಪಿಗಳು

---

[1] ಪುಟ ೯–೧೦ ನೋಡಿರಿ.

[2] ಮಳವಳ್ಳಿಯ ಕದಂಬಲಿಪಿಯಲ್ಲಿ ಉಕ್ತನಾದ ಸಿವಖದವಮ್ಮನು ಬನವಾಸಿ ಲಿಪಿಯ ಸಾತಸಿವಖದನೇ ಆಗಿದ್ದರೆ ಇವೆರಡರ ಕಾಲಕ್ಕೂ ಇದ್ದ ಅಂತರವು ತೀರ ಸ್ವಲ್ಪ.

ಪ್ರಾಕೃತದಲ್ಲಿಯೇ ಇರುವುದರಿಂದ ಆಗ್ಗೆ ಸಾಮಾನ್ಯ ಜನರಿಗೂ ಪ್ರಾಕೃತವು ತಿಳಿಯುತ್ತಿದ್ದಿರಬೇಕು.

ಬನವಾಸಿಯಲ್ಲಿರುವ ವಿಣ್ಹುಕಡಚುಟುಕುಲಾನಂದ ಸಾತಕಣ್ಣಿಯ ಶಿಲಾ-ಶಾಸನದ ಮೇಲೆ ಬಹು ಸುಂದರವಾದ ನಾಗವೊಂದು ಕೆತ್ತಲ್ಪಟ್ಟಿದೆ. ಇದರಿಂದ ಕರ್ಣಾಟಕದಲ್ಲಿ ಶಿಲ್ಪಕಲೆಯು ಊರ್ಜಿತಸ್ಥಿತಿಯಲ್ಲಿದ್ದಿತೆಂದು ಹೇಳಬಹುದು. ರಾಜನ ಮಗಳು ದಾನಮಾಡಿದ ನಾಗವು ಇದೇ ಆಗಿದ್ದರೆ ಇದನ್ನು ಮಾಡಿದ ವಸು ಆಚಾರ್ಯ ಇದಮೋರಕ (ಇಂದ್ರಮಯೂರಕ)ನ ಶಿಷ್ಯನಾದ ನಟಕನು. ಕರ್ಣಾಟಕದಲ್ಲಿ ಕಾಣಬಹುದಾದ ಈ ಕಾಲದ ಕಟ್ಟಡಗಳಲ್ಲಿ ಪುರಾತನವಾದುದು ನಿಜಾಂ ಪ್ರಾಂತಕ್ಕೆ ಸೇರಿದ ನಲದುರ್ಗಾ ಜಿಲ್ಲೆಯ ತೇರ್ (ತಗರ) ನಗರದಲ್ಲಿಯ ವಿಕ್ರಮ ದೇವಾಲಯವು. ಇದು ಸುಮಾರು ಕ್ರಿ. ಶ. ೪ನೆಯ ಶತಮಾನದ್ದೆಂದೂ ಮೊದಲು ಇದು ಬೌದ್ಧವಿಹಾರವಾಗಿದ್ದು ಆ ಮೇಲೆ ಹಿಂದೂದೇವಾಲಯವಾಗಿರಬೇಕೆಂದೂ ಡಾ. ಕುಮಾರಸ್ವಾಮಿಯವರು ಅಭಿಪ್ರಾಯಪಟ್ಟಿದ್ದಾರೆ. ಇದು ಆಕಾರದಲ್ಲಿ ಅಜಂತೆ, ಕಾರ್ಲೆ ಮೊದಲಾದ ಸ್ಥಳಗಳಲ್ಲಿರುವ ಬೌದ್ಧಚೈತ್ಯಾಲಯಗಳನ್ನು ಹೋಲುತ್ತದೆ. ಆದರೆ ಅವುಗಳಂತೆ ಇದು ಬಂಡೆಯಲ್ಲಿ ಕೊರೆದು ಮಾಡಿದುದಲ್ಲ; ಇಟ್ಟಿಗೆಯಿಂದ ಕಟ್ಟಿದುದು.[1]

## ಕದಂಬರು

ಕದಂಬರು ಮೈಸೂರು ಪ್ರಾಂತದ ಶಿವಮೊಗ್ಗೆ ಜಿಲ್ಲೆಯ ತಾಳಗುಂದ (ತಾಳಗುಂದೂರ ಅಥವಾ ಸ್ಥಾಣಕುಂದೂರ) ದ ನಿವಾಸಿಗಳು. ಇವರು ಹಾರೀತಿಪುತ್ರರೂ ಮಾನವ್ಯಸಗೋತ್ರರೂ ಆದ ಬ್ರಾಹ್ಮಣರು. ವಿವಿಧ ಯಜ್ಞಯಾಗಗಳನ್ನು ಮಾಡಿ ಪುಣ್ಯವಿಶೇಷವನ್ನು ಸಂಪಾದನೆಮಾಡಿದವರು; ಷಟ್ಕರ್ಮನಿರತರು. ಇವರು ತಮ್ಮ ಮನೆಯ ಹತ್ತಿರ ಒಂದು ಕದಂಬ ವೃಕ್ಷವನ್ನು ಬೆಳೆಸಿದ್ದರು. ಆದರಿಂದಲೇ ಇವರ ವಂಶಕ್ಕೆ ಕದಂಬವಂಶವೆಂದು ಹೆಸರು ಬಂದಿತು. ಈ ವಂಶದಲ್ಲಿ ಹುಟ್ಟಿದ ಮಯೂರಶರ್ಮನೇ ಕದಂಬರಾಜ್ಯಸ್ಥಾಪಕನು.[2] ಇವನ ಹಿಂದೆ ಜಯಂತ (ಇವನಿಗೆ ತ್ರಿಲೋಚನ ಅಥವಾ ತ್ರಿನೇತ್ರ ಕದಂಬ ಎಂಬ ಹೆಸರೂ ಉಂಟು), ಮಧುಕೇಶ್ವರ, ಮಲ್ಲಿನಾಥ, ಚಂದ್ರವರ್ಮ ಎಂಬ ಈ ಮನೆತನದ ಅರಸರು ಆಳಿದರೆಂದೂ ಕಡೆಯವನಾದ ಚಂದ್ರವರ್ಮನಿಗೆ ೨ನೆಯ ಚಂದ್ರವರ್ಮ, ಪುರಂದರ ಎಂಬ ಇಬ್ಬರು ಮಕ್ಕಳಿದ್ದರೆಂದೂ ಈ ೨ನೆಯ

[1] *History of Indian and Indonesiam Art*, p. 77.

[2] ತಾಳಗುಂದ ಶಾಸನ; *Ep. Ind.*, Vol. VIII, pp. 24ff.

ಚಂದ್ರವರ್ಮನ ಮಗನೇ ಮಯೂರವರ್ಮ (ಮಯೂರಶರ್ಮ) ನೆಂದೂ ಕ್ರಿ. ಶ. ೧೧ನೆಯ ಶತಮಾನದ ಲಿಪಿಗಳು ಹೇಳುತ್ತವೆ.[1] ಈ ಅರಸರ ಹೆಸರುಗಳು ಕದಂಬರಾಜ್ಯಸ್ಥಾಪನಾನಂತರ ಆರು- ಏಳು ಶತಮಾನಗಳವರೆಗೆ ಎಲ್ಲಿಯೂ ಕಾಣಬರುವದಿಲ್ಲವಾದುದರಿಂದ ಇವುಗಳಲ್ಲಿ ತಥ್ಯಾಂಶವು ಎಷ್ಟಿದೆಯೆಂಬುದನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ಕದಂಬರ ಶಾಸನಗಳಲ್ಲಿ "ಪ್ರತಿಕೃತ ಸ್ವಾಧ್ಯಾಯ ಚರ್ಚಾಪಾರಾಣಾಂ" ಎಂದು ಇವರ ವರ್ಣನೆಯಿದೆ. "ಪ್ರತಿಕೃತಸ್ವಾಧ್ಯಾಯ ಚರ್ಚಾಪಾರ" ಎಂದರೆ ಶ್ರುತಿಗಳ ಅಧ್ಯಯನವನ್ನು ಕ್ರಮವಾಗಿ ಮಾಡುವುದರಲ್ಲಿ ಪರಿಣಿತವೆಂದರ್ಥ (ಪ್ರತಿ ಪ್ರತ್ಯೇಕಂ ಕೃತಾ ಅನುಷ್ಠಿತಾ ಯಾ ಸ್ವಾಧ್ಯಾಯಸ್ಯ ಚರ್ಚಾ ಉಕ್ತ್ಯನಂತರಂ ಉಕ್ತಿಃ ತಾಂ ಪಾರಯಂತಿ ಇತಿ).[2] ಇದರಿಂದಲೂ ಇವರು ಬ್ರಾಹ್ಮಣರೆಂದೇ ವ್ಯಕ್ತವಾಗುತ್ತದೆ.[3] ಐದನೆಯ ಶತಮಾನದ ತಾಳಗುಂದದ ಲಿಪಿಯಲ್ಲಿ ಕದಂಬರು ತಾಣಗುಂದೂರ ನಿವಾಸಿಗಳೆಂದು ಹೇಳಿರುವುದರಿಂದ ಇವರು ಕರ್ಣಾಟಕ ದೇಶದವರೇ ಎಂಬುದುರಲ್ಲಿ ಸಂದೇಹವಿಲ್ಲ.

---

[1] ಇದೇ ಕಾಲದ ಗೋವೆಯ ಕದಂಬರ ಲಿಪಿಗಳಲ್ಲಿ ಕದಂಬರ ಮೂಲಪುರುಷನಾದ ತ್ರಿಲೋಚನ ಕದಂಬ (ಜಯಂತ) ನು ತ್ರಿಪುರಾಸುರ ಸಂಹಾರಾನಂತರ ಶಿವನ ಹಣೆಯಿಂದ ಕದಂಬಮರವೊಂದರ ಬುಡದಲ್ಲಿ ಬಿದ್ದ ಬೆವರಿನಿಂದ ಹುಟ್ಟಿದನೆಂದು ಹೇಳಿದೆ. ಆದರೆ ಹಾನಗಲ್ಲು ಮನೆತನದ ರಾಜರ ಶಾಸನಗಳು ಮುಕ್ಕಣ್ಣ ಕದಂಬನು ಶಿವಭೂದೇವಿಯರಿಗೆ ಜನಿಸಿದ ಪುತ್ರನೆಂದು ಹೇಳುತ್ತವೆ. ಪರಶುರಾಮನು ಹೈಗತುಳುನಾಡುಗಳನ್ನು ನಿರ್ಮಿಸಿದ ಕೆಲವು ವರ್ಷಗಳ ಬಳಿಕ ಪಾರ್ವತೀಪರಮೇಶ್ವರರು ಪಶ್ಚಿಮಘಟ್ಟಕ್ಕೆ ಸೇರಿದ ಸಹ್ಯಾದ್ರಿಗೆ ಬಂದು ಒಂದು ಕದಂಬವೃಕ್ಷದ ಕೆಳಗೆ ಕ್ರೀಡಿಸುವಾಗ ಒಂದು ಗಂಡು ಶಿಶುವು ಹುಟ್ಟಿತೆಂದೂ ಆದರಿಂದ ವಂಶಕ್ಕೆ ಕದಂಬ ಎಂಬ ಹೆಸರು ಬಂದಿತೆಂದೂ ಒಂದು ಐತಿಹ್ಯವುಂಟು. ಈ ಕಥೆಗಳಲ್ಲಿ ಹೀಗೆ ವ್ಯತ್ಯಾಸಗಳಿರುವುದರಿಂದಲೂ ಇವೆಲ್ಲವೂ ಕದಂಬ ರಾಜ್ಯಸ್ಥಾಪನೆಯ ತರುವಾಯ ಬಹುಕಾಲವಾದ ಮೇಲೆ ಕಂಡುಬರುವುದರಿಂದಲೂ ಇವುಗಳಲ್ಲಿ ನಂಬಿಕೆಗರ್ಹವಾದ ವಿಷಯಗಳು ಇವೆಯೋ ಇಲ್ಲವೋ ಹೇಳುವುದಕ್ಕಾಗುವುದಿಲ್ಲ.

[2] *Ep. Ind.*, Vol. VIII, p. 48, note 4. ಕೀಲ್ಹಾರ್ನರು ಬೇರೆ ಅರ್ಥವನ್ನು ಕೊಟ್ಟಿದ್ದಾರೆ. "ಸ್ವಾಧ್ಯಾಯಚರ್ಚೆಯ ಬದಲು ದುಷ್ಟನಿಗ್ರಹ ಶಿಷ್ಟಪರಿಪಾಲನೆಯೇ ಮುಖ್ಯವೆಂದು ತಿಳಿದಿದ್ದವರು" ಎಂದು ಅದರ ತಾತ್ಪರ್ಯ (*Ep. Ind.*, Vol.VI, p. 15).

[3] ಕೆಲ ಪಂಡಿತರು ಇವರು ಬ್ರಾಹ್ಮಣರಲ್ಲವೆಂದು ಬರೆಯುತ್ತಾರೆ. ಆದರೆ ಇದು ಸರಿಯಲ್ಲ. 'ಅಹೋ ಬತ ಕ್ಷತ್ರಾತ್ಪರಿಪೇಲವಾ ವಿಪ್ರತಾ' ಎಂಬ ಮಯೂರಶರ್ಮನ ಉದ್ಗಾರದಿಂದ ಅವನು ವಿಪ್ರನೆಂದೇ ಧೃಢವಾಗುತ್ತದೆ. ಶರ್ಮ ಎಂಬ ಉಪಪದವನ್ನು ಬ್ರಾಹ್ಮಣರಲ್ಲದೆ ಅನ್ಯರು ಧರಿಸುತ್ತಿದ್ದಿಲ್ಲವೆಂಬುದನ್ನು ಜ್ಞಾಪಕದಲ್ಲಿಡಬೇಕು. (ಮನುಸ್ಮೃತಿ: ಅಧ್ಯಾಯ. ೨, ಶ್ಲೋಕ ೩೨)

ಇದುವರೆಗೆ ಸಿಕ್ಕಿರುವ ಈ ವಂಶದ ಅರಸರ ಲಿಪಿಗಳೆಲ್ಲವೂ (ಪ್ರಾಕೃತ ಭಾಷೆಯಲ್ಲಿ ಬರೆದಿರುವ ಚಂದ್ರವಳ್ಳಿ ಮಳವಳ್ಳಿ ಶಾಸನಗಳನ್ನು ಬಿಟ್ಟು) ಸಂಸ್ಕೃತಭಾಷೆಯಲ್ಲಿಯೇ ಇರುತ್ತವೆ. ಇವು ಇವರ ಪ್ರಶಸ್ತಿಯನ್ನು ಈ ರೀತಿಯಾಗಿ ಕೊಡುತ್ತವೆ—"ಸ್ವಾಮಿ ಮಹಾಸೇನ ಮಾತೃಗಣಾನುಧ್ಯಾತಾಭಿಷಿಕ್ತಾನಾಂ ಮಾನವ್ಯಸಗೋತ್ರಾಣಾಂ ಹಾರಿತೀಪುತ್ರಾಣಾಂ ಆಂಗಿರಸಾಂ ಪ್ರತಿಕೃತ ಸ್ವಾಧ್ಯಾಯ ಚರ್ಚಾಪಾರಾಣಾಂ ಸದ್ಧರ್ಮಸದಂಬಾನಾಂ ಕದಂಬಾನಾಂ" (ಸ್ವಾಮಿ ಮಹಾಸೇನ ಮತ್ತು ಮಾತೃಗಳನ್ನು ಧ್ಯಾನಮಾಡಿ ಅಭಿಷಿಕ್ತರಾದವರೂ ಮಾನವ್ಯಸಗೋತ್ರರೂ ಹಾರಿತೀಪುತ್ರರೂ ಶ್ರುತಿಗಳ ಅಧ್ಯಯನದಲ್ಲಿ ನಿರತರೂ ಸದ್ಧರ್ಮಾಚರಣೆಗೆ ತವರುಮನೆಯಂತೆ ಇದ್ದವರೂ ಆದ ಕದಂಬರು). ಇವರ ತಾಮ್ರಪಟ್ಟಿಕೆಗಳ ಮೊಹರುಗಳ ಮೇಲೆ ಸಿಂಹ-ಲಾಂಛನವಿರುತ್ತದೆ.

ಪಲ್ಲವರಿಂದ ಕದಂಬರು ರಾಜ್ಯವನ್ನು ಸಂಪಾದಿಸಿದರೆಂದು ಮೇಲೆ ಹೇಳಿದ್ದೇವೆ. ಮೃಗೇಶವರ್ಮನ ಹಲಸಿ ಮತ್ತು ದೇವಗಿರಿ ತಾಮ್ರಶಾಸನಗಳಲ್ಲಿ[1] ಸಂವತ್ಸರಗಳು ಪೌಷ ಸಂವತ್ಸರವೆಂದೂ ವೈಶಾಖ ಸಂವತ್ಸರವೆಂದೂ ಚಾಂದ್ರಮಾನ ತಿಂಗಳುಗಳ ಹೆಸರಿನಿಂದ ಕರೆಯಲ್ಪಟ್ಟಿವೆ, ಮತ್ತು ತಿಂಗಳ ಪಕ್ಷಗಳನ್ನು ಹೇಳದೆ ವರ್ಷಋತು ಎಂಟನೆಯ ಪಕ್ಷ ಎಂದು ಮೊದಲಾಗಿ ಋತುಪಕ್ಷಗಳನ್ನು ಹೇಳಿದೆ. ಈ ರೀತಿ ಕಾಲಗಣನೆಮಾಡುವ ಪದ್ಧತಿಯು ಕ್ರಿ. ಶ. ೫ನೆಯ ಶತಮಾನದ ಮೊದಲಿನಲ್ಲಿದ್ದಿತೆಂದು ಬರ್ಜೆಸ್, ಸುಯೆಲ್ ಮೊದಲಾದ ಪಂಡಿತರು ಅಭಿಪ್ರಾಯಪಡುತ್ತಾರೆ.[2] ಆದುದರಿಂದ ಮೃಗೇಶವರ್ಮನೂ ಅವನ ಹಿಂದಿನ ಅರಸರೂ ೫ನೆಯ ಶತಮಾನ ಮತ್ತು ಅದಕ್ಕೆ ಹಿಂದೆ ಇದ್ದರೆಂದು ಹೇಳಬೇಕಾಗುತ್ತದೆ. ಮಳವಳ್ಳಿಯಲ್ಲಿರುವ ಕದಂಬರ ಪ್ರಾಕೃತ ಶಾಸನವು ಕ್ರಿ. ಶ. ೪ನೆಯ ಶತಮಾನದ ಪ್ರಾರಂಭದಲ್ಲಿ ಹುಟ್ಟಿರಬೇಕೆಂಬುದಕ್ಕೆ ಕಾರಣಗಳುಂಟು. ನಾಲ್ಕನೆಯ ಶತಮಾನದವರೆಗಿನ ಶಾಸನಗಳೆಲ್ಲವೂ ಪ್ರಾಕೃತ ಭಾಷೆಯಲ್ಲಿಯೇ ಇವೆ. ಮ್ಯಾಕದೋನಿ ಮಳವಳ್ಳಿಗಳ ಸಾತವಾಹನರ ಲಿಪಿಗಳೂ ಮೈದುವೋಲು ಹಿರೇಹಡಗಲಿಗಳ ಪಲ್ಲವಶಾಸಸಗಳೂ ಪ್ರಾಕೃತ ಭಾಷೆಯವು. ಅವು ಕ್ರಿ. ಶ. ೩ನೆಯ ಶತಮಾನ ೪ನೆಯ ಶತಮಾನಗಳ ಮಧ್ಯದಲ್ಲಿ ಹುಟ್ಟಿರಬೇಕೆಂದು ಹೊಸಕೋಟೆ ಕೃಷ್ಣಶಾಸ್ತ್ರಿಗಳು ಸಿದ್ಧಮಾಡಿದ್ದಾರೆ. ಹಿರೇಹಡಗಲಿಯ ಶಾಸನದ ಶಿವಸ್ಕಂದವರ್ಮನು ಸುಮಾರು ೪ನೆಯ ಶತಮಾನದ ಅವಧಿಯಲ್ಲಿ ಇದ್ದಿರ

---

[1] *Ind. Ant.*, Vols. p. 35 and VI, p. 24.

[2] R. Sewell: *The Siddhhāntas and the Indian Calender.*



(Plate 1) ಬಾದಾಮಿಯ ಹತ್ತಿರ ರಾಮತೀರ್ಥದ ಗುಡ್ಡದಲ್ಲಿದ್ದ ಪ್ರಾಗೈತಿಹಾಸಿಕ ಕಲ್ಮನೆ

ಬೇಕೆಂದು ಅವರು ತೋರಿಸಿದ್ದಾರೆ.[1] ಈ ಶಾಸನದಿಂದ ಸಾತಾಹನಿರಟ್ಟವು ಅಂದರೆ ಬಳ್ಳಾರಿಜಿಲ್ಲೆಯ ದಕ್ಷಿಣಭಾಗವು ಇವನ ವಶದಲ್ಲಿತ್ತೆಂದು ತಿಳಿಯುತ್ತದೆ. ಮಯೂರಶರ್ಮನು ಪಶ್ಚಿಮ ಸಮುದ್ರದಿಂದ ಶ್ರೀಶೈಲದವರೆಗಿದ್ದ ದೇಶವನ್ನು ಪಲ್ಲವರಿಂದ ತೆಗೆದುಕೊಂಡಾಗ ಈ ಭಾಗವು ಅವನ ಹಸ್ತಗತವಾಗಿರಬೇಕು. ಅಂದರೆ ೪ನೆಯ ಶತಮಾನದ ಪ್ರಾರಂಭದಲ್ಲಿ ಪಲ್ಲವರ ವಶದಲ್ಲಿದ್ದ ಬಳ್ಳಾರಿ ಜಿಲ್ಲೆಯ ಭಾಗವು ಅಲ್ಲಿಂದಾಚೆಗೆ ಕೆಲವು ವರ್ಷಗಳಲ್ಲಿ ಕದಂಬರ ಕೈವಶವಾಗಿರಬೇಕು. ಸುಮಾರು ಕ್ರಿ. ಶ. ೩೫೦ರಲ್ಲಿ ಕದಂಬರು ಪಲ್ಲವರಿಂದ ಅವರ ರಾಜ್ಯದ ಕೆಲಭಾಗಗಳನ್ನು ಕಿತ್ತುಕೊಂಡಿರಬಹುದೆಂದು ಈ ಪಂಡಿತರು ಅಭಿಪ್ರಾಯಪಟ್ಟಿದ್ದಾರೆ.[2] ಆದುದರಿಂದ ಕದಂಬರಾಜ್ಯಸ್ಥಾಪನೆಯು ಕಾಲವು ೪ನೆಯ ಶತಮಾನದ ಪ್ರಾರಂಭ ಅಥವಾ ಮಧ್ಯವೆಂದಂತಾಯಿತು. ಹರಿವರ್ಮನ ಸಂಗೊಳ್ಳಿ ತಾಮ್ರಶಾಸನವು ಅವನ ಆಳ್ವಿಕೆಯ ಎಂಟನೆಯ ವರ್ಷದ ಆಶ್ವಿನ ಮಾಸದ ಅಮಾವಾಸ್ಯೆ ವಿಷುವದ ದಿನ ಹುಟ್ಟಿದುದು. ಕದಂಬರ ರಾಜ್ಯವು ಕ್ರಿ.ಶ. ೬ನೆಯ ಶತಮಾನದಲ್ಲಿ ಚಾಳುಕ್ಯರ ಕೈಸೇರಿದುದರಿಂದ ಆ ಮನೆತನದ ಕಡೆಯ ಅರಸನಾದ ಹರಿವರ್ಮನು ೬ನೆಯ ಶತಮಾನದಲ್ಲಿದ್ದನೆನ್ನಬೇಕು. ಶಾಸನದಲ್ಲಿ ನಿರ್ದಿಷ್ಟವಾದ ಕಾಲಾಂಗಗಳು ಈ ೬ನೆಯ ಶತಮಾನದಲ್ಲಿ ೫೦೬, ೫೨೬, ೫೪೫ ಈ ವರ್ಷಗಳಲ್ಲಿ ಕಲೆತಿದ್ದವು. ಇವುಗಳಲ್ಲಿ ಮೊದಲನೆಯದಾದ ೫೦೬ನೆಯ ಇಸವಿಯಲ್ಲಿ ಹರಿವರ್ಮನು ಇದ್ದಿರಲಾರನಾದುದರಿಂದ ಉಳಿದ ಎರಡು ವರ್ಷಗಳಲ್ಲಿ ೫೨೬ನೆಯ ಇಸವಿ ಸೆಪ್ಟೆಂಬರ್ ೨೨ ಮತ್ತು ೫೪೫ನೆಯ ಇಸವಿ ಸೆಪ್ಟೆಂಬರ ೨೧ ಈ ದಿವಸಗಳಲ್ಲಿ ಮಾತ್ರ ಈ ಅಂಗಗಳು ಕೂಡಿದ್ದವು. ಅಶ್ವಮೇಧಯಾಜಿ ಕೃಷ್ಣವರ್ಮನ ಅಂದರೆ ಕದಂಬರ ೧ನೆಯ ಕೃಷ್ಣವರ್ಮನ ತಂಗಿಯನ್ನು ತಲಕಾಡಿನ ಗಂಗಮನೆತನದ ೩ನೆಯ ಮಾಧವನು ಮದುವೆಯಾದುದರಿಂದ ಕ್ರಿ. ಶ. ೪೮೦ರಿಂದ ೪೯೫ರ ವರೆಗೆ ಆಳಿದ[3] ಈ ಮಾಧವನೂ ಕೃಷ್ಣವರ್ಮನೂ ಸಮಕಾಲೀನರಾಗಿದ್ದಿರಬೇಕು. ಹರಿವರ್ಮನು ಕೃಷ್ಣವರ್ಮನಿಂದಾಚೆಗೆ ಮೂರನೆಯ ತಲೆಯವನು. ಒಂದು ತಲೆಗೆ ಸುಮಾರು ಇಪ್ಪತ್ತೈದು ವರ್ಷಗಳ ಅವಧಿಯನ್ನು ಕೊಟ್ಟರೆ ಹರಿವರ್ಮನ ಎಂಟನೆಯ ವರ್ಷವು ಕ್ರಿ. ಶ. ೬ನೆಯ ಶತಮಾನದ ಮಧ್ಯದಲ್ಲಿ ಬೀಳುವುದು. ಅಂದರೆ ಮೇಲೆ ಹೇಳಿದ ಮೂರು ವರ್ಷಗಳಲ್ಲಿ ಕ್ರಿ. ಶ. ೫೪೫ ಅವನ ಎಂಟನೆಯ ವರ್ಷವೆಂದು ತಿಳಿಯುವುದು ಸಮಂಜಸ. ಆದುದರಿಂದ ಇವನು ಕ್ರಿ. ಶ. ೫೩೮ರಲ್ಲಿ ಪಟ್ಟಕ್ಕೆ ಬಂದಿರಬೇಕು. ಹರಿವರ್ಮನಿಂದ ಹಿಂದಕ್ಕೆ ಸರಾಸರಿ

[1] *Ep. Ind.*, Vol. XV, pp. 247 and 248.
[2] *Ibid.*, p. 248.
[3] ಗಂಗರ ಪ್ರಕರಣವನ್ನು ನೋಡಿರಿ.

ತಲೆಗೆ ಇಪ್ಪತ್ತೈದು ವರ್ಷಗಳಂತೆ ಲೆಕ್ಕಹಾಕಿದರೆ ಕಾಕುಸ್ಥವರ್ಮನ ಕಾಲವು ಕ್ರಿ. ಶ. ೪೨೫–೪೫೦ ಎಂದು ನಿರ್ಣಯವಾಗುತ್ತದೆ.[1] ಈ ಕಾಕುಸ್ಥವರ್ಮನು ಯುವರಾಜನಾಗಿದ್ದಾಗ 'ಸ್ವವೈಜಯಿಕ' ಎಂಬತ್ತನೆಯ ವರ್ಷದಲ್ಲಿ ಹಲಸಿಯ ಶಾಸನವನ್ನು ಬರೆಸಿದ್ದಾನೆ. ಈ ಎಂಬತ್ತನೆಯ ವರ್ಷವು ಮಯೂರಶರ್ಮನು ಪಟ್ಟಕ್ಕೆ ಬಂದಂದಿನಿಂದ ಲೆಕ್ಕವಾಡಿದ್ದಿರಬೇಕೆಂದು ಫ್ಲೀಟರ ಅಭಿಪ್ರಾಯ.[2] ಇದರಿಂದಲೂ ಕದಂಬ ರಾಜ್ಯಸ್ಥಾಪನೆಯು ಸುಮಾರು ಕ್ರಿ. ಶ. ೪ನೆಯ ಶತಮಾನದ ಮಧ್ಯದಲ್ಲಿ ಆಗಿರಬೇಕೆಂದು ಸ್ಪಷ್ಟವಾಗುತ್ತದೆ.

ಚಾಳುಕ್ಯ ೨ ನೆಯ ಪುಲಕೇಶಿಯ ಐಹೊಳೆ ಶಾಸನದಲ್ಲಿ ಕೀರ್ತಿವರ್ಮನು 'ಕದಂಬಕದಂಬಕ' (ಕದಂಬರ ಸಮೂಹ)ವನ್ನು ಚದರಿಸಿದನೆಂದು ಹೇಳಿದೆ. ಇದರಿಂದ ಕದಂಬರ ಎರಡು ಮೂರು ಮನೆತನಗಳು ಒಂದೇ ಕಾಲದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಆಳುತ್ತಿದ್ದವೆಂದು ಗೊತ್ತಾಗುತ್ತದೆ. ಕದಂಬರ ಶಾಸನಗಳಿಂದಲೂ ಇದೇ ಅಭಿಪ್ರಾಯವು ದೃಢಪಡುತ್ತದೆ. ಶಾಂತಿವರ್ಮನ ತಮ್ಮನಾದ ೧ ನೆಯ ಕೃಷ್ಣವರ್ಮನ ರಾಜಧಾನಿಯು ತ್ರಿಪರ್ವತವಾಗಿತ್ತೆಂದು ಯುವರಾಜ ದೇವವರ್ಮನ ದೇವಗಿರಿಯ ಶಾಸನದಲ್ಲಿ ಹೇಳಿದೆ.[3] ಮೃಗೇಶವರ್ಮ, ಮಾಂಧಾತೃವರ್ಮ, ರವಿವರ್ಮ, ಹರಿವರ್ಮರಾಜರ ರಾಜಧಾನಿಗಳು ವೈಜಯಂತಿ (ಬನವಾಸಿ) ಪಲಾಸಿಕಾ (ಹಲಸಿಗೆ), ಉಚ್ಚಶೃಂಗಿ (ಉಚ್ಚಂಗಿದುರ್ಗ) ಗಳಾಗಿದ್ದವು.[4] ಶಾಂತಿವರ್ಮನ ಸಂತತಿಯ ಅರಸರು ತಮ್ಮ ಶಾಸನಗಳಲ್ಲಿ ಕೃಷ್ಣವರ್ಮನ ಸಂತತಿಯ ರಾಜರ ಹೆಸರನ್ನು ಹೇಳುವುದಿಲ್ಲ.[5] ಇದೇ ರೀತಿಯಾಗಿ ಕೃಷ್ಣವರ್ಮನ ಸಂತತಿಯವರ ಲಿಪಿಗಳಲ್ಲಿ ಅವರ ಪಿತೃಪಿತಾಮಹಾದಿಗಳ ಹೆಸರುಗಳು ಮಾತ್ರ ಉಕ್ತವಾಗಿವೆ.[6] ಬೆಣ್ಣೂರು ತಾಮ್ರಶಾಸನವು ೨ ನೆಯ ಕೃಷ್ಣವರ್ಮನು ಕದಂಬರ ಐದನೆಯ ಅರಸನೆಂದು ಹೇಳುತ್ತದೆ. ೧ ನೆಯ ಕೃಷ್ಣವರ್ಮನಿಂದ ಎಣಿಸಿದರೆ ಈ ಸಂತತಿಯ ಅರಸರಲ್ಲಿ ೨ ನೆಯ ಕೃಷ್ಣವರ್ಮನು ಐದನೆಯವನಾಗುತ್ತಾನೆ. ಇದರಿಂದ ಶಾಂತಿವರ್ಮನ ಸಂತತಿಯ ರಾಜರನ್ನು ಗಣನೆಗೆ ತೆಗೆದುಕೊಂಡಿಲ್ಲವೆಂಬುದು ಸ್ಪಷ್ಟವಾಗುತ್ತದೆ.[7] ಈ ಮೇಲಿನ ಕಾರಣಗಳಿಂದ ಕಾಕುಸ್ಥ

---

1 ಮುಂದೆ ೧೩-೧೪ನೆಯ ಪುಟಗಳನ್ನು ನೋಡಿ.

2 *Dynasties of the Kanarese Districts*, p. 291.

3 *Ind. Ant.* Vol. VII. pp. 33 ff.

4 *Ibid.*, p. 35; *Ep. Ind.*, Vol.VI, p. 14; *Ibid.*, Vol.VIII,p.146; *Ind. Ant.*, Vol.VI, p. 29; *Ibid*, pp. 30 and 31,

5 *Ibid.*, p. 25; *Ep. Ind.* Vol. XIV, p. 163.

6 *Ep. Ind.*, Vol. VI, p. 18; *Ep. Carn.*, Vol. V, p. 827.

7 ಫ್ಲೀಟರು 'ಪಂಚಮೋಲೋಕಪಾಲಃ' ಎಂಬ ಪದಗಳನ್ನು ಐದನೆಯ ದಿಕ್ಪಾಲಕ

ವರ್ಮನನಂತರ ಶಾಂತಿವರ್ಮ ಕೃಷ್ಣವರ್ಮರು ಕದಂಬರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಸ್ವತಂತ್ರರಾಗಿ ಆಳತೊಡಗಿದರೆಂದು ಹೇಳಬೇಕಾಗುತ್ತದೆ. ಶಿವ-ಮೊಗ್ಗೆಯ ತಾಮ್ರಶಾಸನದಲ್ಲಿ ಕುಮಾರವರ್ಮ ಮಹಾರಾಜನ ಮಗನಾದ ಮಾಂಧಾತರಾಜನು ತನ್ನ ರಾಜಧಾನಿಯಾದ ಉಚ್ಛ್ರಂಗಿ (ಉಚ್ಚಂಗಿ ದುರ್ಗ) ಯಲ್ಲಿದ್ದಾಗ ಆತ್ರೇಯಗೋತ್ರದ ತ್ರಿಯಂಬಕಸ್ವಾಮಿ ಎಂಬ ಬ್ರಾಹ್ಮಣನಿಗೆ ಕೊಗ್ಗಿ, ಪಾಲ್ಗಟನಿ ಗ್ರಾಮಗಳಲ್ಲಿ ಭೂದಾನಮಾಡಿದನೆಂದು ಹೇಳಿದೆ.[1] ಮೇಲಿನ ಎರಡು ಕದಂಬ ಸಂತತಿಗಳಿಗೂ ಕುಮಾರವರ್ಮನಿಗೂ ಯಾವ ವಿಧವಾದ ಸಂಬಂಧವಿತ್ತೆಂಬುದು ತಿಳಿದಿಲ್ಲ. ಈ ಮಾಂಧಾತರಾಜನು ಕುಮಾರವರ್ಮನ ಮಗನಾದ ಕಾರಣ ಶಾಂತಿವರ್ಮನ ಮಗನಾದ ವಿಜಯಶಿವಮಾಂಧಾತೃವರ್ಮನಿಂದ ಭಿನ್ನನಾಗಿರಬೇಕೆಂದು ಕೀಲ್ಹಾರ್ನರು ಅಭಿಪ್ರಾಯಪಟ್ಟಿದ್ದಾರೆ.[2] ಇದೊಂದು ಬೇರೆ ಸಂತತಿಯಾಗಿದ್ದರೆ ಕದಂಬರಲ್ಲಿ ಮೂರು ಬೇರೆ ಬೇರೆ ಶಾಖೆಗಳಿದ್ದವೆಂದು ಹೇಳಬೇಕಾಗುತ್ತದೆ.[3]

---

ನೆಂದು ಅರ್ಥಮಾಡಬೇಕೆಂದೂ ಇದರಿಂದ ಇವನು ಪ್ರಸಿದ್ಧನಾದ ರಾಜನೆಂದು ಹೇಳಬಹುದೇ ವಿನಾ ಈ ಮನೆತನದ ಅರಸರಲ್ಲಿ ಐದನೆಯವನೆಂದು ತಿಳಿಯುವುದು ಯುಕ್ತವಲ್ಲವೆಂದೂ ಹೇಳಿದ್ದಾರೆ (*J.R.A.S.*, 1905, p 291).

[1] *Mysore Archæological Report*, 1911, p. 31.

[2] ಮುಂದೆ ನೋಡಿರಿ.

[3] ಮೋರೆಸರ 'ಕದಂಬ ಕುಲ' ದಲ್ಲಿ ಕದಂಬರ ವಂಶಾವಳಿಯು ಹೀಗೆ ಕೊಡಲ್ಪಟ್ಟಿದೆ:–



ಕದಂಬ ಅರಸರಲ್ಲಿ ಯಾರು ಯಾರು ಎಷ್ಟುಕಾಲ ಆಳಿದರೆಂದು ನಿರ್ಧಾರವಾಗಿ ತಿಳಿದಿಲ್ಲ. ಅವರ ಶಾಸನಗಳಲ್ಲಿ ಶಕಸಂವತ್ಸರಗಳ ನಿರ್ದೇಶವಿಲ್ಲ. ಆದರೆ ರಾಜ್ಯಾಡಳಿತೆಯ ವರ್ಷಗಳು ನಿರೂಪಿಸಲ್ಪಟ್ಟಿವೆ. ಇವುಗಳನ್ನೂ ಹರಿವರ್ಮನು ಪಟ್ಟಕ್ಕೆ ಬಂದ ಕಾಲವನ್ನೂ ಆಧಾರವಾಗಿಟ್ಟುಕೊಂಡು ಈ ಮನೆತನದ ಅರಸರ ಕಾಲನಿರ್ಣಯವನ್ನು ಮಾಡುತ್ತೇವೆ. ಹರಿವರ್ಮನು ಕ್ರಿ. ಶ. ೫೩೮ರಲ್ಲಿ ಸಿಂಹಾಸನಾರೂಢನಾದನೆಂದು ಮೇಲೆಯೇ ಹೇಳಿದ್ದೇವೆ. ಇವನ ತಂದೆಯಾದ ರವಿವರ್ಮನ ಸಿರಸಿ ತಾಮ್ರಶಾಸನವು ಅವನ ಆಳಿಕೆಯ ಮೂವತ್ತೈದನೆಯ

---

ಈ ವಂಶವೃಕ್ಷವನ್ನು ಸಮರ್ಥಿಸುವುದಕ್ಕೆ ಗ್ರಂಥಕರ್ತರು ಈ ರೀತಿ ವಾದಿಸಿದ್ದಾರೆ:— ಮೃಗೇಶನು ಸ್ವಲ್ಪಕಾಲ ರಾಜ್ಯವಾಳಿದನು. ಅವನು ಸಾಯುವಾಗ ರವಿವರ್ಮನು ಅಲ್ಪವಯಸ್ಕನಾಗಿರಬೇಕು. ಇದನ್ನು ಸಾಧಿಸಿ ಕುಮಾರವರ್ಮನು (ಇವನು ಉಚ್ಚಶೃಂಗಿಯಲ್ಲಿ ರಾಜನಾಗಿದ್ದನು) ವೈಜಯಂತೀ ರಾಜ್ಯವನ್ನಾಕ್ರಮಿಸಿದನು. ಅವನ ಮಗನಾದ ಮಾಂಧಾತನು ವೈಜಯಂತಿಯಲ್ಲಿದ್ದು ಕೂಡಗೇರಿ ಶಾಸನವನ್ನು ಕೊಟ್ಟನು. ರವಿವರ್ಮನು ವಯಸ್ಸಿಗೆ ಬಂದಮೇಲೆ ಮಾಂಧಾತನನ್ನು ಕೊಂದು ತನ್ನ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನು. ಇತ್ತ ೧ನೆಯ ಕೃಷ್ಣವರ್ಮನು ತ್ರಿಪರ್ವತದಲ್ಲಿ ಸ್ವತಂತ್ರನಾಗಿ ಶಾಂತಿವರ್ಮನ ಮರಣಾನಂತರ ಆಳತೊಡಗಿದನು. ಇವನನ್ನು ನಣಕ್ಕಾಸಪಲ್ಲವನು ಸೋಲಿಸಿ ತನ್ನ ಮಾಂಡಲಿಕನನ್ನಾಗಿ ಮಾಡಿಕೊಂಡಿದ್ದನು. ಕೃಷ್ಣವರ್ಮನ ಮರಣಾನಂತರದಲ್ಲಿ ನಣಕ್ಕಾಸಪಲ್ಲವನ ಮಗನಾದ ಶಾಂತಿವರನು ವಿಷ್ಣುವರ್ಮನಿಗೆ ರಾಜ್ಯಾಭಿಷೇಕವನ್ನು ಮಾಡಿದನು. ವಿಷ್ಣುವರ್ಮನು ಮೃಗೇಶನ ಕಾಲದಲ್ಲಿ ವೈಜಯಂತೀ ರಾಜ್ಯಕ್ಕಧಿಪತಿಯಾಗಲು ಹವಣಿಸುತ್ತಿದ್ದನು. ಆದರೆ ಆಗ ಅವನ ಮನೋರಥವು ಈಡೇರಲಿಲ್ಲ. ಮುಂದೆ ರವಿವರ್ಮನು ರಾಜನಾದ ಮೇಲೆ ಆ ಸಮಯದಲ್ಲಿ ಪಲ್ಲವರಾಜನಾಗಿದ್ದ ಶಾಂತಿವರನ ಮಗ ಚಂಡದಂಡನ ಸಹಾಯದಿಂದ ವಿಷ್ಣುವರ್ಮನು ವೈಜಂತಿಯ ಅರಸನ ಮೇಲೆ ದಂಡೆತ್ತಿಹೋದನು. ಶೂರನಾದ ರವಿವರ್ಮನು ವಿಷ್ಣುವರ್ಮನನ್ನು ಕೊಂದು ಚಂಡದಂಡನನ್ನು ಸೋಲಿಸಿ ತ್ರಿಪರ್ವತ ರಾಜ್ಯವನ್ನಾಕ್ರಮಿಸಿದನು. ಇವನ ಕಾಲದಲ್ಲಿ ಕದಂಬರಾಜ್ಯದ ಮೂರು ಭಾಗಗಳು ಇವನ ಆಳ್ವಿಕೆಗೆ ಒಳಪಟ್ಟಿದ್ದವು. ಸಿಂಹವರ್ಮನು ಮಾಂಡಲಿಕನಾಗಿ ಆಳುತ್ತಿದ್ದಿರಬೇಕು. ಸ್ವತಂತ್ರನಾಗಿದ್ದರೂ ಎಲ್ಲಿಯೋ ಮೂಲೆಯಲ್ಲಿದ್ದಿರಬೇಕು. ರವಿವರ್ಮನ ಮಗನಾದ ಹರಿವರ್ಮನಿಗೆ ಸಂತಾನವಿಲ್ಲದುದರಿಂದ ೨ನೆಯ ಕೃಷ್ಣವರ್ಮನು ಇಡೀ ರಾಜ್ಯವನ್ನಾಕ್ರಮಿಸಿದನು. ಅಥವಾ ಸುಮಾರು ೫೪೭ರಲ್ಲಿ ಕೃಷ್ಣವರ್ಮನು ರವಿವರ್ಮನನ್ನು ಸೋಲಿಸಿ ವೈಜಂತಿಯನ್ನು ಆಕ್ರಮಿಸಿಕೊಂಡಿರಬೇಕು.

ಆದರೆ ಈ ಊಹೆಯು ಸಮಂಜಸವಾಗಿಲ್ಲ. ಇದರಲ್ಲಿ ಕಲ್ಪಿತಸಂಬಂಧಗಳೂ ಆಧಾರವಿಲ್ಲದೆ ಅಂಗೀಕೃತವಾದ ವಿಷಯಗಳೂ ಅನೇಕವಾಗಿವೆ. ಮಾಂಧಾತರಾಜನ ತಂದೆಯಾದ ಕುಮಾರವರ್ಮನು ಕಾಕುಸ್ಥನ ಮಗನೆಂದು ತಿಳಿಯಲು ಬಲವಾದ ಪ್ರಮಾಣಗಳಿಲ್ಲ. ರವಿವರ್ಮನು ಅಲ್ಪವಯಸ್ಕನಾಗಿದ್ದಾಗ ಕುಮಾರನು ಅವನ ರಾಜ್ಯವನ್ನಾಕ್ರಮಿಸಿದನೆಂದು ತಿಳಿಯುವುದು ಕೇವಲ ಊಹೆ. ರವಿವರ್ಮನ ತಾಯಿ ಕೈಕೇಯವಂಶದ ರಾಜಕುಮಾರಿ,



(Plate 2) ಬಾಚನಗುಡ್ಡದ ಪ್ರಾಗೈತಿಹಾಸಿಕ ಕಲ್ಮನೆ

ವರ್ಷದ್ದು.[4] ಇದೇ ಇವನ ಕೊನೆಯ ವರ್ಷವಾಗಿದ್ದರೆ ರವಿವರ್ಮನು ಕ್ರಿ. ಶ. ೫೦೩ರಿಂದ ೫೩೮ರ ವರೆಗೆ ಆಳಿರಬೇಕು. ಇವನ ಚಿಕ್ಕಪ್ಪನಾದ ಶಿವಮಾಂಧಾತ ರಾಜನ ಎರಡನೆಯ ವರ್ಷದ ಶಾಸನವು ದೊರೆತಿದೆ. ಇವನು ತನ್ನ ಅಣ್ಣನಾದ ಮೃಗೇಶವರ್ಮನ ನಂತರ ಆಳಿದುದರಿಂದ ಇವನ ಆಳಿಕೆಯು ಸ್ವಲ್ಪಕಾಲ ಎಂದರೆ ಸುಮಾರು ಐದು ಆರು ವರ್ಷಗಳು ನಡೆಯಿತೆಂದು ತಿಳಿಯಬಹುದು. ನಿರ್ಣಾಯಕ ಅಂಶಗಳಿಲ್ಲದಿರುವಾಗ ಸಾಮಾನ್ಯವಾಗಿ ಒಂದು ಆಳಿಕೆಗೆ ಇಪ್ಪತ್ತೈದು ವರ್ಷಗಳ ಕಾಲವನ್ನು ಕೊಡುವ ಸಾಂಪ್ರದಾಯವುಂಟು. ಅದರಂತೆ ಮೃಗೇಶವರ್ಮನು ಇಪ್ಪತ್ತೈದು ವರ್ಷಗಳು ರಾಜ್ಯಭಾರ ಮಾಡಿದ ನೆಂದು ತಿಳಿದರೆ ಶಿವಮಾಂಧಾತನು ಕ್ರಿ. ಶ. ೪೯೭ ರಿಂದ ೫೦೩ ರ ವರೆಗೂ ಮೃಗೇಶನು ೪೭೨ ರಿಂದ ೪೯೭ ರ ವರೆಗೂ ಆಳಿದರೆಂದು ಹೇಳಬಹುದು. ಈ ಗಣನೆ ಯಂತೆ ಮೃಗೇಶವರ್ಮನ ತಂದೆಯಾದ ಶಾಂತಿವರ್ಮನ ಆಳಿಕೆಯ ಕಾಲವು ೪೪೭–೪೭೨ ಆಗುತ್ತದೆ.

ವಿಷ್ಣುಗೋಪನ ಮಗನಾದ ಮಾಧವನಿಗೆ ೧ ನೆಯ ಕೃಷ್ಣವರ್ಮನ ತಂಗಿ ಯನ್ನು ಕೊಟ್ಟು ಮದುವೆಮಾಡಿದ್ದರೆಂದು ಗಂಗರ ಶಾಸನಗಳು ಹೇಳುತ್ತವೆ.

---

ವಿಷ್ಣುವರ್ಮನ ತಾಯಿಯೂ ಕೈಕೇಯ ವಂಶದವಳೇ. ಬಲವಾದ ಪ್ರಮಾಣಗಳಿಲ್ಲದೆ ರವಿವರ್ಮನು ವಿಷ್ಣುವರ್ಮನನ್ನು ಕೊಂದನೆಂದು ತಿಳಿಯುವುದು ಯುಕ್ತವಲ್ಲ. ವಿಷ್ಣುವರ್ಮನೂ ಪಲ್ಲವ ಚಂಡದಂಡನೂ ಕೂಡಿಕೊಂಡು ರವಿವರ್ಮನ ಮೇಲೆ ಯುದ್ಧವನ್ನು ಮಾಡಿದರೆಂದು ಹಲಸಿ ಶಾಸನದಲ್ಲಿ ಹೇಳಿಲ್ಲ. ನಣಕ್ಕಾಸಪಲ್ಲವನೂ ಶಾಂತಿವರ ಚಂಡ ದಂಡರೂ ತಂದೆ ಮಕ್ಕಳೆಂದು ಎಲ್ಲಿಯೂ ಉಕ್ತವಾಗಿಲ್ಲ. ರವಿವರ್ಮನು ಉಚ್ಚಶೃಂಗಿ ತ್ರಿಪರ್ವತಗಳ ರಾಜ್ಯಗಳನ್ನು ಆಕ್ರಮಿಸಿಕೊಂಡಾಗ ಸಿಂಹವರ್ಮನೂ ಅವನ ಮಗ ೨ನೆಯ ಕೃಷ್ಣವರ್ಮನೂ ( ಕ್ರಿ. ಶ. ೫೪೦–೪೭ರ ವರೆಗೆ ) ಎಲ್ಲಿ ಯಾವ ಅಧಿಕಾರದಿಂದ ಆಳುತ್ತಿದ್ದರು? ಶಾಸನಗಳಲ್ಲೆಲ್ಲ ಅವರು ಸ್ವತಂತ್ರರಾಜರಂತೆ ವರ್ಣಿತರಾಗಿದ್ದಾರೆ. ಮೃಗೇಶನ ತರುವಾಯ ಕದಂಬ ಮನೆತನದ ಮೂರು ಶಾಖೆಗಳಲ್ಲಿ ಪರಸ್ಪರ ಭ್ರಾತೃಕಲಹವೂ ಅರಸೊತ್ತಿಗೆಗಾಗಿ ಕೊಲೆಗಳೂ ನಡೆದಿದ್ದವೆಂದು ಕಲ್ಪಿಸುವುದು ಇತಿಹಾಸ ರಚನೆಯಲ್ಲಿ ಯುಕ್ತವಲ್ಲ.

[4] *Ep. Ind*, Vol. XVI, pp. 264 ff.

[5] " ವಿಜಯಶಿವಮಾಂಧಾತರಾಜನ ಕೂಡಗೇರಿ ಶಾಸನದ ಅಕ್ಷರಗಳು ದಕ್ಷಿಣದೇಶದ ಲಿಪಿಯ ಜಾತಿಗೆ ಸೇರಿದವು. ಪೆಟ್ಟಿಗೆಯ ಆಕೃತಿಯ ತಲೆಕಟ್ಟುಳ್ಳವು ( Box-headed ). ಅವು ಸಾಧಾರಣವಾಗಿ ಕದಂಬ ಶಾಸನಗಳಲ್ಲಿ ಮಹಾರಾಜ ಮೃಗೇಶವರ್ಮನ ಹಲಸಿ ಮತ್ತು ನಾಲ್ಕನೆಯ ವರ್ಷದ ದೇವಗೇರಿ ಶಾಸನಗಳ ಲಿಪಿಗಳನ್ನು ಹೋಲುತ್ತವೆ " ಎಂದು ಅದನ್ನು ಪ್ರಸಿದ್ಧಿಸಿದ ಕೀಲ್ಹಾರ್ನರು ಅಭಿಪ್ರಾಯಪಟ್ಟಿದ್ದಾರೆ ( *Ep. Ind.*, Vol. VI, p. 13 ). ಇವನ ಹೆಸರಿಗೆ ' ವಿಜಯಶಿವ' ಎಂಬ ಉಪಪದಗಳು ಜೋಡಿಸಲ್ಪಟ್ಟಿರು

ಈ ಮಾಧವನ ದೊಡ್ಡಪ್ಪನಾದ ಪೆನುಗೊಂಡೆಯ ಶಾಸನದ ಆಯ್ಯವರ್ಮನ ಮಗ ಮಾಧವನು ಕ್ರಿ. ಶ. ೪೬೦–೪೭೫ ರಲ್ಲಿ ಆಳುತ್ತಿದ್ದನೆಂದು ಗೊತ್ತಾಗಿದೆ.[6] ವಿಷ್ಣುಗೋಪನ ಆಳಿಕೆಯು ಐದೇ ವರ್ಷಗಳೆಂದು ತಿಳಿದು ಅವನ ಮಗನೂ ಕದಂಬ ೧ ನೆಯ ಕೃಷ್ಣವರ್ಮನ[7] ಭಾವಮೈದುನನೂ ಆದ ಮಾಧವನು ಕ್ರಿ. ಶ. ೪೮೦ ರಿಂದ ೫೧೫ ರ ವರೆಗೆ ಆಳಿದನೆನ್ನುವುದಕ್ಕೆ ಕಾರಣಗಳಿರುತ್ತವೆ.[8] ಆದುದರಿಂದ ಇವನ ಸಮಕಾಲೀನನಾದ ಕೃಷ್ಣವರ್ಮನು ಸುಮಾರು ಕ್ರಿ. ಶ. ೪೭೦–೫೧೫ರಲ್ಲಿ ತ್ರಿಪರ್ವತದಲ್ಲಿ ರಾಜ್ಯಭಾರಮಾಡುತ್ತಿರಬೇಕು. ಹೀಗೆ ಗಣನೆಮಾಡಿದರೂ ಕೂಡ ಇವನ ಅಣ್ಣನಾದ ಶಾಂತಿವರ್ಮನಿಗೆ ನಾವು ಕೊಟ್ಟಿರುವ ಕಾಲವು ಸರಿಯಾಗುತ್ತದೆ. ಶಾಂತಿವರ್ಮನ ಹಿಂದೆ ಕಾಕುಸ್ಥವರ್ಮ, ರಘು, ಭಗೀರಥ, ಕಂಗವರ್ಮ, ಮಯೂರಶರ್ಮ ರಾಜರು ಆಳಿದರು. ಅಣ್ಣತಮ್ಮಂದಿರಾದ ರಘು ಕಾಕುಸ್ಥವರ್ಮರಿಬ್ಬರೂ ರಾಜ್ಯಭಾರ ಮಾಡಿರುವುದರಿಂದ ಅವರಲ್ಲೊಬ್ಬರಿಗೆ ಇಪ್ಪತ್ತೈದು ವರ್ಷಗಳಿಗಿಂತ ಕಡಿಮೆ ಅಂದರೆ ಸುಮಾರು ಹದಿನೈದು ವರ್ಷಗಳ ಆಳಿಕೆಯನ್ನೂ ಉಳಿದವರೆಲ್ಲರಿಗೂ ವಾಡಿಕೆಯಂತೆ ಇಪ್ಪತ್ತೈದು ವರ್ಷಗಳನ್ನೂ ಕೊಡಬಹುದು. ಈ ಲೆಕ್ಕದಿಂದ ರಾಜ್ಯಸ್ಥಾಪಕನಾದ ಮಯೂರಶರ್ಮನ ಆಳಿಕೆಯ ಕೊನೆಯ ವರ್ಷವು ಕ್ರಿ. ಶ. ೩೫೭ ಆಗುತ್ತದೆ. ೧ನೆಯ ಕೃಷ್ಣವರ್ಮನ ಕಾಲವು ಸುಮಾರು ೪೭೦-೫೧೫ ಆಗಿರಬೇಕೆಂದು ಮೇಲೆ ಹೇಳಿದೆ. ಇವನ ಸಂತತಿಯವರ ಕಾಲಗಣನೆಯನ್ನು ಇದೇ ಪ್ರಕಾರ ಅಂದರೆ ತಲೆಗೆ ಇಪ್ಪತ್ತೈದು ವರ್ಷಗಳಂತೆ ಮಾಡಿದರೆ ೨ನೆಯ ಕೃಷ್ಣವರ್ಮನು ಕ್ರಿ. ಶ. ೫೪೫ರಲ್ಲಿ ಪಟ್ಟಕ್ಕೆ ಬಂದನೆಂದೂ ಇವನು ಹರಿವರ್ಮನ ಸಮಕಾಲೀನನೆಂದೂ ಹೇಳಬಹುದು. ೧ನೆಯ ಕೃಷ್ಣವರ್ಮನು ಗಂಗ ೩ನೆಯ ಮಾಧವನ ಸಮಕಾಲೀನನಾದುದರಿಂದ ಶಾಂತಿವರ್ಮನೂ ಇವನೂ ಒಂದೇ ಕಾಲದಲ್ಲಿ ಪ್ರತ್ಯೇಕ

---

ವುದರಿಂದಲೂ ಮಹಾರಾಜನಾಗಿ ತನ್ನ ಆಳಿಕೆಯ ಸಂವತ್ಸರಗಳನ್ನು ಗಣಿಸಿರುವುದರಿಂದಲೂ ಇವನು ರಾಜಮನೆತನದವನಾಗಿದ್ದಿರಬೇಕು. ಮತ್ತು ಮೃಗೇಶವರ್ಮ ರವಿವರ್ಮರ ಆಳಿಕೆಗಳ ಮಧ್ಯದಲ್ಲಿ ರಾಜ್ಯಸೂತ್ರಗಳನ್ನು ವಹಿಸಿರಬೇಕು ಆದುದರಿಂದ ವಂಶಾವಳಿಯಲ್ಲಿ ಈ ಮಾಧಾಂತ ರಾಜನನ್ನು ಮೃಗೇಶವರ್ಮನ ತಮ್ಮನೆಂದು ಗ್ರಹಿಸಿದ್ದೇವೆ.

[6] ಗಂಗರ ಪ್ರಕರಣದಲ್ಲಿ ನೋಡಿರಿ.

[7] ಡುಬ್ರಾಯಿಲರು ಈ ಕೃಷ್ಣವರ್ಮನು ೨ನೆಯ ಕೃಷ್ಣವರ್ಮನೆಂದು ಹೇಳುತ್ತಾರೆ. ಇದು ತಪ್ಪು. ಈ ವಿಷಯದ ಮೇಲಿನ ಚರ್ಚೆಯನ್ನು ಈ ಪ್ರಕರಣದ ಮುಂದಿನ ಭಾಗದಲ್ಲಿಯೂ ಗಂಗರ ಪ್ರಕರಣದಲ್ಲಿಯೂ ನೋಡಿರಿ.

[8] ಗಂಗರಾಜರ ಆಳಿಕೆಯ ಕಾಲನಿರ್ಣಯವನ್ನು ಮುಂದೆ ಗಂಗರ ಪ್ರಕರಣದಲ್ಲಿ ನೋಡಿರಿ.

ವಾಗಿ ಆಳುತ್ತಿದ್ದರೆಂದು ಹಿಂದೆಯೇ ತೋರಿಸಿದ್ದೇವೆ. ಹರಿವರ್ಮ ಶಾಂತಿವರ್ಮರ ನಡುವೆಯೂ ೨ನೆಯ ಕೃಷ್ಣವರ್ಮ ೧ನೆಯ ಕೃಷ್ಣವರ್ಮರ ನಡುವೆಯೂ ಮೂರು ತಲೆಗಳ ಅಂತರವಿರುವುದರಿಂದಲೂ ಶಾಂತಿವರ್ಮ ೧ನೆಯ ಕೃಷ್ಣವರ್ಮರು ಒಂದೇ ಕಾಲದಲ್ಲಿ ಆಳುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಚಾಲುಕ್ಯ ೧ನೆಯ ಕೀರ್ತಿವರ್ಮನು ಸೋಲಿಸಿದ ಕದಂಬರಾಜ ಮನೆತನಗಳು ಇವರಿಬ್ಬರವೇ ಆಗಿರಬೇಕು. ಕದಂಬರಾಜರ ಪೌರ್ವಾಪರ್ಯ ( Order of Succession ) ಆಳಿಕೆಯ ಕಾಲಗಳನ್ನು ತೋರಿಸುವ ವಂಶವೃಕ್ಷವನ್ನು ವಾಚಕರ ಸೌಕರ್ಯಕ್ಕಾಗಿ ಕೊಟ್ಟಿದೆ—

## ಕದಂಬರ ವಂಶವೃಕ್ಷ



ಕದಂಬರ ಮೂಲಪುರುಷನಾದ **ಮಯೂರಶರ್ಮನ** ಶಾಸನವು ಒಂದೇ ಒಂದು ಈಚೆಗೆ ಮೈಸೂರು ಪ್ರಾಕ್ತನ ವಿಮರ್ಶನಶಾಖೆಯ ಅಧಿಕಾರಿಗಳಾದ ಡಾ. ಎಂ. ಎಚ್. ಕೃಷ್ಣರವರಿಂದ ಕಂಡುಹಿಡಿಯಲ್ಪಟ್ಟಿದೆ. ಮೈಸೂರು ಸಂಸ್ಥಾನದ ಚಿತ್ರಕಲ್‌ದುರ್ಗದ ಪಶ್ಚಿಮಕ್ಕೆ ಹುಲೆಗೊಂದಿಯೆಂಬ ಕಂದಕವುಂಟು. ಇಲ್ಲಿ ಹಿಂದಕ್ಕೆ ಚಂದ್ರವಳ್ಳಿಯೆಂಬ ಪಟ್ಟಣವಿತ್ತೆಂದು ದಂತಕತೆಗಳನ್ನು ಹೇಳುತ್ತಾರೆ. ಇದರ ದಕ್ಷಿಣ ದಿಕ್ಕಿನಲ್ಲಿರುವ ಒಂದು ಬಂಡೆಗಲ್ಲಿನ ಮೇಲೆ ಈ ಪ್ರಸಿದ್ಧವಾದ ಶಾಸನವು ಕೊರೆಯಲ್ಪಟ್ಟಿದೆ. ಇದರಲ್ಲಿ " ತ್ರೈಕೂಟ, ಆಭೀರ, ಪಲ್ಲವ, ಪಾರಿಯಾತ್ರಕ, ಸಕಸ್ಥಾನ, ಸಯಿಂದಕ, ಪುನ್ನಾಟ, ಮೋಕರಿ ರಾಜರನ್ನು ಸೋಲಿಸಿದ (?) ಕದಂಬವಂಶದ ಮಯೂರಶರ್ಮನು (ಈ) ತಡಾಗವನ್ನು ಕಟ್ಟಿಸಿದನೆಂದು ಬರೆದಿದೆ.[1] ಈ ಶಾಸನದ ಭಾಷೆಯು ಪ್ರಾಕೃತ; ಲಿಪಿಯು ೩-೪ನೆಯ ಶತಮಾನದ್ದು. ಮಳವಳ್ಳಿಯ ಕದಂಬ ಪ್ರಾಕೃತ ಶಾಸನವೂ ಇವನದೇ ಆಗಿರಬೇಕೆಂದು ಡುಬ್ರಾಯಿಲರು ಬರೆದಿದ್ದಾರೆ. ಆದರೆ ಇದರಲ್ಲಿ ' ಉಕ್ತಂ ಖಂದೋ ' ಎಂದು ಹೇಳಿ ತದನಂತರ ' ಕದಂಬರು ಬ್ರಹ್ಮದೇಯಗಳನ್ನು ಕೊಡುವುದರಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದರೆಂಬ' ಅರ್ಥದ ಪ್ರಾಕೃತ ಶ್ಲೋಕವು ಕೊಡಲ್ಪಟ್ಟಿದೆ. ಈ ಶ್ಲೋಕವು ಈ ಶಾಸನದ ಕಾಲಕ್ಕೆ ಮೊದಲೇ ಕದಂಬರು ಬಹಳವಾಗಿ ಬ್ರಹ್ಮದೇಯಗಳನ್ನು ಕೊಟ್ಟಿದ್ದರೆಂಬುದನ್ನು ಸೂಚಿಸುತ್ತದೆ. ಆದುದರಿಂದ ಕದಂಬರಾಜ್ಯಸ್ಥಾಪಕನಾದ ಮಯೂರಶರ್ಮನ ವಂಶಜರಲ್ಲಿ ಪ್ರಾಕೃತ ಶಾಸನಗಳ ಕಾಲದಲ್ಲಿದ್ದ ಒಬ್ಬ ರಾಜನು ಈ ಶಾಸನವನ್ನು ಬರೆಸಿದನೆಂದು ಹೇಳಬೇಕಾಗುತ್ತದೆ. ಅದರಲ್ಲಿ ವೈಜಯಂತೀಪತಿಯೂ ಪ್ರತಿಕೃತ ಸ್ವಾಧ್ಯಾಯ ಚರ್ಚಾಪಾರನೂ ಆದ ಒಬ್ಬ ಕದಂಬರಾಜನು ದಾನಮಾಡಿದಂತೆ ಹೇಳಿದೆ. ಶಿವಸ್ಕಂದವರ್ಮನು ಹಿಂದಕ್ಕೆ ಮಳಪಳಿ ದೇವರಿಗೆ ಕೊಟ್ಟಿದ್ದ ಸಲಹಾಟವೀ ಮೊದಲಾದ ಹದಿಮೂರು ಹಳ್ಳಿಗಳ ದಾನವು ಅಂತರಿಸಿರಲು ಕಸಂಬ ರಾಜನು ತನ್ನ ಮೊದಲನೆಯ ವರ್ಷದಲ್ಲಿ ಅವುಗಳನ್ನು ಕೌಂಡಿನ್ಯಗೋತ್ರದ ಕೊಂಡಮಾನ ಕುಲತಿಲಕನಾದ ಶ್ರೀನಾಗದತ್ತನೆಂಬ ಬ್ರಾಹ್ಮಣನಿಗೆ ಕೊಟ್ಟು ಆ ದತ್ತಿಯನ್ನು ಪುನರುಜ್ಜೀವನಮಾಡಿದನೆಂದು ಬರೆದಿರುತ್ತದೆ. ಇದೇ ಶಾಸನದ ಮೇಲ್ಭಾಗದಲ್ಲಿರುವ ವಿಣ್ಹುಕಡ್ಡ ಚುಟುಕುಲಾನನ್ದ ಸಾತಕಣ್ಣಿರಾಜನ ಶಾಸನದಲ್ಲಿ ಅವನು ಸಲಹಾಟವಿಯನ್ನು ಕೌಂಡಿನ್ಯಗೋತ್ರದ ಕೊಂಡಮಾನನಿಗೆ ಬ್ರಹ್ಮದೇಯವಾಗಿ ಕೊಟ್ಟನೆಂದು ಹೇಳಿದೆ. ಇವನ ತರುವಾಯ ವೈಜಯಂತೀಪತಿ

[1] *Mysore Archæological Report,* 1929, p. 50. **ಈ ಶಾಸನವನ್ನು ಓದುವುದರಲ್ಲಿಯೂ ಅರ್ಥಕಲ್ಪನೆಯಲ್ಲಿಯೂ ಕೆಲವು ಸ್ಖಲಿತಗಳು ಇರುತ್ತವೆ.**

ಪತಿಯಾದ ಶಿವಸ್ಕಂದವರ್ಮನು ಇದಕ್ಕೆ ಬೇರೆ ಹನ್ನೆರಡು ಹಳ್ಳಿಗಳನ್ನು ಸೇರಿಸಿ ಕೊಟ್ಟಿರಬೇಕು. ಈ ದತ್ತಿಯು ಮಧ್ಯದಲ್ಲಿ ಅಂತರಿತವಾಗಿರಲು ಕದಂಬರಾಜನು ಅದೇ ಕೊಂಡಮಾನ ವಂಶಜರಿಗೆ ಆ ಗ್ರಾಮಗಳನ್ನು ತಿರುಗಿಕೊಟ್ಟಿರಬೇಕು.

ಇವೆರಡು ಪ್ರಾಚೀನ ಲಿಪಿಗಳಿಂದ ಮಯೂರಶರ್ಮನು ಹೇಗೆ ರಾಜ್ಯ ಸ್ಥಾಪನೆಮಾಡಿದನೆಂಬುದು ತಿಳಿಯುವುದಿಲ್ಲ. ಕಾಕುಸ್ಥವರ್ಮನ ತಾಳಗುಂದ ಶಾಸನದಲ್ಲಿ[1] ಈ ವಿಷಯವು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಮಯೂರ-ಶರ್ಮನು ತನ್ನ ಗುರುವಾದ ವೀರಶರ್ಮನೊಂದಿಗೆ, ಪಲ್ಲವರ ರಾಜಧಾನಿಯಾಗಿದ್ದ ಕಾಂಚೀ ಪಟ್ಟಣದ ಘಟಿಕಾಸ್ಥಾನದಲ್ಲಿ ಅಧ್ಯಯನಮಾಡಲಿಕ್ಕೆ ಹೋದನು. ಅಲ್ಲಿ ವ್ಯಾಸಂಗಮಾಡುತ್ತಿರುವಾಗ ಒಂದು ದಿನ ಪಲ್ಲವರ ಅಶ್ವ-ಮೇಧಯಾಗದ ಸಂಬಂಧವಾಗಿ ತೀವ್ರವಾದ ಕಲಹವುಂಟಾಗಲು ಮಯೂರ ಶರ್ಮನು ರೋಷಗೊಂಡವನಾಗಿ "ಅಯ್ಯೋ! ಈ ಕಲಿಯುಗದಲ್ಲಿ ಕ್ಷಾತ್ರ ತೇಜಸ್ಸಿನ ಮುಂದೆ ಬ್ರಾಹ್ಮಣ್ಯವು ಕಳೆಗುಂದಿತಲ್ಲ! ಗುರುಕುಲದಲ್ಲಿ ಅತಿಪ್ರಯಾಸದಿಂದ ಗುರುಶುಶ್ರೂಷೆಮಾಡಿ ವೇದಾಧ್ಯಯನಮಾಡಿದರೂ ಬ್ರಹ್ಮಸಿದ್ಧಿಯು ನೃಪಾಧೀನವಾಗಿದೆಯಲ್ಲ! ಅಯ್ಯೋ! ಎಂತಹ ಕಷ್ಟಕಾಲವೊದಗಿತು" ಎಂದು ಉದ್ಗಾರಮಾಡಿ ಕುಶಸಮಿಧಾದಿ ಯಜ್ಞೋಪಕರಣಗಳನ್ನು ಹಿಡಿಯುವುದರಲ್ಲಿ ನುರಿತ ತನ್ನ ಕೈಯಲ್ಲಿ ಸಕಲ ಭೂಮಂಡಲವನ್ನು ಜಯಿಸುವ ಇಚ್ಛೆಯಿಂದ ಪ್ರಜ್ವಲಿಸುವ ಶಸ್ತ್ರವೊಂದನ್ನು ಝಳಪಿಸಿದನು. ಶೀಘ್ರದಲ್ಲಿಯೇ ಪಲ್ಲವರ ಅಂತಪಾಲರನ್ನು ಯುದ್ಧದಲ್ಲಿ ಗೆದ್ದು ಶ್ರೀಪರ್ವತದವರೆಗಿನ ಘೋರಾರಣ್ಯವನ್ನಾಕ್ರಮಿಸಿ ಬೃಹದ್ಬಾಣ, ಮೊದಲಾದ ಮಾಂಡಲಿಕರಿಂದ ಕರವನ್ನು ತೆಗೆದುಕೊಂಡನು. ಇದನ್ನು ಕೇಳಿ ಪಲ್ಲವರು ಕ್ರೋಧದಿಂದ ಮಯೂರಶರ್ಮನ ಮೇಲೆ ತಮ್ಮ ಸೇನೆಯನ್ನು ಕಳುಹಿಸಲು ಅವನು ಖಡ್ಗೈಕ ಸಹಾಯನಾಗಿ ಕ್ಷಣಮಾತ್ರದಲ್ಲಿಯೇ ಅದನ್ನು ಹೊಡೆದಟ್ಟಿದನು. ಈ ಬಲಶಾಲಿಯೊಂದಿಗೆ ದ್ವೇಷಬೆಳೆಯಿಸುವುದು ತಮಗೂ ತಮ್ಮ ರಾಜ್ಯಕ್ಕೂ ಅಪಾಯಕರವೆಂದು ಬಗೆದು ಪಲ್ಲವರು ಅವನಿಗೆ ಸೇನಾಪತಿ ಪದವನ್ನು ಕೊಟ್ಟು ಅವನ ಸಖ್ಯವನ್ನು ಸಂಪಾದಿಸಿದರು. ಆಮೇಲೆ ಸೇನಾಧಿಪತ್ಯದಲ್ಲಿ ಇವನು ತೋರಿಸಿದ ಪರಾಕ್ರಮಕ್ಕೆ ಮೆಚ್ಚಿ ಪಶ್ಚಿಮದಲ್ಲಿ ಸಮುದ್ರದ ವರೆಗೂ ಪೂರ್ವದಲ್ಲಿ ಪ್ರೇಹರ(?)ದ

[1] *Ep, Ind.*, Vol. VIII, p. 24. 'ಪಲ್ಲವಾಶ್ವ ಸಂಸ್ಥೇನ ಕಲಹೇನ' ಎಂದರೆ ಆಗಿನ ಪಲ್ಲವರಾಜನು ಮಾಡುತ್ತಿದ್ದ ಅಶ್ವಮೇಧಯಾಗದ ಬಗ್ಗೆ ಉಂಟಾದ ಕಲಹದಿಂದ ಎಂದು ಅರ್ಥಮಾಡಬೇಕು.

ವರೆಗೂ ಇದ್ದ ಭೂಮಿಯನ್ನು ಕೊಟ್ಟು ಅವನಿಗೆ ಸಾಮಂತಪಟ್ಟವನ್ನು ಕಟ್ಟಿದರು. ಹೀಗೆ ಮಯೂರಶರ್ಮನು ಸ್ವಬಾಹುಬಲದಿಂದ ಸಂಪಾದಿಸಿದ ರಾಜ್ಯವನ್ನು ತನ್ನ ರಾಜಧಾನಿಯಾದ ವೈಜಯಂತಿಯಿಂದ ಸುಮಾರು ಕ್ರಿ. ಶ. ೩೩೨ರಿಂದ ೩೫೭ರ ವರೆಗೆ ಆಳಿದನು. ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಬನವಾಸಿಯೇ ಆಗ ವೈಜಯಂತಿ ಎಂಬ ಹೆಸರಿನಿಂದ ಪ್ರಸಿದ್ಧಿಗೊಂಡಿತ್ತು. ಈ ಬನವಾಸಿಯು ಬಹುಪ್ರಾಚೀನಕಾಲದಿಂದಲೂ ಹೆಸರುವಾಸಿಯಾದ ಪಟ್ಟಣವಾಗಿತ್ತು. ಈ ಪಟ್ಟಣಕ್ಕೇ ಅಶೋಕ ಮಹಾರಾಜನ ಕಾಲದಲ್ಲಿ ರಕ್ಷಿತನೆಂಬ ಬೌದ್ಧಧರ್ಮ ಪ್ರಚಾರಕನು ಹೋಗಿದ್ದುದು. ಲೋಕಪ್ರವಾಸಿಕನಾದ ಟಾಲೆಮಿ ( ಕ್ರಿ. ಶ. ೨ನೆಯ ಶತಮಾನ )ಯ ಭೂವಿವರಣೆಯಲ್ಲಿಯೂ ಬನವಾಸಿಯು ಉಕ್ತವಾಗಿದೆ.[1] ಮಯೂರಶರ್ಮನಿಗೆ ಹಿಂದೆ ಇದ್ದ ಸಾತಕರ್ಣಿಗಳ ಈ ಭಾಗದ ರಾಜಧಾನಿಯೂ ಬನವಾಸಿ ( ವೈಜಯಂತಿ )ಯೇ ಆಗಿತ್ತು. ವನವಾಸಕ ಮಹಾರಾಜನ ರಾಣಿಯೂ ಇಕ್ಷಾಕು ವಂಶದ ವಿರಪುರಿಸದತನ ಮಗಳೂ ಆದ ಕೊಡಬಲಿಸಿರಿ ಎಂಬಾಕೆಯು ಚೈತ್ಯ ವಿಹಾರಗಳನ್ನು ಕಟ್ಟಿಸಿದ್ದಳೆಂದು ಗುಂಟೂರು ಜಿಲ್ಲೆಗೆ ಸೇರಿದ ನಾಗಾರ್ಜುನಿಕೊಂಡದಲ್ಲಿರುವ ಕ್ರಿ. ಶ. ೩ನೆಯ ಶತಮಾನದ ಪ್ರಾಕೃತ ಶಾಸನಗಳಲ್ಲಿ ಹೇಳಿದೆ.[2] ಇದರಿಂದ ರಾಜಧಾನಿಯಾದ ಬನವಾಸಿಯ ಹೆಸರಿನಿಂದಲೇ ಅಲ್ಲಿಯ ರಾಜರು ಕೂಡ ಕರೆಯಲ್ಪಡುತ್ತಿದ್ದರೆಂದು ಸ್ಪಷ್ಟವಾಗುತ್ತದೆ. ಹೀಗೆ ಪ್ರಖ್ಯಾತಿಹೊಂದಿದ್ದ ಬನವಾಸಿಯು ಕ್ರಿ. ಶ. ೪ನೆಯ ಶತಮಾನದಿಂದ ೬ನೆಯ ಶತಮಾನದ ವರೆಗೂ ಕದಂಬರ ರಾಜಧಾನಿಯಾಗಿತ್ತು.

**ಮಯೂರಶರ್ಮನ ಕಾಲದ ಶಾಸನ:**

ಚಂದ್ರವಳ್ಳಿ ಶಾಸನ— ಇದರ ಲಿಪಿ ೩-೪ ನೆಯ ಶತಮಾನಗಳಲ್ಲಿ ಪ್ರಚಾರದಲ್ಲಿದ್ದ ಬ್ರಾಹ್ಮೀಲಿಪಿ. ಭಾಷೆ ಪ್ರಾಕೃತ. ಈ ಶಾಸನದ ಸಾರಾಂಶವನ್ನು ಹಿಂದೆ ಕೊಟ್ಟಿದ್ದೇವೆ.[3]

ಮಯೂರಶರ್ಮನ ತರುವಾಯ ಅವನ ಮಗನಾದ **ಕಂಗವರ್ಮನು** ಪಟ್ಟಕ್ಕೆ ಬಂದನು. ಇವನ ಲಿಪಿಗಳಾವುವೂ ದೊರೆತಿಲ್ಲ. ಈ ಮನೆತನದ ಬೇರೆ ಶಾಸನಗಳಿಂದ ಇವನು ಬಹು ಪರಾಕ್ರಮಶಾಲಿಯೂ ಸಾಮಂತರಾಜಪೂಜಿ-

---

[1] *Ep. Ind.*, Vol, XX, p. 36.

[2] *Ep, Ind.*, Vol. XX, pp. 1 ff.

[3] **ಇದರ ಅಕ್ಷರಗಳು ಪುಳುಮಾವಿಯ ವ್ಯಾಕದೊನಿ ಶಾಸನದ ಲಿಪಿಯನ್ನು ಹೋಲುತ್ತವೆಂದೂ ಅವು ೩ನೆಯ ಶತಮಾನದವೆಂದೂ ಡಾ॥ ಎಂ ಎಚ್. ಕೃಷ್ಣರು ಅಭಿಪ್ರಾಯಪಟ್ಟಿದ್ದಾರೆ.**

ತನೂ ಆಗಿದ್ದನೆಂದು ತಿಳಿಯುತ್ತದೆ. ಇವನ ಮಗನು **ಭಗೀರಥರಾಜನು** ಇವನ ಕಾಲವು ಸುಮಾರು ಕ್ರಿ. ಶ. ೩೮೨–೪೦೭. ಇವನ ಕಾಲದ ಶಾಸನಗಳೂ ಸಿಕ್ಕಿಲ್ಲ. ಇವನನಂತರ ಆಳಿದ ರಾಜರ ಶಾಸನಗಳಿಂದಲೂ ಇವನ ವಿಷಯವೇನೂ ತಿಳಿದುಬಂದಿಲ್ಲ. ಆ ಮೇಲೆ ಇವನ ಮಗನಾದ **ರಘುರಾಜನು** ಸಿಂಹಾಸನ ವನ್ನೇರಿದನು. ಈತನು ಅನೇಕ ಸಮರಗಳಲ್ಲಿ ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ನಿಷ್ಕಂಟಕವಾಗಿ ಪಾಲಿಸಿದನು; ಶ್ರುತಿಪಥನಿಪುಣನೂ ಕವಿಯೂ ದಾನಶೂರನೂ ಕಲಾಕುಶಲನೂ ಪ್ರಜಾಪ್ರಿಯನೂ ಆಗಿದ್ದನು.[1]

ರಘುರಾಜನನಂತರ ಇವನ ತಮ್ಮನಾದ **ಕಾಕುಸ್ಥವರ್ಮನು** ಕದಂಬ ರಾಜ್ಯಸೂತ್ರಗಳನ್ನು ವಹಿಸಿದನು. ಇವನು ಪ್ರಜಾಪಾಲನ ದಕ್ಷನೂ ದೇವದ್ವಿಜ ಗುರುಪೂಜಾನಿರತನೂ ಆಗಿದ್ದನು. ಇವನ ಪ್ರತಾಪವು ಸ್ವದೇಶದಲ್ಲಿ ಮಾತ್ರ ವಲ್ಲದೆ ಪರದೇಶಗಳಲ್ಲಿಯೂ ಹಬ್ಬಿತ್ತು. ಪ್ರಸಿದ್ಧರಾದ ಗುಪ್ತರೇ ಮೊದಲಾದ ರಾಜರು ಇವನ ಸಹಾಯಾಪೇಕ್ಷಿಗಳಾಗಿ ಇವನೊಡನೆ ಬಾಂಧವ್ಯವನ್ನು ಬಯಸಿ ಶರೀರಸಂಬಂಧವನ್ನು ಬೆಳೆಸಿದರು. ಆಗಿನ ಕಾಲದ ರಾಜಮನೆತನಗಳ ಶಾಸನಗಳ[2] ಪರೀಕ್ಷೆಯಿಂದ ಕಾಕುಸ್ಥವರ್ಮನಿಗೆ ನಾಲ್ಕುಜನ ಹೆಣ್ಣು-ಮಕ್ಕಳಿದ್ದಿರಬೇಕೆಂದು ಗೊತ್ತಾಗುತ್ತದೆ. ಹಿರಿಯ ಮಗಳನ್ನು ತನ್ನ ಸಮಕಾ-ಲೀನನಾದ ಕುಮಾರಗುಪ್ತನ (ಕ್ರಿ. ಶ. ೪೧೫–೪೫೩) ಮಗ ಸ್ಕಂದಗುಪ್ತನಿಗೆ ಕೊಟ್ಟನೆಂದು ಊಹಿಸಬಹುದು.[3] ಕಾಕುಸ್ಥವರ್ಮನಿಗಿಂತ ಮೊದಲೇ ಪಟ್ಟಕ್ಕೆ ಬಂದ ಕುಮಾರಗುಪ್ತನು ತನ್ನ ಸಮವಯಸ್ಕನೋ ಹಿರಿಯನೋ ಆಗಿದ್ದಿರ-ಬಹುದಾದುದರಿಂದ ಅವನಿಗೆ ಕಾಕುಸ್ಥವರ್ಮನು ತನ್ನ ಮಗಳನ್ನು ಕೊಟ್ಟನೆಂದು ಹೇಳುವುದು ಸಮಂಜಸವಾಗಲಾರದು.[4]

ವಾಕಾಟಕ ಅರಸನಾದ ನರೇಂದ್ರಸೇನನು ಕುಂತಲ ರಾಜನ ಮಗಳಾದ ಅಜ್ಜಿತಭಟ್ಟಾರಿಕೆಯನ್ನು ಮದುವೆಯಾಗಿದ್ದನೆಂದು ಬಾಲಾಘಾಟ್ ಶಾಸನದಿಂದ

---

[1] *Ep. Ind.* Vol. VIII. pp. 24 ff.

[2] *Ibid.* p. 33; *Ep. Ind.*, Vol, IX, p. 268; *M.A.R.*, 1924, p. 68; *Ibid*, 1925, p. 88; *Ibid*, 1911, p 32.

[3] ಹೇರಾಸರು ಕುಮಾರಗುಪ್ತನಿಗೆ ಕೊಟ್ಟಿರಬಹುದೆಂದು ಬರೆದಿದ್ದಾರೆ (*J.B.O.R.S.* Vol. XII, p. 459).

[4] ರೈಸರು ಈ ಗುಪ್ತರಾಜನು ಸಮುದ್ರಗುಪ್ತನಾಗಿರಬೇಕೆಂದು ಹೇಳಿದ್ದಾರೆ. (*Mygore and Coorg from Inscriptions* p. 23). 'ಕದಂಬಕುಲ'ವು ಹೇರಾಸರ ಅಭಿಪ್ರಾಯವನ್ನೇ ಎತ್ತಿಹಿಡಿಯುತ್ತದೆ (pp. 20 ff.).

ತಿಳಿಯುತ್ತದೆ.[1] ನರೇಂದ್ರಸೇನನ ಅಜ್ಜನಾದ ೨ನೆಯ ರುದ್ರಸೇನನು ೨ನೆಯ ಚಂದ್ರಗುಪ್ತನ ಮಗಳಾದ ಪ್ರಭಾವತೀಗುಪ್ತೆಯನ್ನು ಸುಮಾರು ಕ್ರಿ. ಶ. ೩೯೫ರಲ್ಲಿ ವಿವಾಹಮಾಡಿಕೊಂಡನೆಂದು ವಿನ್ಸೆಂಟ್‌ಸ್ಮಿತರು ಹೇಳಿದ್ದಾರೆ.[2] ಆದುದರಿಂದ ನರೇಂದ್ರಸೇನನ ಮದುವೆಯು ಸುಮಾರು ಕ್ರಿ. ಶ. ೪೪೫ ರಲ್ಲಿ ಆಗಿರಬಹುದು.[3] ಈ ಅಜ್ಝಿತಭಟ್ಟಾರಿಕೆಯು ಕದಂಬ ಕಾಕುಸ್ಥವರ್ಮನ ಮಗಳೇ ಆಗಿರಬೇಕು. ಈ ಕಾಲದಲ್ಲಿ ಕುಂತಲದೇಶವನ್ನಾಳುತ್ತಿದ್ದ ಅರಸರು ಕದಂಬರಲ್ಲದೆ ಬೇರೆ ಯಾರೂ ಅಲ್ಲ. ತಾಳಗುಂದದ ಪ್ರಣವೇಶ್ವರ ಗುಡಿಯಲ್ಲಿಯ

---

ರಾಜಶೇಖರನ 'ಕಾವ್ಯಮೀಮಾಂಸೆ'ಯಲ್ಲಿಯ ಒಂದು ಶ್ಲೋಕದಲ್ಲಿ 'ಕುಂತಲಾಧೀಶ'ನ ನಿರ್ದೇಶವಿದೆ. ಇದೇ ಶ್ಲೋಕವನ್ನು ಭೋಜನು (೧೧ನೆಯ ಶತಮಾನ) ತನ್ನ ಶೃಂಗಾರ ಪ್ರಕಾಶದಲ್ಲಿ ಉದ್ಧರಿಸಿ ವಿಕ್ರಮಾದಿತ್ಯನು ಕುಂತಲರಾಜನ ಆಸ್ಥಾನಕ್ಕೆ ಕಾಳಿದಾಸನನ್ನು ಕಳುಹಿಸಿದ್ದನೆಂದು ಹೇಳಿದ್ದಾನೆ. ಕ್ಷೇಮೇಂದ್ರನ 'ಔಚಿತ್ಯವಿಚಾರ ಚರ್ಚೆ'ಯಲ್ಲಿ ಈ ಶ್ಲೋಕವು ಕಾಳಿದಾಸನ 'ಕುಂತೇಶ್ವರ ದೌತ್ಯ'ವೆಂಬ ಗ್ರಂಥದಿಂದಿರಬೇಕೆಂದು ಬರೆದಿದೆ. ಈ ಆಧಾರಗಳಿಂದ ಹೆರಾಸರು ಚಂದ್ರಗುಪ್ತನು ಕಾಳಿದಾಸನನ್ನು ಕುಂತಲೇಶನಾದ ಕದಂಬ ಭಗೀರಥರಾಜನ ಆಸ್ಥಾನಕ್ಕೆ ವಿವಾಹ ನಿಶ್ಚಯಕ್ಕಾಗಿ ಕಳುಹಿಸಿದ್ದನೆಂದು ಹೇಳಿದ್ದಾರೆ. ಆದರೆ 'ಭರತಚರಿತ'ದಲ್ಲಿ ಕುಂತಲೇಶನು 'ಸೇತುಬಂಧ ಕಾವ್ಯ'ವನ್ನು ರಚಿಸಿದನೆಂದು ಹೇಳಿದೆ. ಬಾಣನು ತನ್ನ 'ಹರ್ಷಚರಿತ'ದ ಉಪೋದ್ಘಾತದಲ್ಲಿ 'ಸೇತುಬಂಧ ಕಾವ್ಯ'ವು ಪ್ರವರಸೇನನದೆಂದು ಹೇಳಿದ್ದಾನೆ. ಇದರಿಂದ ಪ್ರವರಸೇನನಿಗೆ ಕುಂತಲೇಶನೆಂಬ ಬಿರುದು ಇದ್ದಂತೆ ತಿಳಿಯುತ್ತದೆ. ೧ನೆಯ ಪೃಥ್ವೀಸೇನನು ಕುಂತಲ ರಾಜನನ್ನು ಗೆದ್ದನೆಂದು ಅಜಂತೆಯ ಒಂದು ಲಿಪಿಯಲ್ಲಿ (೧೬ನೆಯ ಗುಹೆಯಲ್ಲಿಯ ಶಾಸನ, *Arch. Surv. W. Ind.*, Vol. IV, 53 and 124) ಉಕ್ತವಾಗಿರುವುದರಿಂದ ಆಗಿನ ಕಾಲದಿಂದ ವಾಕಾಟಕರಿಗೆ 'ಕುಂತಲಾಧೀಶ' ಎಂಬ ಬಿರುದು ಬಂದಿರಬಹುದೆಂದೂ ೨ನೆಯ ಚಂದ್ರಗುಪ್ತನು ಕಾಳಿದಾಸನನ್ನು ತನ್ನ ಮಗಳ ಮಗನಾದ ಪ್ರವರಸೇನನ ಆಸ್ಥಾನಕ್ಕೆ ಕಳುಹಿಸಿದ್ದನೆಂದೂ ಕೃಷ್ಣಸ್ವಾಮಿ ಅಯ್ಯಂಗಾರ್ರು ಅಭಿಪ್ರಾಯಪಟ್ಟಿದ್ದಾರೆ (*Annals of the Bhandarkar Research Institute*, Vol. V, pp. 44 ff.). ನರೇಂದ್ರಸೇನನು ಕುಂತಲ ರಾಜನ ಮಗಳನ್ನು ಮದುವೆಯಾದನೆಂದು ಶಾಸನದಲ್ಲಿ ಹೇಳಿರುವುದರಿಂದ ವಾಕಾಟಕರಿಗೆ 'ಕುಂತಲೇಶ' ಎಂಬ ಬಿರುದು ಇದ್ದರೂ ನಿಜವಾದ ಕುಂತಲ ರಾಜರು ಬೇರೆ ಆಗಿರಬೇಕು. ಆದುದರಿಂದ ಕಾಳಿದಾಸನು ಇವರಲ್ಲಿ ಯಾವ ಕುಂತಲ ರಾಜನ ಆಸ್ಥಾನಕ್ಕೆ ಹೋಗಿದ್ದನೆಂಬುದನ್ನು ನಿಶ್ಚಯಿಸಲಾಗದು. ಈ ವಿಷಯವನ್ನು ಕುರಿತು ಬರೆದಿರುವ ಶ್ರೀ. ಲಕ್ಷ್ಮೀನಾರಾಯಣರಾಯರ ಲೇಖವನ್ನು ನೋಡಿರಿ. *Ind. His, Quarterly*, Vol. IX, pp. 197 ff.).

[1] *Ep. Ind.*, Vol. IX, *p*. 268.

[2] *J R.A.S.*, 1914, p. 326.

[3] J. Dubreuil : *Ancient History of the Deccan, p*. 75.

ಸುಮಾರು ಕ್ರಿ. ಶ. ೫ನೆಯ ಶತಮಾನದ ಒಂದು ಶಿಲಾಲಿಪಿಯಲ್ಲಿ[1] ಭಟಾರಿ ವಂಶದ ಪಶುಪತಿ ಕಾಕುಸ್ಥನು ಕದಂಬ ವಶಂದ ರಾಜಪುತ್ರಿಯ ಮಗನೆಂದೂ ಅವನು ಹತ್ತು ಜನ ಮಾಂಡಲಿಕರ ನಾಯಕನಾಗಿದ್ದನೆಂದೂ ಉಕ್ತವಾಗಿದೆ. ಈ ಕದಂಬ ವಂಶದ ರಾಜಪುತ್ರಿಯು ಕಾಕುಸ್ಥವರ್ಮನ ಮಗಳಾಗಿರಬಹುದು. ಆಕೆಯು ತನ್ನ ಮಗನಿಗೆ ತಂದೆಯ ಹೆಸರನ್ನಿಟ್ಟುದು ಸ್ವಾಭಾವಿಕವಾಗಿ ತೋರುತ್ತದೆ.

ಗಂಗರ ಶಾಸನಗಳಿಂದ ವಿಷ್ಣುಗೋಪನ ಮಗನಾದ ೩ನೆಯ ಮಾಧವನು 'ಅಶ್ವಮೇಧಯಾಜಿ'ಯಾದ ಕದಂಬ ಕೃಷ್ಣವರ್ಮನ ಭಗಿನಿಯನ್ನು ವಿವಾಹ ಮಾಡಿಕೊಂಡಿದ್ದನೆಂದು ತಿಳಿಯುಬರುತ್ತದೆ.[2] ಡುಬ್ರಾಯಿಲರು ಇವನು ಕದಂಬ ೨ನೆಯ ಕೃಷ್ಣವರ್ಮನಾಗಿರಬೇಕೆಂದು ಹೇಳಿದ್ದಾರೆ.[3] ಆದರೆ ಎಲ್ಲ ಶಾಸನಗಳಲ್ಲಿಯೂ ಅವಿನೀತನು ಅಶ್ವಮೇಧಯಾಜಿಯಾದ ಕದಂಬ ಕೃಷ್ಣವರ್ಮನ ಸೋದರಳಿಯನೆಂದು ಹೇಳಿರುವುದರಿಂದಲೂ 'ಅಶ್ವಮೇಧಯಾಜಿ'ಯೆಂಬ ಬಿರುದು ೧ನೆಯ ಕೃಷ್ಣವರ್ಮನಿಗಲ್ಲದೆ ೨ನೆಯ ಕೃಷ್ಣವರ್ಮನಿಗೆ ಇದ್ದಿಲ್ಲವಾದುದ

---

[1] *Mysore Archæological Report*, 1911, p. 33.

[2] ಗಂಗರ ಪ್ರಕರಣದಲ್ಲಿ ನೋಡಿರಿ.

[3] *Ancient History of the Deccan, p.* 103. ಡಿ. ಸಿ. ಸರ್ಕಾರರೂ ಹೀಗೆಯೇ ಭಾವಿಸಿದ್ದಾರೆ (*Journal of Indian History*, Vol. XV, pp. 316 ff.).

'ಕದಂಬಕುಲ'ವೆಂಬ ಪುಸ್ತಕದಲ್ಲಿ (pp. 55—59) ಕದಂಬ ೨ನಯ ಕೃಷ್ಣವರ್ಮನ ತಂಗಿಯನ್ನು ಗಂಗ ೩ನೆಯ ಮಾಧವನು ಮದುವೆಯಾದನೆಂಬ ವಿಷಯದಲ್ಲಿ ಕೆಳಗಿನ ಪ್ರಮಾಣಗಳು ಕೊಡಲ್ಪಟ್ಟವೆ:— "೧. ಶ್ರೀಪುರುಷನ ಹಲ್ಲೂರು ಶಾಸನ ಕಾಲವು ಕ್ರಿ ಶ. ೭೮೮. ಆದುದರಿಂದ ಇದೇ ಅವನ ಕಡೆಯ ವರ್ಷವೆಂದು ಭಾವಿಸಿ ಹಿಂದಿನ ರಾಜರ ಆಳಿಕೆಯ ಕಾಲವನ್ನು ಗಣಿಸಿದರೆ ೨ನೆಯ ಮಾಧವನ ಕಾಲವು ೫೩೦–೫೫೫ ಆಗುತ್ತದೆ. ೨ನೆಯ ಕೃಷ್ಣವರ್ಮನೂ ಇದೇ ಕಾಲದವನು. (೨) ದುರ್ವಿನೀತನು ಚಾಲುಕ್ಯ ೨ನೆಯ ಪುಲಿಕೇಶಿಯ ಶ್ವಶುರ (ಮಾವ)ನೂ ಒಂದನೆಯ ವಿಕ್ರಮಾದಿತ್ಯನ ಅಜ್ಜನೂ ಆಗಿದ್ದನೆಂದು (ವೆಂಕಟರಮಣಯ್ಯ : Durvinīta and Vikramāditya, *Trivēṇi*, pp. 112-120) ಗೊತ್ತಿರುವುದರಿಂದಲೂ ಭೋಗಿವರ್ಮನು ಪುಲಿಕೇಶಿಯ ಸಮಕಾಲೀನನಾಗಿರಬೇಕಾದುದರಿಂದಲೂ ೨ನೆಯ ಕೃಷ್ಣವರ್ಮ, ಮಾಧವರು ಏಕಕಾಲದಲ್ಲಿ ಆಳುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. (೩) ಅವಿನೀತನ ಸೋದರಮಾವನಾದ (೨ನೆಯ) ಕೃಷ್ಣವರ್ಮನು 'ಕದಂಬಕುಲ ಗಗನಗಭಸ್ತಿಮಾಲೀ' ಎಂದು ಶಾಸನಗಳಲ್ಲಿ ವರ್ಣಿಸಲ್ಪಟ್ಟದ್ದಾನೆ. ಭೋಗಿವರ್ಮನ ತಗರೇ ಶಾಸನದಲ್ಲಿ ಈ ವಿಶೇಷಣವು ೨ನೆಯ

ರಿಂದಲೂ ಅವಿನೀತನ ಸೋದರಮಾವನು ೧ನೆಯ ಕೃಷ್ಣವರ್ಮನೇ ಆಗಿರಬೇಕು. ಇದಲ್ಲದೆ ೩ನೆಯ ಮಾಧವನು ಸುಮಾರು ಕ್ರಿ. ಶ. ೪೮೦-೪೯೫ ರಲ್ಲಿಯೂ[1] ೨ನೆಯ ಕೃಷ್ಣವರ್ಮನು ಸುಮಾರು ಕ್ರಿ. ಶ. ೫೪೫-೫೭೦ ರಲ್ಲಿಯೂ[2] ಆಳಿದ ರೆಂದು ಅನೇಕ ಪ್ರಮಾಣಗಳಿಂದ ನಿರ್ಧಾರಿತವಾಗಿರುವುದರಿಂದ ಅವರಿಬ್ಬರೂ ಸಮಕಾಲೀನರಾಗುವುದು ಸಂಭಾವ್ಯವಲ್ಲ. ಈ ೧ನೆಯ ಕೃಷ್ಣವರ್ಮನ ತಂಗಿಯೇ ಕಾಕುಸ್ಥವರ್ಮನ ಕಡೆಯ ಮಗಳಾಗಿರಬೇಕು. ಶಾಂತಿವರ್ಮನು ಕಾಕುಸ್ಥನ ಔರಸಪುತ್ರನೆಂದು ಹೇಳಿಕೊಳ್ಳುವುದರಿಂದ ಕೃಷ್ಣವರ್ಮನು ಅವನ ಮಲತಮ್ಮನಾಗಿರಬಹುದು. ಅವಿನೀತನ ತಾಯಿಯೂ ಕೃಷ್ಣವರ್ಮನೂ ಒಡಹುಟ್ಟಿದವರಾಗಿರಬೇಕು.

---

ಕೃಷ್ಣವರ್ಮನಿಗೆ ಕೊಡಲ್ಪಟ್ಟಿದೆ." ಆದರೆ ಈ ಕಾರಣಗಳು ಸಮರ್ಪಕವಾಗಿಲ್ಲ— (i) ಹಿಂದಿನ ರಾಜರ ಆಳಿಕೆಗಳ ಗಣನೆಯಲ್ಲಿ ತಪ್ಪುಗಳಿವೆ. ಮಾಧವನು ಕ್ರಿ. ಶ. ೪೮೦-೪೯೫ ರಲ್ಲಿ ಆಳಿರಬೇಕೆಂದು ಸಪ್ರಮಾಣವಾಗಿ ಗಂಗಪ್ರಕರಣದಲ್ಲಿ ತೋರಿಸಿದ್ದೇವೆ. (ii) ವೆಂಕಟರಮಣಯ್ಯನವರ ವಿಧಾನವು ತಪ್ಪು. ದುರ್ವಿನೀತನು ವಿಕ್ರಮಾದಿತ್ಯನ ಸಮಕಾಲೀನನಾಗಿದ್ದರೆ ದುರ್ವಿನೀತನ ಕಡೆಯ ವರ್ಷವು ಸುಮಾರು ಕ್ರಿ. ಶ. ೬೫೫ ಎಂದು ಹೇಳಬೇಕಾಗುತ್ತದೆ. ದುರ್ವಿನೀತ ೧ನೆಯ ಶಿವಮಾರರ ನಡುವೆ ನಾಲ್ವರು ರಾಜರು ಆಳಿರುವುದರಿಂದ ೧ನೆಯ ಶಿವಮಾರನ ಪಟ್ಟಬಂಧದ (ಕ್ರಿ. ಶ. ೬೭೯) ಪೂರ್ವದಲ್ಲಿ ಅಂದರೆ ಸುಮಾರು ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಮುಷ್ಕರಪೊಲವೀರ ಶ್ರೀವಿಕ್ರಮ ಭೂವಿಕ್ರಮರ ಆಳಿಕೆಗಳು ಮುಗಿದಿದ್ದವೆಂದು ಹೇಳಬೇಕಾಗುತ್ತದೆ. ಈ ವಿಷಯದ ಚರ್ಚೆಯನ್ನು ಗಂಗಪ್ರಕರಣದಲ್ಲಿ ನೋಡಿರಿ. (iii) ಅವಿನೀತನ ಸೋದರಮಾವನಾದ ಕೃಷ್ಣವರ್ಮನಿಗೆ 'ಅಶ್ವಮೇಧಯಾಜಿ' ಎಂಬುದು ವ್ಯಾವರ್ತಕ ವಿಶೇಷಣವಾಗಿತ್ತು. ಈ ವಿಶೇಷಣವು ೨ನೆಯ ಕೃಷ್ಣವರ್ಮನ ಶಾಸನಗಳಲ್ಲಿಯೂ ೧ನೆಯ ಕೃಷ್ಣವರ್ಮನಿಗೇ ಕೊಡಲ್ಪಟ್ಟಿದೆ. ಮತ್ತು ಭೋಗಿವರ್ಮನ ತಗರೇ ಶಾಸನದಲ್ಲಿ ೨ನೆಯ ಕೃಷ್ಣವರ್ಮನಿಗೆ 'ಕದಂಬ ಕುಲಗಗನ' ಇತ್ಯಾದಿಯಾದ ವಿಶೇಷಣವಿಲ್ಲ. ಅದೇ ಅರ್ಥವನ್ನು ಸೂಚಿಸುವ "ಕದಂಬಾನಾಂ ಅನ್ವಯಾಂಬರಭಾಸ್ಕರಸ್ಯ" ಎಂಬ ಬೇರೆ ಶಬ್ದಪ್ರಯೋಗವಿದೆ. ಇದರಿಂದ ಆ ವಿಶೇಷಣವು ಕೇವಲ ವರ್ಣನಾಪರವೆಂದು ಹೇಳಬೇಕಾಗುತ್ತದೆ. ಅವಿನೀತನನ್ನು ವರ್ಣಿಸುವಾಗ ಗಂಗರ ಶಾಸನಗಳಲ್ಲೆಲ್ಲ "ಅವಿಚ್ಛಿನ್ನಾಶ್ವಮೇಧಾವಭೃಥಾಭಿಷಿಕ್ತ ಶ್ರೀಮತ್ಕದಂಬಕುಲಗಗನಗಭಸ್ತಿಮಾಲಿನಃ ಶ್ರೀಕೃಷ್ಣವರ್ಮ ಮಹಾಧಿರಾಜಸ್ಯ" ಎಂಬ ಆನುಪೂರ್ವಿಯಿಂದ ಕೃಷ್ಣವರ್ಮನ ನಿರ್ದೇಶವಿದೆ. ಆದುದರಿಂದ ಈ ವಿಶೇಷಣಗಳುಳ್ಳ ರಾಜನು ೧ನೆಯ ಕೃಷ್ಣವರ್ಮನೇ ಆಗಿರಬೇಕು.

[1] ಗಂಗಪ್ರಕರಣದಲ್ಲಿ ನೋಡಿರಿ.

[2] ಕದಂಬರಾಜರ ವಂಶವೃಕ್ಷವನ್ನೂ ಅವರ ಆಳಿಕೆಯ ಕಾಲಗಳ ವಿಷಯದಲ್ಲಿ ನಾವು ಮಾಡಿರುವ ಚರ್ಚೆಯನ್ನೂ ನೋಡಿರಿ.

ಕಾಕುಸ್ಥವರ್ಮನನ್ನು ಕುರಿತು ಹೇಳುವ **ಶಾಸನಗಳು** ಎರಡು ಮಾತ್ರ **ದೊರೆತಿವೆ.**[1] ಅವನು ಯುವರಾಜನಾಗಿದ್ದಾಗ[2] ಅಂದರೆ ಅವನ ಅಣ್ಣನಾದ ರಘುರಾಜನು ರಾಜ್ಯಭಾರವನ್ನು ವಹಿಸಿದ್ದಾಗ ಬರೆದ ಹಲಸಿಯ ತಾಮ್ರಶಾಸನದಲ್ಲಿ ಕಾಕುಸ್ಥವರ್ಮನು ತನ್ನನ್ನು (ಯಾವುದೋ ಒಂದು ವಿಪತ್ತಿನಿಂದ) ಪಾರುಮಾಡಿದ ಸೇನಾಪತಿ ಶ್ರುತಕೀರ್ತಿಗೆ ಖೇಟಗ್ರಾಮದಲ್ಲಿ ಭೂಮಿಯನ್ನು ದಾನಮಾಡಿದನೆಂದು ಹೇಳಿದೆ. ತಾಳಗುಂಡದ ಶಿಲಾಶಾಸನದಿಂದ ಇವನು ಸ್ಥಾನಕುಂದೂರ (ತಾಳಗುಂದ)ಲ್ಲಿ ಶಿವಾಲಯದ ಹತ್ತಿರದಲ್ಲಿ ಒಂದು ಕೆರೆಯನ್ನು ಕಟ್ಟಿಸಿದನೆಂದೂ ಈ ಶಿವಾಲಯದ ಈಶ್ವರನನ್ನು ಸಾತಕರ್ಣಿ ಮೊದಲಾದ ರಾಜರು ಪೂರ್ವದಲ್ಲಿ ಪೂಜಿಸಿದ್ದರೆಂದೂ ತಿಳಿಯುತ್ತದೆ. ಕಾಕುಸ್ಥವರ್ಮನ ಔರಸಪುತ್ರನಾದ ಶಾಂತಿವರ್ಮ ನೃಪತಿಯ ಅಪ್ಪಣೆಯ ಮೇರೆಗೆ ಕುಬ್ಜನೆಂಬ ಕವಿಯು ಈ ಶಾಸನವನ್ನು ಬರೆದನೆಂದು ಹೇಳಿದೆ.

ಕಾಕುಸ್ಥವರ್ಮನಿಗೆ **ಶಾಂತಿವರ್ಮ ಕೃಷ್ಣವರ್ಮ**ರೆಂಬ ಇಬ್ಬರು ಗಂಡುಮಕ್ಕಳಿದ್ದರು.[3] ಇವರು ಕದಂಬರಾಜ್ಯದ ಬೇರೆ ಬೇರೆ ಭಾಗಗಳನ್ನು ಒಂದೇ ಕಾಲದಲ್ಲಿ ಸ್ವತಂತ್ರವಾಗಿ ಆಳುತ್ತಿದ್ದರೆಂದು ಹಿಂದೆ ಹೇಳಿದ್ದೇವೆ. ಮೊದಲು ಹಿರಿಯ ಮಗನಾದ ಶಾಂತಿವರ್ಮನ ಸಂತತಿಯ ರಾಜರ ವೃತ್ತವನ್ನು ಕೊಟ್ಟು

---

[1] ತಾಳಗುಂಡ ಶಿಲಾಶಾಸನ (*Ep. Ind.*, Vol. VIII, pp. 24 ff.); ಹಲಸಿ ತಾಮ್ರಶಾಸನ (*Ind. Ant*, Vol. VI, p. 23).

[2] 'ಕದಂಬಾನಾಂ ಯುವರಾಜ'ನಾದ ಕಾಕುಸ್ಥವರ್ಮನ "ಸ್ವ ವೈಜಯಿಕೇ ಅಶೀತಿತಮೇ ಸಂವತ್ಸರೇ" ಎಂಬ ವಾಕ್ಯದಿಂದ ಕಾಕುಸ್ಥನು ಯುವರಾಜನಾದಂದಿನಿಂದ ಈ ಕಾಲಗಣನೆಯಾಗಿರಬೇಕೆಂದು ಅರ್ಥವಾಗುತ್ತದೆ. ಫ್ಲೀಟರು ಈ ಅರ್ಥವನ್ನು ಹೇಳಿ ಒಬ್ಬ ರಾಜನು ಎಂಬತ್ತು ವರ್ಷಗಳು ಆಳುವುದು ಅಸಂಭವವೆಂದು ಬಗೆದು ಈ ಶಾಸನದಲ್ಲಿ ನಿರ್ದಿಷ್ಟವಾದ ಸಂವತ್ಸರವು ಮಯೂರಶರ್ಮನ ರಾಜ್ಯಾಭಿಷೇಕ ಕಾಲದಿಂದ ಎಂಭತ್ತನೆಯ ವರ್ಷವಿರಬೇಕೆಂದು ಬರೆದಿದ್ದಾರೆ (*Dyn. Kan. Dist.*, p. 291). ಗುಪ್ತವಂಶದ ೧ನೆಯ ಕುಮಾರಗುಪ್ತನ ಶಾಸನಗಳಲ್ಲಿ 'ಕುಮಾರ ಗುಪ್ತಸ್ಯಾಭಿವರ್ಧಮಾನ ವಿಜಯರಾಜ್ಯ ಸಂವತ್ಸರೇ ಷಣ್ಣವತೇ' ಎಂದೂ 'ಕುಮಾರ ಗುಪ್ತಸ್ಯ ವಿಜಯರಾಜ್ಯ ಸಂವತ್ಸರೇ ಶತೇ ಸಪ್ತದಶೋತ್ತರೇ' ಎಂದೂ ಕಾಲನಿರ್ದೇಶ ಮಾಡಲ್ಪಟ್ಟಿದ್ದರೂ ಈ ಶಾಸನಗಳ ೯೬ನೆಯ ವರ್ಷ ಮತ್ತು ೧೧೭ನೆಯ ವರ್ಷಗಳು ಅವರ ರಾಜ್ಯದ ವರ್ಷಗಳಾಗಲಾರವು. ಗುಪ್ತರಾಜ್ಯ ಸ್ಥಾಪನೆಯ ಕಾಲದಿಂದ ಈ ವರ್ಷಗಳು ಗಣಿಸಲ್ಪಟ್ಟಿರಬೇಕು.

[3] ಬೀರೂರು ಕೃತಕಶಾಸನದಲ್ಲಿ ಶಾಂತಿವರ್ಮನು ವಿಷ್ಣುವರ್ಮನ 'ಜ್ಯೇಷ್ಠ ಪಿತೃ' ಎಂದು ವರ್ಣಿಸಲ್ಪಟ್ಟಿದ್ದಾನೆ. ಇದರಿಂದ ಶಾಂತಿವರ್ಮ ಕೃಷ್ಣವರ್ಮರು ಅಣ್ಣತಮ್ಮಂದಿರೆಂದು ಸ್ಪಷ್ಟವಾಗುತ್ತದೆ. ತಾಳಗುಂದ ಶಾಸನದಲ್ಲಿ ಶಾಂತಿವರ್ಮನು ಕಾಕುಸ್ಥನ 'ಔರಸಪುತ್ರ' ಎಂದು ಬರೆದಿದೆ.

ಆ ಮೇಲೆ ಕೃಷ್ಣವರ್ಮನ ಮತ್ತು ಅವನ ವಂಶಜರ ಇತಿಹಾಸವನ್ನು ಬರೆಯುತ್ತೇವೆ. ಮೇಲೆ ಹೇಳಿದ ತಾಳಗುಂದ ಶಿಲಾಶಾಸನದಲ್ಲಿ ಶಾಂತಿವರ್ಮನು "ಪಟ್ಟತ್ರಯಾರ್ಪಣವಿರಾಜಿತ ಚಾರುಮೂರ್ತ್ತೇಃ" (ಮೂರು ಪಟ್ಟಗಳನ್ನು ಧರಿಸಿದ್ದವನು) ಎಂದು ಬರೆದಿದೆ.[1] ಈ ಮೂರು ಪಟ್ಟಗಳಾವುವೆಂಬುದು ತಿಳಿದಿಲ್ಲ. ಹಲಸಿಯ ತಾಮ್ರಶಾಸನದಲ್ಲಿ ಶಾಂತಿವರವರ್ಮನು ದುಷ್ಟವನಿತೆಯಂತೆ ಶತ್ರುಗೃಹದಲ್ಲಿ ಅಡಗಿದ್ದ ರಾಜ್ಯಲಕ್ಷ್ಮಿಯನ್ನು ಸೆಳೆದುತಂದನೆಂದು ಬರೆದಿದೆ. ಇವನ ಮಗನಾದ ಮೃಗೇಶನು ತುಂಗ ಗಂಗರನ್ನೂ ಪಲ್ಲವರನ್ನೂ ಸೋಲಿಸಿದನೆಂದು ಅದೇ ಶಾಸನದಲ್ಲಿ ಹೇಳುವುದರಿಂದ ನೆರೆಹೊರೆಯ ರಾಜರಾಗಿದ್ದ ಪಲ್ಲವರೂ ಗಂಗರೂ ಶಾಂತಿವರ್ಮನ ಕಾಲದಲ್ಲಿ ಕದಂಬ ರಾಜ್ಯವನ್ನು ಅಪಹರಿಸಲು ಪ್ರಯತ್ನಮಾಡಿದಂತೆ ತೋರುತ್ತದೆ. ವೈಜಯಂತಿಯು (ಬನವಾಸಿ) ಇವನ ರಾಜಧಾನಿಯಾಗಿತ್ತು.[2] ಪಲಾಸಿಕೆಯೂ ಕದಂಬರಾಜ್ಯದಲ್ಲಿ ಒಂದು ರಾಜಧಾನಿಯಾಗಿತ್ತೆಂದು ಗೊತ್ತಾಗುತ್ತದೆ.[3]

ಶಾಂತಿವರ್ಮನ ಬಳಿಕ ಪಟ್ಟಕ್ಕೆ ಬಂದ ಅವನ ಹಿರಿಯ ಮಗನಾದ **ಮೃಗೇಶವರ್ಮನು** ಅನೇಕ ಘೋರವಾದ ಯುದ್ಧಗಳಲ್ಲಿ ಪರಾಕ್ರಮದಿಂದ ಶತ್ರುಗಳನ್ನು ಸೋಲಿಸಿದನೆಂದು ಹುಣಸೂರು ಹಲಸಿ ಶಾಸನಗಳಲ್ಲಿ ಹೇಳಿದೆ[4] ಹಲಸಿ ತಾಮ್ರಶಾಸನದಲ್ಲಿ ಮೃಗೇಶನು 'ತುಂಗಗಂಗಕುಲೋತ್ಸಾದಿ'[5] ಎಂದೂ 'ಪಲ್ಲವಪ್ರಲಯಾನಲ'ನೆಂದೂ ವರ್ಣಿಸಲ್ಪಟ್ಟಿದ್ದಾನೆ. ಮೇಲೆ ಹೇಳಿದ ಘೋರ ಯುದ್ಧಗಳು ಗಂಗ ಪಲ್ಲವರೊಡನೆ ನಡೆದುವುಗಳೇ ಇರಬಹುದು. ಹುಣಸೂರಿನ ಶಾಸನದಲ್ಲಿ ಇವನು "ಮಹತಿ ಸಮರಸಂಕಟೇ ಸ್ವಭುಜಬಲಪರಾಕ್ರಮಾವಾಪ್ತ ವಿಶಾಲವಿಭವೈಶ್ವರ್ಯಃ" (ಭೀಕರವಾದ ಯುದ್ಧಪ್ರಸಂಗದಲ್ಲಿ ಇವನು ಸ್ವಭುಜ ಬಲಪರಾಕ್ರಮಗಳಿಂದ ವಿಪುಲವಾದ ಐಶ್ವರ್ಯವನ್ನು ಸಂಪಾದಿಸಿದವನು) ಎಂದು ವರ್ಣಿತನಾಗಿರುವುದರಿಂದ ಆ ಶತ್ರುಗಳನ್ನು ಸೋಲಿಸಿ ತನ್ನ ಮನೆತನದ

---

[1] *Ep. Ind.*, vol. VIII, pp. 24 ff.

[2] ಇವನ ಮಕ್ಕಳು ಮೊಮ್ಮಕ್ಕಳ ಶಾಸನಗಳು ವೈಜಯಂತಿಯು ಕದಂಬರ ರಾಜಧಾನಿಯೆಂದು ಹೇಳುತ್ತವೆ. ಮೊದಲಿನಿಂದಲೂ ಪ್ರಸಿದ್ಧವಾದ ಈ ವೈಜಯಂತಿಯು ಕಾಕುಸ್ಥನ ಕಾಲದಲ್ಲಿಯೂ ರಾಜಧಾನಿಯಾಗಿದ್ದಿರಬಹುದು.

[3] *Ind. Ant.*, Vol. VI, p. 23.

[4] *Ep. Carn.*, Vol. IV, p. 231; *Ind. Ant.*, Vol. VI, p. 23.

[5] 'ತುಂಗಗಂಗರು' ಎಂದರೆ, ಉನ್ನತ (ಪ್ರಖ್ಯಾತ) ಗಂಗರೆಂಬ ಅರ್ಥವು ಗೃಹೀತವಾಗಿದೆ. 'ತುಂಗ'ವು ರಾಷ್ಟ್ರಕೂಟ ವಂಶದ ಹೆಸರಾದುದರಿಂದ (*Ep. Ind.*, Vol. V. p. 193.) ಇಲ್ಲಿಯ ತುಂಗ ಶಬ್ದವು ಅವರನ್ನು ನಿರ್ದೇಶಿಸಬಹುದು.



(Plate 3) ಬನವಾಸಿಯ ಪ್ರಾಕೃತಶಾಸನವುಳ್ಳ ನಾಗಪ್ರತಿಮೆ

ವೈಭವವನ್ನು ಉಳಿಸಿದನೆಂದು ತಿಳಿಯಬಹುದು. ರವಿವರ್ಮನು ಕಾಂಚೀಶನಾದ ಚಂಡದಂಡನನ್ನು ಕೊಂದು ಹಲಸಿಗೆಯಲ್ಲಿ ನಿಂತು ಸುಖರಾಜ್ಯಂಗೆಯ್ಯುತ್ತಿದ್ದನೆಂದು ಅವನದೊಂದು ಶಾಸನವು[1] ಹೇಳುತ್ತದೆ. ಇದರಿಂದ ಪಲ್ಲವರು ಕದಂಬರ ರಾಜ್ಯವೈಭವವನ್ನು ಸಹಿಸಲಾರದೆ ರವಿವರ್ಮನ ಕಾಲದ ವರೆಗೂ ಅವರೊಡನೆ ಕಾಳಗಗಳನ್ನು ಹೂಡಿ ಕೊನೆಗೆ ಪರಾಜಿತರಾದರೆಂದು ಊಹಿಸಬಹುದು.

ಮೃಗೇಶವರ್ಮನು 'ದ್ವಿಜಸಾಮಂತ'ರಿಂದ ಪೂಜಿತನಾಗಿದ್ದನು.[2] ಈ ಸಾಮಂತರ ಹೆಸರುಗಳು ಗೊತ್ತಾಗಿಲ್ಲ. ರವಿವರ್ಮರಾಜನ ತಾಯಿಯಾದ ಕೈಕೇಯ ಕುಲದ ಪ್ರಭಾವತಿಯು ಇವನ ರಾಣಿ.[3] ಶಾಂತಿವರ್ಮನ 'ಜ್ಯೇಷ್ಠ' ತನಯನೆಂದು ಇವನು ವರ್ಣಿಸಲ್ಪಟ್ಟಿರುವುದರಿಂದ[4] ಮೃಗೇಶನಿಗೆ ತಮ್ಮನು ಅಥವಾ ತಮ್ಮಂದಿರಿದ್ದಿರಬೇಕು. ಕೂಡಗೇರಿ ತಾಮ್ರಶಾಸನದ ವಿಜಯ ಶಿವಮಾಂಧಾತೃವರ್ಮನು ಪ್ರಾಯಶಃ ಒಬ್ಬ ತಮ್ಮನಾಗಿರಬೇಕು.[5] ಮೃಗೇಶನಿಗೆ ರವಿವರ್ಮ, ಭಾನುವರ್ಮ, ಶಿವರಥ ಎಂಬ ಮೂವರು ಮಕ್ಕಳಿದ್ದರು.[6]

### ಮೃಗೇಶನ ಶಾಸನಗಳು :

೧. ದೇವಗಿರಿ ತಾಮ್ರಶಾಸನವು.[7]— ರಾಜನು ವೈಜಯಂತಿಯಲ್ಲಿದ್ದಾಗ ತನ್ನ ಆಳಿಕೆಯ ಮೂರನೆಯ ವರ್ಷದ ಪೌಷ ಸಂವತ್ಸರ, ಕಾರ್ತಿಕ ಬಹುಳ ದಶಮೀ ದಿನ ಉತ್ತರಾ ಭಾದ್ರಪದ ನಕ್ಷತ್ರದ ಪುಣ್ಯಕಾಲದಲ್ಲಿ ಅರ್ಹಂತರಿಗೆ ಚೈತ್ಯಾಲಯದ ಸಂಮಾರ್ಜನೋಪಲೇಪನ ಭಗ್ನಸಂಸ್ಕಾರಗಳಿಗೋಸ್ಕರವಾಗಿ ಬೃಹತ್‌ಪರಲೂರ ಗ್ರಾಮದಲ್ಲಿ ನಲವತ್ತು ನಿವರ್ತನಗಳ ಎರೆಭೂಮಿಯನ್ನು ದಾನಮಾಡಿದನು.

೨. ದೇವಗಿರಿ ತಾಮ್ರಶಾಸನವು[8].—ರಾಜನು ತನ್ನ ಆಳಿಕೆಯ ನಾಲ್ಕನೆಯ ವರ್ಷದ ಎಂಟನೆಯ ಪಕ್ಷದ ಪೂರ್ಣಿಮಾ ತಿಥಿಯಂದು ವೈಜಯಂತಿ

---

1 ಹಲಸಿ ತಾಮ್ರಶಾಸನ ( *Ind. Ant.*, Vol. VI, p. 29 ).
2 *Ind. Ant.*, Vol. VI, p. 24.
3 *Mys. Arch. Rep.*, 1910-11, p. 35.
4 *Ind. Ant.*, Vol. VI, p. 24.
5 *Ep. Ind,*, Vol. VI, p. 14.
6 *Ind. Ant.*, Vol. VI, p. 28 ; *Ibid*, p. 30.
7 *Ibid*, Vol. VII, p. 35.
8 *Ind. Ant.*, VII, p. 37.

ಯಲ್ಲಿದ್ದಾಗ ಕಾಲವಂಗಾ ಗ್ರಾಮದಲ್ಲಿ ಮೂರು ಭಾಗಗಳನ್ನು ಮಾಡಿ, ಒಂದು ಭಾಗವನ್ನು ಅರ್ಹಂತರಿಗೆ ಮತ್ತು ಜಿನೇಂದ್ರ ದೇವರಿಗೆ, ಇನ್ನೊಂದು ಭಾಗವನ್ನು ಶ್ವೇತಪಟ ಮಹಾಸಂಘಕ್ಕೆ, ಉಳಿದುದನ್ನು ನಿರ್ಗ್ರಂಥ ಮಹಾಶ್ರಮಣ ಸಂಘಕ್ಕೆ ಕೊಟ್ಟನೆಂದು ಹೇಳುತ್ತದೆ. ಈ ಶಾಸನವನ್ನು ಸೇನಾಪತಿ ಸರವರಸು ಬರೆದನು.

೩. ಹುಣಸೂರು ತಾಮ್ರಶಾಸನವು.[1]— ರಾಜನು ತನ್ನ ಆಳಿಕೆಯ ಏಳನೆಯ ವರ್ಷದ ಮಾರ್ಗಶಿರಮಾಸ ಶುಕ್ಲಪಕ್ಷ ದಶಮಿ ದಿನದಲ್ಲಿ ಅಥರ್ವವೇದದ ಔಪಗಹನಿ ಸಗೋತ್ರದ ಒಬ್ಬ ಬ್ರಾಹ್ಮಣನಿಗೆ ಕಿಱುನೀರಲ್ಲಿ ಎಂಬ ಗ್ರಾಮವನ್ನು ಬ್ರಹ್ಮದೇಯವಾಗಿಪಟ್ಟನು. ಈ ಶಾಸನವು ವೈಜಯಂತಿ ಯಿಂದ ಹೊರಟಿದೆ. ಇದನ್ನು ಕೀರ್ತಿವರನು ಬರೆದನು. ಶಾಸನದ ಆದಿಭಾಗದಲ್ಲಿ "ಸುರಾಸುರಮುಕುಟಪ್ರಣಿಹಿತಮಣಿಕಿರಣಖಚಿತ ಚರಣ-ಯುಗಃ ದಂಡಕಮಂಡಲುಹಸ್ತಃ ಪದ್ಮಪ್ರವರಾಸನೋ ಬ್ರಹ್ಮಾ" ಎಂದು ದಂಡಕಮಂಡಲುಹಸ್ತನೂ ಪದ್ಮಾಸನನೂ ಆದ ಚತುರ್ಮುಖ ಬ್ರಹ್ಮನ ಸ್ತೋತ್ರವಿದೆ.

೪. ಹಿರೇಶಕುನ ತಾಮ್ರಶಾಸನವು.[2]— ರಾಜನು ತನ್ನ ಆಳಿಕೆಯ ಎಂಟನೆಯ ವರ್ಷದ ವೈಶಾಖ ಪೌರ್ಣಮಿಯ ದಿನದಲ್ಲಿ ಸೋಮಶರ್ಮಾರ್ಯನೆಂಬ ಬ್ರಾಹ್ಮಣನಿಗೆ ಕಡಟಿಕಟಿನಿಯೆಂಬ ಗ್ರಾಮವನ್ನೂ ವಾಸ್ತುಕ ಕ್ಷೇತ್ರವನ್ನೂ ಕೊಟ್ಟನು.

೫. ಹಲಸಿಯ ತಾಮ್ರಶಾಸನವು.[3]— ಮೃಗೇಶನು ವೈಜಯಂತಿಯಲ್ಲಿದ್ದಾಗ ತನ್ನ ಆಳಿಕೆಯ ಎಂಟನೆಯ ವರ್ಷವಾದ ವೈಶಾಖ ಸಂವತ್ಸರದ ಕಾರ್ತಿಕ ಪೂರ್ಣಿಮೆಯಂದು ತನ್ನ ತಂದೆಯ ಮೇಲಿನ ಭಕ್ತಿಯಿಂದ ಹಲಸಿಗೆಯಲ್ಲಿ ಜಿನಾಲಯವನ್ನು ಕಟ್ಟಿಸಿ ಯಾಪನೀಯ ನಿರ್ಗ್ರಂಥ ಕೂರ್ಚಕರ ಪೋಷಣೆಗಾಗಿ ಮಾತೃಸರಿತದಿಂದ ಇಂಗಿಣೀಸಂಗಮದ ವರೆಗಿನ ಮೂವತ್ತುಮೂರು ನಿವರ್ತನಗಳ ಭೂಮಿಯನ್ನು ಅರ್ಹಂತರಿಗೆ ದಾನ-ಮಾಡಿದನು. ಈ ಶಾಸನದ ಆಜ್ಞಪ್ತಿಯು ದಾಮಕೀರ್ತಿ ಭೋಜಕನು. ಆಯುಕ್ತಕನು ಸರ್ವಾಧಿಕಾರಿ ಜಿಯಂತನು.

---

[1] *Ep. Carn.*, Vol. IV. Hs. 18.

[2] *Ep. Carn.*; Vol. VIII, Sorab 133.

[3] *Ind. Ant.*, Vol. VI, p. 24.

೬. ತಾಳಗುಂದ ಶಿಲಾಶಾಸನ.[1]— ಇದು ಪ್ರಣವೇಶ್ವರ ದೇವಾಲಯದ ಗರ್ಭಗೃಹದಲ್ಲಿ ಒಂದು ಕಲ್ಲಿನಮೇಲೆ ಕೊರೆಯಲ್ಪಟ್ಟಿದೆ. ರವಿವರ್ಮ ಧರ್ಮಮಹಾರಾಜನ ತಾಯಿಯಾದ ಪ್ರಭಾವತಿಯು ಮೃಗೇಶವರ್ಮನ 'ಪ್ರಿಯ ಭಾರ್ಯೆ'ಯೆಂದೂ ಅವಳು 'ಕೈಕೇಯ ಮಹಾಕುಲ ಪ್ರಸೂತಿ' ಯೆಂದೂ ಇದರಲ್ಲಿ ಬರೆದಿದೆ. ಶಾಸನವು ಅಪೂರ್ಣವಾಗಿದೆ. ಈ ಶಾಸನದ ಕಾಲದಲ್ಲಿ ರವಿವರ್ಮನು ರಾಜನಾಗಿದ್ದನೆಂದು ಊಹಿಸಬಹು ದಾದುದರಿಂದ ಮೃಗೇಶವರ್ಮನ ಮರಣಾನಂತರದಲ್ಲಿ ಪ್ರಭಾವತೀ ದೇವಿಯು ಪತಿಭಕ್ತಿಯಿಂದ ಬ್ರಹ್ಮದಾಯವನ್ನು ಕೊಟ್ಟು ಅದನ್ನು ಕಲ್ಲಮೇಲೆ ಕೆತ್ತಿಸುವಾಗ ಏತಕ್ಕೋ ಅಪೂರ್ಣವಾಗಿ ಉಳಿಸಿದಂತೆ ತೋರುತ್ತದೆ.

ಮೃಗೇಶವರ್ಮನ ಬಳಿಕ ಅವನ ತಮ್ಮನಾದ **ಶಿವಮಾಂಧಾತನು** ಕದಂಬ ಸಿಂಹಾಸನವನ್ನೇರಿದನು. ಇವನ ಎರಡನೆಯ ವರ್ಷದ ಕೂಡಗೇರಿ ತಾಮ್ರಶಾಸನದಲ್ಲಿ ರಾಜನು ತನ್ನ ಗುರುವಾದ (ದತ್ತಾನುಯೋಗ) ಕೌಂಡಿನ್ಯ ಗೋತ್ರದ ತೈತ್ತಿರೀಯ ಚರಣದ ದೇವಶರ್ಮನಿಗೆ ಕೋಳಾಲ[2] ಗ್ರಾಮದಲ್ಲಿ ಭೂಮಿಯನ್ನು ದಾನಮಾಡಿದನೆಂದು ಹೇಳಿದೆ. ಈ ಶಾಸನವನ್ನು ರಹಸ್ಯಾಧಿ ಕೃತ (Private Secretary) ದಾಮೋದರದತ್ತನು ಬರೆದನು. ಇದರ ಲಿಪಿಯು ಮೃಗೇಶವರ್ಮನ ಹಲಸಿ ದೇವಗಿರಿ ಶಾಸನಗಳ ಅಕ್ಷರಗಳನ್ನು ಹೋಲುತ್ತದೆ.[3]

ಶಿವಮಾಂಧಾತನಾದ ಮೇಲೆ ಮೃಗೇಶನ ಹಿರಿಯ ಮಗನಾದ **ರವಿವರ್ಮನು** ರಾಜನಾದನು. ಇವನು ವಿಷ್ಣುವರ್ಮ ಮೊದಲಾದ ರಾಜರನ್ನು ಕೊಂದು ಕಾಂಚೀಪತಿಯಾದ ಚಂಡದಂಡನನ್ನು ನಿರ್ಮೂಲ ನಾಶಮಾಡಿ ಪಲಾಸಿಕೆಯಲ್ಲಿ ಸುಖದಿಂದ ರಾಜ್ಯವಾಳಿದನು. ಈ ವಿಷ್ಣುವರ್ಮನು[4] ಮತ್ತು

---

[1] *Mys. Arch. Rep.*, 1910-11, p. 35.

[2] ತುಮಕೂರು ಜಿಲ್ಲೆಯ ತಿಪಟೂರು, ತುಮಕೂರು ತಾಲ್ಲೂಕುಗಳಲ್ಲಿ ಕೋಳಾಲ ವೆಂಬ ಹೆಸರಿನ ಹಳ್ಳಿಗಳಿವೆ.

[3] ಹಿಂದೆ ನೋಡಿರಿ.

[4] ಡುಬ್ರೂಯಿಲರು ಈ ವಿಷ್ಣುವರ್ಮನು ೧ನೆಯ ಕಷ್ಣವರ್ಮನ ಮಗನೆಂದು ಹೇಳಿ ದ್ದಾರೆ (*Ancient History of the Deccan,* p. 102). 'ಕದಂಬ ಕುಲ' ದಲ್ಲಿ (pp. 41 and 42) ೧ನೆಯ ಕೃಷ್ಣವರ್ಮನ ಮರಣಾನಂತರ ಮೃಗೇಶವರ್ಮನು ವಿಷ್ಣುವರ್ಮನ ಪಟ್ಟಬಂಧಕ್ಕೆ ತಡೆಯನ್ನುಂಟುಮಾಡಿದನೆಂದೂ ವಿಷ್ಣುವರ್ಮನು ತನ್ನ

ಚಂಡದಂಡನು ಯಾರೆಂಬುದು ತಿಳಿದಿಲ್ಲ. ರವಿವರ್ಮನಿಗೆ ಭಾನುವರ್ಮ ಶಿವರಥರೆಂಬ ಇಬ್ಬರು ತಮ್ಮಂದಿರಿದ್ದರು.[1] ಹಲಸಿಗೆಯ ತಾಮ್ರಶಾಸನದಲ್ಲಿ ಭೋಜಕ ಪಂಡರನು ಭಾನುವರ್ಮರಾಜನ ಪ್ರಸಾದದಿಂದ ದಾನಮಾಡಿದಂತೆ ಹೇಳಿರುವುದರಿಂದ ರವಿವರ್ಮ ಭಾನುವರ್ಮರಿಬ್ಬರೂ ಏಕೀಭವಿಸಿ ಆಳುತ್ತಿದ್ದರೆಂದು ತಿಳಿಯಬಹುದು. ಹರಿವರ್ಮನು ತನ್ನ ಚಿಕ್ಕಪ್ಪನಾದ ಶಿವರಥನ ಉಪದೇಶದಿಂದ ದಾನಮಾಡಿದನೆಂದು ಅವನ ಒಂದು ಶಾಸನವು ತಿಳಿಸುತ್ತದೆ. ಇದರಿಂದ ಶಿವರಥನು ಮೃಗೇಶನ ಇನ್ನೊಬ್ಬ ಮಗನೆಂದು ಹೇಳಬಹುದು.

**ರವಿವರ್ಮನ ಕಾಲದ ಶಾಸನಗಳು :**

೧. ನಿಲಂಬೂರು ತಾಮ್ರಶಾಸನವು.[2]— ರಾಜನು ತನ್ನ ಆಳಿಕೆಯ ಐದನೆಯ ವರ್ಷದ ಕಾರ್ತಿಕ ಪೂರ್ಣಿಮೆಯ ದಿವಸದಲ್ಲಿ ಯಜುರ್ವೇದಾ-

---

ಸಾರ್ವಭೌಮನಾದ ಪಲ್ಲವಶಾಂತಿವರನ ಸಾಹಾಯ್ಯದಿಂದ ವಿಘ್ನಗಳನ್ನು ದೂರಮಾಡಿಕೊಂಡು ಆವನಿಂದ ಅಭಿಷಿಕ್ತನಾದನೆಂದೂ ಬರೆದಿದೆ. ಮತ್ತು ತನ್ನ ದೇಶದಲ್ಲಿ ಶಾಂತತೆ ನೆಲಗೊಂಡಮೇಲೆ ವಿಷ್ಣುವರ್ಮನು ತನ್ನ ಪ್ರಭುವಾಗಿದ್ದ ಚಂಡದಂಡನೊಂದಿಗೆ ಆಗ ವೈಜಯಂತಿಯಲ್ಲಿ ಆಳುತ್ತಿದ್ದ ರವಿವರ್ಮನನ್ನು ರಣಾಂಗಣದಲ್ಲಿ ಎದುರಿಸಿದನೆಂದೂ ರವಿವರ್ಮನು ವಿಷ್ಣುವರ್ಮನನ್ನು ಕೊಂದು ಚಂಡದಂಡನನ್ನು ಸೋಲಿಸಿದನೆಂದೂ ಹೇಳಿದೆ. ಈ ಗ್ರಂಥದಲ್ಲಿ ಮಾಡಿರುವ ವಿವೇಚನೆಯಿಂದ ರವಿವರ್ಮನು ತ್ರಿಪರ್ವತದ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನೆಂದು ಭಾಸವಾಗುತ್ತದೆ. ಆದರೆ ವಿಷ್ಣುವರ್ಮನ ಮಗನಾದ ಸಿಂಹವರ್ಮನು ಮಹಾರಾಜನಾಗಿ ಆಳಿದುದರಿಂದಲೂ ೨ನೆಯ ಕೃಷ್ಣವರ್ಮನೇ 'ವೈಜಯಂತೀ ವಿಜಯಯಾತ್ರೆ'ಗೆ ಹೊರಟನೆಂದು ಬೆಣ್ಣೂರು ಶಾಸನದಲ್ಲಿ ಹೇಳಿರುವುದರಿಂದಲೂ ರವಿವರ್ಮನ ಮನೆತನದಲ್ಲಿ ತ್ರಿಪರ್ವತದ ರಾಜ್ಯವು ಉಳಿಯಿತೆಂದು ಹೇಳುವುದು ನಿರಾಧಾರವಾದ ಕಲ್ಪನೆಯೇ ಸರಿ. ಈ ಕಲ್ಪನೆಯೇ ನಿಜವಾಗಿದ್ದರೆ ಸಿಂಹವರ್ಮ ಕೃಷ್ಣವರ್ಮರು ಯಾವ ಭಾಗದಲ್ಲಿ ಆಳುತ್ತಿದ್ದರು ? ವೈಜಯಂತೀ ವಿಜಯಯಾತ್ರೆಯ ಪೂರ್ವದಲ್ಲಿಯೇ ಕೃಷ್ಣವರ್ಮನು "ಕದಂಬಾನಾಂ ಪಂಚಮೋ ಲೋಕಪಾಲಃ ಶ್ರೀಮದ್ಧರ್ಮ ಮಹಾರಾಜಃ" ಎಂದು ಉದ್ದಾಮ ಪದಗಳಿಂದ ವರ್ಣಿಸಲ್ಪಟ್ಟಿದ್ದಾನೆ (ಬೆಣ್ಣೂರು ಶಾಸನ). ಇದರಿಂದ ಅವನು ಕ್ರಮಪ್ರಾಪ್ತವಾದ ತ್ರಿಪರ್ವತದ ರಾಜ್ಯದಲ್ಲಿ ಆಳುತ್ತಿದ್ದನೆಂದೂ ರವಿವರ್ಮನು ವೈಜಯಂತೀ ರಾಜ್ಯದಲ್ಲಿ ರಾಜನಾಗಿದ್ದನೆಂದೂ ತಿಳಿಯುವುದು ಸಮಂಜಸವಾಗುತ್ತದೆ. ರವಿವರ್ಮನು ಕೊಂದ ವಿಷ್ಣುವರ್ಮನು ಕದಂಬನಾಗಿರಲಾರನು. ಇವರಿಬ್ಬರೂ ಕೈಕೇಯ ವಂಶದ ರಾಜಪುತ್ರಿಯರ ಮಕ್ಕಳೆಂದು ಶಾಸನಗಳಲ್ಲಿ ಹೇಳಿದೆ. ಫ್ಲೀಟರು ಈ ವಿಷ್ಣುವರ್ಮನು ಪಲ್ಲವ ವಿಷ್ಣುಗೋಪವರ್ಮನೋ ಅಥವಾ ಅವನ ಸೇನಾಪತಿ ವಿಷ್ಣುವರ್ಮನೋ ಆಗಿರಬೇಕೆಂದು ಹೇಳಿದ್ದಾರೆ ( *Dyn. Kan. Dist.*, p. 322 ).

[1] *Ind. Ant.*, Vol. VI, pp. 28 and 30.

[2] *Ep. Ind.*, Vol. VIII, pp. 146 ff.

ಧ್ಯಾಯಿಯಾದ ಕಾಶ್ಯಪ ಗೋತ್ರದ ಗೋವಿಂದಸ್ವಾಮಿಯೆಂಬ ಬ್ರಾಹ್ಮಣನಿಗೆ ಮೊಗಲೂರ ವಿಷಯದಲ್ಲಿ ಕಿಟುಪಾಸಾನಿ ಗ್ರಾಮದ ಪೂರ್ವದಿಕ್ಕಿನಲ್ಲಿರುವ ಮುಚ್ಚಿಗಿ, ಮಟ್ಟಾವು ಗ್ರಾಮಗಳನ್ನು ದಾನಮಾಡಿದನು.

೨. ಹಲಸಿಯ ಶಾಸನವು.[1]— ರವಿವರ್ಮನ ಆಳಿಕೆಯ ಹನ್ನೊಂದನೆಯ ವರ್ಷದ ಹೇಮಂತದ ಆರನೆಯ ಪಕ್ಷದಲ್ಲಿ ದಶಮಿ ತಿಥಿಯಂದು ರಾಜನ ತಮ್ಮನಾದ ಭಾನುವರ್ಮಭೂಪನು ಪ್ರತಿಪೂರ್ಣಿಮೆಯ ದಿವಸವೂ ಶಾಶ್ವತವಾಗಿ ಜಿನಾಭಿಷೇಕ ನಡೆಯುವುದಕ್ಕಾಗಿ ಭೂಮಿಯನ್ನು ದಾನಮಾಡಿದನೆಂದೂ ಈ ಭಾನುವರ್ಮನ ಆಜ್ಞೆಯಿಂದ ಭೋಜಕ ಪಂಡರನು ಹಲಸಿಗೆಯಲ್ಲಿ ಹದಿನೈದು ನಿವರ್ತನಗಳ ಭೂಮಿಯನ್ನು ದಾನಮಾಡಿದನೆಂದೂ ಬರೆದಿದೆ.

೩. ಸಿರಸಿ ತಾಮ್ರಶಾಸನವು.[2]— ರವಿವರ್ಮನು ತನ್ನ ಆಳಿಕೆಯ ಮೂವತ್ತೈದನೆಯ ವರ್ಷದಲ್ಲಿ ಕಾರ್ತಿಕಮಾಸ ಶುಕ್ಲಪಕ್ಷ ಪಂಚಮಿ ತಿಥಿಯಂದು ವೈಜಯಂತಿಯಲ್ಲಿದ್ದಾಗ ತನ್ನ ಪ್ರಿಯ ವೈದ್ಯನಾದ ನೀಲಕಂಠ ದೇಶಾಮಾತ್ಯನು ಕಟ್ಟಿಸಿದ ಮಹಾದೇವಾಯತನಕ್ಕೆ ಸಾತೇ ಗ್ರಾಮದಲ್ಲಿ ನಾಲ್ಕು ನಿವರ್ತನಗಳ ಭೂಮಿಯನ್ನು ಕೊಟ್ಟನೆಂದು ಹೇಳಿದೆ.

೪. ಹಲಸಿ ತಾಮ್ರಶಾಸನವು.[3]—ದಾಮಕೀರ್ತಿಯ ಮಗನಾದ ಜಯಕೀರ್ತಿ ಪ್ರತೀಹಾರನು ತನ್ನ ಪಿತೃಗಳಿಗೆ ಪುಣ್ಯವಾಗಬೇಕೆಂದು ಪಲಾಸಿಕೆಯಲ್ಲಿ ಜಿನೇಂದ್ರನ ಪೂಜಾದಿಗಳನ್ನು ನಡೆಯಿಸುವುದಕ್ಕೋಸ್ಕರ ಪುರುಖೇಟ ಗ್ರಾಮವನ್ನು ದಾನಮಾಡಿದಂತೆ ಬರೆದಿದೆ. ಇದರಲ್ಲಿ ಕಾಲನಿರ್ದೇಶವಿಲ್ಲ.

೫. ಹಲಸಿ ತಾಮ್ರಶಾಸನವು[4]— ರಾಜನು ದಾಮಕೀರ್ತಿಯ ಮಾತೆಯ ಪ್ರಸಾದದಿಂದ ಜಿನೇಂದ್ರಪೂಜೆಗಾಗಿ ನಾಲ್ಕು ನಿವರ್ತನಗಳ ಭೂಮಿಯನ್ನು ದಾನಮಾಡಿದಂತೆ ಇದು ತಿಳಿಸುತ್ತದೆ. ರವಿವರ್ಮನು ವಿಷ್ಣುವರ್ಮ ಮೊದಲಾದ ರಾಜರನ್ನು ಕೊಂದು ಸಮಸ್ತ ಪೃಥ್ವಿಯನ್ನು

---

[1] *Ind. Ant.*, Vol. VI, p. 28.

[2] *Ep. Ind.*, Vol. XVI, pp. 264 ff.

[3] *Int. And.*, Vol. VI, p. 25.

[4] *Ibid*, p. 29.

ಜಯಿಸಿ ಕಾಂಚೀಶನಾದ ಚಂಡದಂಡನನ್ನು ಸೋಲಿಸಿ ಪಲಾಸಿಕೆಯಲ್ಲಿ ವಾಸವಾಗಿದ್ದನೆಂದು ಹೇಳಿದೆ. ಇದರಲ್ಲಿಯೂ ಕಾಲ ನಿರ್ದೇಶವಿಲ್ಲ.

೬. ಕವಡಿ ಶಿಲಾಶಾಸನವು[1].— ಇದರಲ್ಲಿ ಸಹ ಕಾಲನಿರ್ದೇಶವಿಲ್ಲ. ರವಿ ವರ್ಮನೂ ಅವನ ಹೆಂಡತಿಯೂ ಸತ್ತರೆಂದು ಇದು ಹೇಳುತ್ತದೆ.

ರವಿವರ್ಮನನಂತರ ಅವನ ಮಗನಾದ **ಹರಿವರ್ಮನು** ಸಿಂಹಾಸನವನ್ನೇರಿದನು. ಭಾನುಶಕ್ತಿಯೆಂಬ ಸೇಂದ್ರಕರಾಜನು ಇವನ ಸಾಮಂತನಾಗಿದ್ದನು.[2]

## ಹರಿವರ್ಮನ ಶಾಸನಗಳು :

೧. ಹಲಸಿ ತಾಮ್ರಶಾಸನವು[3].— ರಾಜನು ತನ್ನ ಆಳಿಕೆಯ ನಾಲ್ಕನೆಯ ವರ್ಷದಲ್ಲಿ ಫಾಲ್ಗುಣ ಶುಕ್ಲ ತ್ರಯೋದಶೀ ತಿಥಿಯಂದು ಉಚ್ಚಶೃಂಗಿಯಲ್ಲಿದ್ದಾಗ ಭಾರದ್ವಾಜ ಗೋತ್ರದ ಸಿಂಹಸೇನಾಪತಿಯ ಮಗನಾದ ಮೃಗೇಶನು ಹಲಸಿಗೆಯಲ್ಲಿ ಕಟ್ಟಿಸಿದ ಅರ್ಹದಾಯತನದಲ್ಲಿ ಪೂಜಾದಿಗಳು ನಡೆಯುವುದಕ್ಕಾಗಿ ಚಂದ್ರಕ್ಷಾಂತ ಪ್ರಮುಖ ವಾರಿಷೇಣಾಚಾರ್ಯ ಪಂಥದ ಕೂರ್ಚಕ ಸಂಘಕ್ಕೆ ಸುದ್ದಿಕುಂಡೂರು ವಿಷಯದಲ್ಲಿಯ ವಸುಂತವಾಟಕ ಗ್ರಾಮವನ್ನು ತನ್ನ ಚಿಕ್ಕಪ್ಪನಾದ ಶಿವರಥನ ಉಪದೇಶದ ಮೇರೆಗೆ ದಾನಮಾಡಿದನು.

೨. ಹಲಸಿಯ ಮತ್ತೊಂದು ಶಾಸನವು[4]—ಸೇಂದ್ರಕ ಭಾನುಶಕ್ತಿಯ ವಿಜ್ಞಾಪನೆಯ ಮೇರೆಗೆ ಸಾಧುಜನರ ಉಪಯೋಗಕ್ಕಾಗಿಯೂ ಅಹರಿಷ್ಟಿ ಎಂಬ ಶ್ರಮಣ ಸಂಘದ ಜಿನಾಲಯದಲ್ಲಿ ಪೂಜಾದಿಗಳನ್ನು ನಡೆಯಿಸುವುದಕ್ಕಾಗಿಯೂ ಹರಿವರ್ಮನು ತನ್ನ ಐದನೆಯ ವರ್ಷದಲ್ಲಿ ಪಲಾಸಿಕೆಯಲ್ಲಿದ್ದಾಗ ಮರದೇ ಎಂಬ ಗ್ರಾಮವನ್ನು ದಾನಮಾಡಿದನು. ಧರ್ಮನಂದ್ಯಾಚಾರ್ಯರು ಈ ಶ್ರಮಣ ಸಂಘದ ಅಧ್ಯಕ್ಷರಾಗಿದ್ದರು.

[1] *Ep. Carn.*, Vol. VIII, Sb. 523.

[2] ಚಲುಕ್ಯ ೧ನೆಯ ವಿಕ್ರಮಾದಿತ್ಯನ ಮಾಂಡಲಿಕನಾದ ಜಯಶಕ್ತಿಯ ಮುತ್ತಜ್ಜನಾದ ಶ್ರೀವಲ್ಲಭ ಭಾನುಶಕ್ತಿಯೆಂಬ ಸೇಂದ್ರಕ ರಾಜನೊಬ್ಬನಿದ್ದನು. ಮುಂದೆ ಚಲುಕ್ಯ ಪ್ರಕರಣದಲ್ಲಿ ನೋಡಿರಿ.

[3] *Ind. Ant.*, Vol. VI, p. 30.

[4] *Ind. Ant.*, Vol. VI, p. 31.

೩. ಸಂಗೊಳ್ಳಿ ತಾಮ್ರಶಾಸನವು.[1]— ರಾಜನು ತನ್ನ ಆಳಿಕೆಯ ಎಂಟನೆಯ ವರ್ಷದಲ್ಲಿ ಆಶ್ವಯುಜಾಮಾವಾಸ್ಯೆ ವಿಷುಪದಂದು ವೈಜಯಂತಿಯಲ್ಲಿದ್ದಾಗ ಅಥರ್ವವೇದದ ನಾನಾ ಗೋತ್ರಗಳ ಇಪ್ಪತ್ತುಮೂರು ಜನ ಬ್ರಾಹ್ಮಣರಿಗೆ ತೇದಾಪ ಗ್ರಾಮವನ್ನು ಕೊಟ್ಟನು. ಈ ಶಾಸನದಲ್ಲಿ ಕೊಟ್ಟ ಕಾಲಾಂಗಗಳು ಕ್ರಿ. ಶ. ೫೪೫ ಸೆಪ್ಟೆಂಬರ್ ೨೧ ಗುರುವಾರಕ್ಕೆ ಸರಿಯಾಗುತ್ತವೆಂದು ಇದನ್ನು ಪ್ರಸಿದ್ಧಿಸಿದ ರಾವ್‌ಬಹದ್ದೂರ್ ಕೆ. ಎನ್. ದೀಕ್ಷಿತರವರು ತೋರಿಸಿದ್ದಾರೆ.

ಶಾಂತಿವರ್ಮನ ಸಂತತಿಯಲ್ಲಿ ಹರಿವರ್ಮನೇ ಕದಂಬರ ಕಡೆಯ ರಾಜನಾಗಿದ್ದಿರಬೇಕು. ಅವನಿಗೆ ಮಕ್ಕಳಿದ್ದಂತೆ ಶಾಸನಗಳಿಂದ ತಿಳಿದುಬಂದಿಲ್ಲ.

ಇನ್ನು ತ್ರಿಪರ್ವತದಲ್ಲಿ[2] ಆಳಿದ ೧ನೆಯ ಕೃಷ್ಣವರ್ಮನ ಮಗನಾದ

---

[1] *Ep. Ind.*, Vol. XIV., pp. 163 ff.

[2] ಹೇರಾಸರು ಹಾಸನ ಜಿಲ್ಲೆಯ ಬೇಲೂರು ತಾಲೂಕಿಗೆ ಸೇರಿದ ಹಳೇಬೀಡೇ ತ್ರಿಪರ್ವತವೆಂದು ಹೇಳಿದ್ದಾರೆ (*Karnatak Historical Review*, Vol. I, pp. 13–18). ಹೆಸರಿಗೆ ಅನ್ವರ್ಥವಾಗಿ ಹಳೇಬೀಡಿನ ಹತ್ತಿರದಲ್ಲಿ ಭೈರವಗುಡ್ಡ, ಪುಷ್ಪಗಿರಿ, ಬೆಣ್ಣೆಗುಡ್ಡ ಎಂಬ ಮೂರು ಬೆಟ್ಟಗಳಿವೆಯೆಂದೂ ಬೀರೂರು ಶಾಸನದಲ್ಲಿ ಕೃಷ್ಣವರ್ಮನು ದಕ್ಷಿಣಾಪಥದಲ್ಲಿ ಆಳುತ್ತಿದ್ದನೆಂದು ಹೇಳಿರುವುದರಿಂದ ಹಳೇಬೀಡು ಬನವಾಸಿಯ ದಕ್ಷಿಣದಲ್ಲಿ ಇರಬೇಕೆಂದೂ ಇದರ ಸಮೀಪದಲ್ಲಿ ೨ನೆಯ ಕೃಷ್ಣವರ್ಮನ ತಾಮ್ರಶಾಸನಗಳು ಸಿಕ್ಕಿರುತ್ತವೆಂದೂ ಮೊದಲಾಗಿ ಕಾರಣಗಳನ್ನು ಕೊಟ್ಟಿದ್ದಾರೆ. ಆದರೆ ಇವು ಸಮರ್ಪಕವಾಗಿ ತೋರುವುದಿಲ್ಲ. ಬೀರೂರು ಶಾಸನವು ಕೃತಕವಾಗಿರಬೇಕೆಂದು ಹೇಳಿದ್ದೇವೆ. ಅದನ್ನು ನಂಬಿದರೂ ಹೇರಾಸರ ವಿಧಾನಕ್ಕೆ ಬಲ ಸಾಲದು. ಅದರಲ್ಲಿ ದತ್ತವಾದ ಭೂಮಿಯು ಸಿಂಧುಥಯರಾಷ್ಟ್ರದಲ್ಲಿ (ಬಿಜಾಪುರ ಜಿಲ್ಲೆಯ ಭಾಗದಲ್ಲಿ) ದ್ದುದರಿಂದ ವಿಷ್ಣುವರ್ಮನ ರಾಜ್ಯವು ಬನವಾಸಿಯ ಉತ್ತರದಲ್ಲಿದ್ದ ವಿಜಾಪುರ ಜಿಲ್ಲೆಯನ್ನು ಒಳಗೊಂಡಿತ್ತೆಂದು ಹೇಳಬೇಕಾಗುತ್ತದೆ. ಅಂದರೆ ಕಷ್ಣವರ್ಮನ ರಾಜ್ಯವು ದಕ್ಷಿಣಾಪಥ (?) ದಲ್ಲಿರಲಿಲ್ಲವೆಂದಾಯಿತು. ದಕ್ಷಿಣಾಪಥವೆಂದರೆ ಬನವಾಸಿಯ ದಕ್ಷಿಣಕ್ಕಿದ್ದ ದೇಶವೆಂಬ ಅರ್ಥವು ಹೇಗೆ ಬಂದಿತೋ ತಿಳಿಯದು. ನಣಕ್ಕಾಸ (?) ಪಲ್ಲವನಿಗೂ ಕಷ್ಣವರ್ಮನಿಗೂ ದಾವಣಗೆರೆ ತಾಲೂಕಿನಲ್ಲಿ ಭೀಕರವಾದ ಯುದ್ಧವು ನಡೆದುದರಿಂದ ಪಲ್ಲವನು ಕೃಷ್ಣವರ್ಮನ ರಾಜ್ಯದ ಮೇಲೆ ದಂಡೆತ್ತಿ ಬಂದು ಅಲ್ಲಿ ಅವನನ್ನು ಎದುರಿಸಿ ಸೋಲಿಸಿದನೆಂದು ತಿಳಿಯುವುದು ಸಮಂಜಸ. ಹಳೇಬೀಡು ಕೃಷ್ಣವರ್ಮನ ರಾಜಧಾನಿಯಾಗಿದ್ದರೆ ನಣಕ್ಕಾಸಪಲ್ಲವನು ದಾವಣಗೆರೆಯವರೆಗೆ ಬರಬೇಕಾದ ಅವಶ್ಯವಿಲ್ಲ. ಇದಲ್ಲದೆ ಹಾಸನ ತಾಲೂಕು ಕದಂಬ ಗಂಗರಾಜ್ಯಗಳ ಮೇರೆಯಾಗಿದ್ದುದರಿಂದ ಕೃಷ್ಣವರ್ಮನು ದಕ್ಷಿಣಾಪಥ (?)ದಲ್ಲಿದ್ದ ತನ್ನ ರಾಜ್ಯಕ್ಕೆ ಈಶಾನ್ಯದ ಮೂಲೆಯಲ್ಲಿದ್ದ ಹಳೇಬೀಡನ್ನು ರಾಜಧಾನಿಯಾಗಿ ಮಾಡಿಕೊಳ್ಳುವುದು ಆಡಳಿತಕ್ಕೆ ಸುಕರವಲ್ಲ. ರಾಜಧಾನಿಯು ಸಾಧಾರಣವಾಗಿ

ಯುವರಾಜ ದೇವವರ್ಮನ ದೇವಗಿರಿ ತಾಮ್ರಶಾಸನದಲ್ಲಿ[1] ಕೃಷ್ಣವರ್ಮನು ಸಾಮಂತರಾಜ ವಿಶೇಷರತ್ನ ನಾಗವಂಶಜರನ್ನು ಸೋಲಿಸಿದನೆಂದು ಹೇಳಿದೆ. ನಾಗರು ಸಾತವಾಹನರ ಸಾಮಂತರಾಗಿದ್ದರೆಂದು ಡುಬ್ರ್ಯಾಯಿಲರು ಅಭಿಪ್ರಾಯಪಟ್ಟಿರುತ್ತಾರೆ.[2] ಹೀಗಿದ್ದ ಪಕ್ಷದಲ್ಲಿ ಸಾತವಾಹನರ ರಾಜ್ಯವು ಪಲ್ಲವರ ಕೈಸೇರಿದಾಗ ಈ ನಾಗರು ಅವರ ಮಾಂಡಲಿಕರಾಗಿರಬೇಕು. ಮುಂದೆ ಕದಂಬರು ಪಲ್ಲವರ ರಾಜ್ಯದ ಕೆಲ ಭಾಗವನ್ನು ಆಕ್ರಮಿಸಿದಾಗ ಅವರು ಕದಂಬರ ಪ್ರಭುತ್ವವನ್ನು ಒಪ್ಪಿಕೊಂಡಿರಬೇಕು. ಕೃಷ್ಣವರ್ಮನ ಕಾಲದಲ್ಲಿ ನಾಗರು ಕದಂಬರ ವಿರುದ್ಧವಾಗಿ ದಂಗೆಯೆಬ್ಬಿಸಿದಂತೆ ತೋರುತ್ತದೆ. ಆಗ ಕೃಷ್ಣವರ್ಮನು ಅವರನ್ನು ಸೋಲಿಸಿ ಅವರ ರಾಜ್ಯವನ್ನು ಕಸಿದುಕೊಂಡನೆಂದು ಮೇಲಿನ ಲಿಪಿಯಿಂದ ಊಹಿಸಬಹುದು. ಸುಮಾರು ೫ನೆಯ ಶತಮಾನದಲ್ಲಿ ಬರೆಯಲ್ಪಟ್ಟ ಒಂದು ಶಿಲಾಲಿಪಿಯಲ್ಲಿ[3] ನಣಕ್ಕಾಸ(?)ಪಲ್ಲವನಿಗೂ ಕೃಷ್ಣವರ್ಮರಾಜನಿಗೂ ತುಮುಲ ಯುದ್ಧವಾಗಿ ಅದರಲ್ಲಿ ಕೃಷ್ಣವರ್ಮನ ಸೈನ್ಯವು ಭಗ್ನವಾಯಿತೆಂದೂ ಆ ಪ್ರಸಂಗದಲ್ಲಿ ಸ್ವದೇಶ ಕ್ಷಯವಾಗಲು ಕೈಕೇಯ ವಂಶಜನಾದ ಶಿವನಂದವರ್ಮನು ಕೃಷ್ಣವರ್ಮನ ಪರಾಭವದಿಂದ ನೊಂದು ಅವನ ರಾಜ್ಯದ ಪೂರ್ವ ವೈಭವವನ್ನು ಸಂಪಾದಿಸಿಯೇ ತೀರುವೆನೆಂದು ನಿಶ್ಚಯಿಸಿ ಉಗ್ರವಾದ ತಪಸ್ಸನ್ನಾಚರಿಸತೊಡಗಿದನೆಂದೂ ಬರೆದಿದೆ. ಈ ಶಾಸನದಲ್ಲಿ ಉಕ್ತನಾದ ಕೃಷ್ಣವರ್ಮನು ಕದಂಬನಾಗಿರಬೇಕು. ಅವನ ಪರಾಜಯದಿಂದ ಸಂತಪ್ತನಾದ ಶಿವನಂದವರ್ಮನು ಕದಂಬರಾಜನ ಬಂಧುವಾಗಿದ್ದಂತೆ ತೋರುತ್ತದೆ. ಕದಂಬ ಕೃಷ್ಣವರ್ಮನು ಕೈಕೇಯ ವಂಶದ ರಾಜಪುತ್ರಿಯನ್ನು ಮದುವೆಯಾಗಿದ್ದುದರಿಂದ ಕೈಕೇಯ ವಂಶದ ಈ ಶಿವನಂದವರ್ಮನು ಅವನ ಬಂಧುವಾಗಿದ್ದನೆಂದು ತಿಳಿಯುವುದು ಅಸಮಂಜಸವಲ್ಲ. ಮತ್ತು ಪಲ್ಲವನ

---

ರಾಜ್ಯದ ಮಧ್ಯವರ್ತಿಯಾಗಿರಬೇಕು. ಈ ಕಾರಣಗಳಿಂದ ತ್ರಿಪರ್ವತವು ಹಳೇಬೀಡಾಗಲಾರದು. ಡುಬ್ರ್ಯಾಯಿಲರು ಇದು ದೇವಗಿರಿಯಾಗಿರಬಹುದೆಂದು ಹೇಳಿದ್ದಾರೆ (*Ancient History of the Deccan*, p. 101). ಪ್ರೊ. ಪಾಠಕರು ಇದು ಬೆಳಗಾವಿ ಜಿಲ್ಲೆಯಲ್ಲಿರುವ ಮುರಗೋಡೆಂದು ಅಭಿಪ್ರಾಯಪಟ್ಟಿದ್ದಾರೆ. (*Dyn. Kan. Dist.*, p. 285, note 6). ಮೇಲೆ ಕೊಟ್ಟ ಕಾರಣಗಳಿಂದ ಪಾಠಕರ ಊಹೆಯೇ ಸರಿಯೆಂದು ನಮಗೆ ತೋರುತ್ತದೆ.

[1] *Ind. Ant.*, Vol. VII, p. 33.

[2] *Ancient History of the Deccan*, p. 50.

[3] *Ep. Carn.*, Vol. XI, p. 210, D. G., 161.

ಪ್ರತಿಕಕ್ಷಿಯಾಗಿ ಹೋರಾಡಿದ ಕೃಷ್ಣವರ್ಮನು ಆ ಹೆಸರಿನ ಕದಂಬರಾಜನೇ ಆಗಿರಬೇಕೆಂದು ಸ್ಪಷ್ಟವಾಗುತ್ತದೆ.

ಕೃಷ್ಣವರ್ಮನು ಅಶ್ವಮೇಧಯಾಜಿಯಾಗಿದ್ದನೆಂದು ಮೇಲೆ ಹೇಳಿದ ದೇವಗಿರಿ ಶಾಸನದಲ್ಲಿಯೂ ವಿಷ್ಣುವರ್ಮನ ಹೆಬ್ಬಟ ಶಾಸನದಲ್ಲಿಯೂ ಎರಡನೆಯ ಕೃಷ್ಣವರ್ಮನ ಶಾಸನದಲ್ಲಿಯೂ ಉಕ್ತವಾಗಿದೆ.[1] ಇವನು ಪಲ್ಲವರ ಮೇಲಿನ ತನ್ನ ವೈರವನ್ನು ತೀರಿಸಿಕೊಂಡು ದಿಗ್ವಿಜಯಮಾಡಿಕೊಂಡು ಬಂದಮೇಲೆ ಈ ಅಶ್ವಮೇಧಯಾಗವನ್ನು ಮಾಡಿರಬಹುದು. ಮೃಗೇಶವರ್ಮನು 'ಪಲ್ಲವ ಪ್ರಲಯಾನಲ'ನಾಗಿದ್ದನೆಂದು ಹಲಸಿ ತಾಮ್ರಶಾಸನದಲ್ಲಿ ಹೇಳಿರುವುದರಿಂದ ಪಲ್ಲವ ಪರಾಜಯದಲ್ಲಿ ಇವನು ಕೃಷ್ಣವರ್ಮನಿಗೆ ಬೆಂಬಲವನ್ನು ಕೊಟ್ಟಿರಬೇಕು. ಮೃಗೇಶವರ್ಮನ ಹೆಂಡತಿಯು ಕೈಕೇಯ ಕುಲದವಳೇ ಆಗಿದ್ದುದರಿಂದ ಅವನು ಕೃಷ್ಣವರ್ಮನ ಹಿತೇಚ್ಛುವಾಗಿ ಪಲ್ಲವರನ್ನು ಸೋಲಿಸುವುದರಲ್ಲಿ ಭಾಗತೆಗೆದುಕೊಂಡಿರಬೇಕು. ಈ ಹಲಸಿ ತಾಮ್ರಶಾಸನವು ಮೃಗೇಶವರ್ಮನ ಎಂಟನೆಯ ವರ್ಷದಲ್ಲಿ ಹುಟ್ಟಿದುದರಿಂದ ಪಲ್ಲವರೊಡನೆ ಆದ ಯುದ್ಧವು ಸುಮಾರು ಕ್ರಿ. ಶ. ೪೮೦ಕ್ಕಿಂತ ಮುಂಚೆ ನಡೆದಿರಬೇಕು.

ಕೃಷ್ಣವರ್ಮನಿಗೆ **ವಿಷ್ಣುವರ್ಮ ದೇವವರ್ಮ**ರೆಂಬ ಇಬ್ಬರು ಮಕ್ಕಳಿದ್ದರು. ವಿಷ್ಣುವರ್ಮನು ಕೈಕೇಯ ವಂಶದ ರಾಜಕುಮಾರಿಯ ಮಗನು.[2] ಬೀರೂರು ತಾಮ್ರಶಾಸನದಲ್ಲಿ[3] ಇವನು ಕೃಷ್ಣವರ್ಮನ ಹಿರಿಯ ಮಗನೆಂದು ಹೇಳಿದೆ. ದೇವವರ್ಮನು ಯುವರಾಜನಾಗಿದ್ದನೆಂದು ದೇವಗಿರಿ

---

[1] *Mys. Arch. Rep.*, 1925, p 98; *Ep. Carn.*, Vol. V, p. 827; *Ep. Ind.*, Vol. VI, p. 18; ವಿಷ್ಣುವರ್ಮನ ಬೀರೂರು ಕೃತಕಶಾಸನದಲ್ಲಿಯೂ (*Ep. Carn.*, Vol. VI, Kd. 162) ಈ ವಿಶೇಷಣವು ಕೊಡಲ್ಪಟ್ಟಿದೆ.

[2] ಬನ್ನಹಳ್ಳಿ ತಾಮ್ರಶಾಸನ (*Ep. Ind.*, Vol. VI, p. 18).

[3] ಇದರಲ್ಲಿ ಕೃಷ್ಣವರ್ಮ ಮಹಾರಾಜನ ಜ್ಯೇಷ್ಠತನಯನಾದ ವಿಷ್ಣುವರ್ಮ ಧರ್ಮ ಮಹಾರಾಜನು 'ಕರ್ಣಾಟದೇಶ ಭೂವರ್ಗಭರ್ತೃ' ವಾದ 'ಜ್ಯೇಷ್ಠ ಪಿತೃ' ಶಾಂತಿವರ-ವರ್ಮ ಧರ್ಮಮಹಾರಾಜನ ಅನುಜ್ಞೆಯಿಂದ ಸಿಂಧುಥಯರಾಷ್ಟ್ರದಲ್ಲಿದ್ದ ಕತಟ್ಟಾಕ ಗ್ರಾಮವನ್ನು ನಂದಪರಾಜ ಮಾರ್ಗದ ಮಗ್ಗುಲಿನಲ್ಲಿ ಹರಿಯುವ ಕರ್ಣೇಸಕ ನದಿಯ ಸೇತುವಿನ ಸಮೀಪದಲ್ಲಿದ್ದ ಭೂಮಿಯನ್ನು ಎಂಭತ್ತೈದು ಜನ ಬ್ರಾಹ್ಮಣರಿಗೆ ದಾನಮಾಡಿದನೆಂದು ಹೇಳಿದೆ. ಈ ಶಾಸನದ ಭಾಷೆ ಅಶುದ್ಧ, ಲಿಪಿ ಆಗಿನ ಕಾಲಕ್ಕೆ ಸರಿಯಿಲ್ಲ. ವಿಷ್ಣುವರ್ಮನು ರಾಜನಾಗಿದ್ದಾಗ ಶಾಂತಿವರ್ಮನು ಬದುಕಿದ್ದನೆಂಬ ಅಭಿಪ್ರಾಯವು ಈ ಶಾಸನದಿಂದ ವ್ಯಕ್ತವಾಗುತ್ತದೆ. ಆದರೆ ಇದು ಅಸಂಭವ. ಇವೆಲ್ಲ ಕಾರಣಗಳಿಂದ ಈ ಶಾಸನವು ಕೃತಕವೆಂದು ಹೇಳಬೇಕಾಗುತ್ತದೆ.

ಶಾಸನದಲ್ಲಿ ಬರೆದಿರುವುದರಿಂದು ಯೌವರಾಜ್ಯ ಪದವಿಯು ಚಿಕ್ಕವನಾದ ದೇವವರ್ಮನಿಗೆ ಹೇಗೆ ಬಂದಿತೆಂಬುದನ್ನು ಹೇಳಲಿಕ್ಕಾಗುವುದಿಲ್ಲ.

ಕೃಷ್ಣವರ್ಮನ ತರುವಾಯ **ವಿಷ್ಣುವರ್ಮನೂ** ಅವನಾದ ಮೇಲೆ **ಸಿಂಹವರ್ಮನೂ** ರಾಜ್ಯವಾಳಿದರು. ಸಿಂಹವರ್ಮನ ಮಗನಾದ **೨ನೆಯ ಕೃಷ್ಣವರ್ಮನು** ಬಹು ಪ್ರಖ್ಯಾತನಾದ ರಾಜನು. ಇವನು ಸ್ವಬಾಹುಬಲದಿಂದ ತನ್ನ ರಾಜ್ಯವನ್ನು ವಿಸ್ತರಿಸಿದನು. ಇವನ ಆಳಿಕೆಯ ಏಳನೆಯ ವರ್ಷದ ಅಂದರೆ ಕ್ರಿ. ಶ. ೫೫೨ರಲ್ಲಿ ಹುಟ್ಟಿದ ಬನ್ನಹಳ್ಳಿ ತಾಮ್ರಶಾಸನದಲ್ಲಿ[1] ಇವನು ಬಳ್ಳಾವಿ ವಿಷಯದಲ್ಲಿಯ ಕೋಳಾಲಸಲ್ಲೂರು ಗ್ರಾಮವನ್ನು ವಿಷ್ಣುಶರ್ಮನೆಂಬ ಬ್ರಾಹ್ಮಣನಿಗೆ ದಾನಮಾಡಿದನೆಂದು ಹೇಳಿದೆ. ಬಳ್ಳಾವಿ ವಿಷಯವು ಸೇಂದ್ರಕ ವಿಷಯದ ಒಂದು ಭಾಗವಾಗಿತ್ತು. ಸೇಂದ್ರಕರು ಹರಿವರ್ಮನ ಮಾಂಡಲಿಕರಾಗಿದ್ದರೆಂದು ಹಿಂದೆಯೇ ಹೇಳಿದ್ದೇವೆ. ಆದುದರಿಂದ ತ್ರಿಪರ್ವತದ ಕದಂಬರು ಕ್ರಿ. ಶ. ೫೫೨ಕ್ಕೆ ಮುಂಚೆಯೇ ಸೇಂದ್ರಕ ವಿಷಯದವರೆಗೂ ತಮ್ಮ ರಾಜ್ಯವನ್ನು ಹಬ್ಬಿಸಿದ್ದರೆಂದು ಹೇಳಬೇಕಾಗುತ್ತದೆ. ಶಾಂತಿವರ್ಮನ ಸಂತತಿಯ ರಾಜರ ವಶದಲ್ಲಿದ್ದ ವೈಜಯಂತಿಯೂ ಇದರಲ್ಲಿ ಅಂತರ್ಗತವಾಗಿರಬೇಕು. ಕೃಷ್ಣವರ್ಮನ ಆಳಿಕೆಯ ಹತ್ತೊಂಬತ್ತನೆಯ ವರ್ಷದ ಸಿರಸಿ ಶಾಸನದಲ್ಲಿ ವೈಜಯಂತಿಯು ಇವನ ರಾಜಧಾನಿಯಾಗಿತ್ತೆಂದು ಹೇಳಿದೆ.[2] ಬೆಣ್ಣೂರು ತಾಮ್ರಶಾಸನವು[3] ಕೃಷ್ಣವರ್ಮನು "ವೈಜಯಂತೀ ವಿಜಯಯಾತ್ರಾಮಭಿಪ್ರಸ್ಥಿತಃ" (ವೈಜಯಂತೀ ವಿಜಯಯಾತ್ರೆಗಾಗಿ ಹೊರಟನು) ಎಂದು ಹೇಳುವುದರಿಂದ ಅವನು ಹರಿವರ್ಮನನ್ನು ಈ ಪ್ರಸಂಗದಲ್ಲಿ ಸೋಲಿಸಿ ಅವನ ರಾಜ್ಯವನ್ನು ಕೈವಶಪಡಿಸಿಕೊಂಡಿರಬಹುದು. ಆದುದರಿಂದಲೇ ಮೇಲೆ ಹೇಳಿದಂತೆ ಕೃಷ್ಣವರ್ಮನಿಗೆ ವೈಜಯಂತಿಯಲ್ಲಿದ್ದು ಶಾಸನವನ್ನು ಕೊಡಲು ಶಕ್ಯವಾಯಿತು. ಬನ್ನಹಳ್ಳಿ ಶಾಸನದಲ್ಲಿ ಕೃಷ್ಣವರ್ಮನನ್ನು ವರ್ಣಿಸುವ "ಸ್ವವೀರ್ಯ ಬಲಪರಾಕ್ರಮೋಪಾರ್ಜಿತರಾಜ್ಯಶ್ರಿಯಾ" ಎಂಬ ವಿಶೇಷಣದಿಂದ ಅವನು ಸ್ವಬಾಹುಬಲದಿಂದ ಹೊಸದಾಗಿ ರಾಜ್ಯವನ್ನು ಗೆದ್ದನೆಂದು ತಿಳಿಯಬಹುದು. ಹರಿವರ್ಮನು ಕ್ರಿ. ಶ. ೫೪೫ರಲ್ಲಿ ವೈಜಯಂತಿಯಲ್ಲಿದ್ದನೆಂದು ಸಂಗೊಳ್ಳಿ ಶಾಸನದಿಂದ ತಿಳಿಯುವುದರಿಂದ ಈ ವೈಜಯಂತೀ ವಿಜಯವು[4]

[1] *Ep. Ind.*, Vol. VI, p. 18.
[2] *Ep. Ind.*, Vol, XVI, pp. 264. ff.
[3] *Ep. Carn* , Vol. V, p. 827.
[4] ಈ ವಿಜಯಯಾತ್ರೆಯಲ್ಲಿ ಕೃಷ್ಣವರ್ಮನ ಹಗೆಯು ಹರಿವರ್ಮನಾಗಿ ಇರಬೇಕೆಂಬುದರಲ್ಲಿ ಸಂದೇಹವಿಲ್ಲ. 'ಕದಂಬಕುಲ'ದಲ್ಲಿ ಈ ದಂಡಯಾತ್ರೆಯು ಸೇಂದ್ರಕರ ಮೇಲೆ ಇದ್ದಿರಬೇಕೆಂದು ಬರೆದಿದೆ. ಆದರೆ ವೈಜಯಂತಿಯು ಸೇಂದ್ರಕರ ವಶದಲ್ಲಿದ್ದಿಲ್ಲವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಕ್ರಿ. ಶ. ೫೪೫ — ಕ್ರಿ. ಶ. ೫೫೨ರ ಮಧ್ಯದಲ್ಲಿ ಸಿದ್ಧಿಸಿರಬೇಕು. ಬೆಣ್ಣೂರು ತಾಮ್ರಶಾಸನದ ಕಾಲಾಂಗಗಳು ಅಪೂರ್ಣವಾಗಿವೆ. ಅವು ಪೂರ್ಣವಾಗಿದ್ದರೆ ಈ ಸಂಗತಿ ಸಂಭವಿಸಿದ ಕಾಲವನ್ನು ನಿಃಸಂದೇಹವಾಗಿ ನಿಶ್ಚಯಿಸಬಹುದಾಗಿತ್ತು. ವೈಜಯಂತೀಪುರವು ೨ನೆಯ ಕೃಷ್ಣವರ್ಮನ ಕೈಸೇರಿದ ಮೇಲೆ ಹರಿವರ್ಮನ ಪಾಡೇನಾಯಿತೆಂಬುದು ಗೊತ್ತಿಲ್ಲ.

## ೨ನೆಯ ಕೃಷ್ಣವರ್ಮನ ಶಾಸನಗಳು:

೧. ಬನ್ನಹಳ್ಳಿ ತಾಮ್ರಶಾಸನವು.[1]— ರಾಜನು ತನ್ನ ಏಳನೆಯ ವರ್ಷದ ಕಾರ್ತಿಕ ಶುಕ್ಲ ಪಂಚಮೀ ಜ್ಯೇಷ್ಠಾ ನಕ್ಷತ್ರದಂದು ತುರಿಯಲ್ಲ ಗೋತ್ರ ಪ್ರವರಗಳುಳ್ಳ ಹರಿದತ್ತ ಶ್ರೇಷ್ಠಿಯ ಉಪದೇಶದ ಮೇರೆಗೆ ಕೌಶಿಕ ಗೋತ್ರದ ವಿಷ್ಣುಶರ್ಮನೆಂಬ ಬ್ರಾಹ್ಮಣನಿಗೆ ವಳ್ಳಾವಿ ವಿಷಯದಲ್ಲಿದ್ದ ಕೋಳಾಲಸಲ್ಲೂರು ಗ್ರಾಮವನ್ನು ದಾನಮಾಡಿದನು.

೨. ಸಿರಸಿ ತಾಮ್ರಶಾಸನವು.—ರಾಜನು ತನ್ನ ಹತ್ತೊಂಬತ್ತನೆಯ ವರ್ಷದ ಕಾರ್ತಿಕ ಶುದ್ಧ ಪೌರ್ಣಿಮೆಯ ದಿನದಲ್ಲಿ ವೈಜಯಂತಿಯಲ್ಲಿದ್ದಾಗ ಸೋಮಯಾಜಿಯೂ ಋಗ್ವೇದ ಪಾರಗನೂ ಆದ ವಾರಾಹೀ ಗೋತ್ರದ ಸೋಮಸ್ವಾಮಿಯೆಂಬ ಬ್ರಾಹ್ಮಣನಿಗೆ ಕರವನ್ನಾಡ್ಗ ವಿಷಯದಲ್ಲಿಯ ಗಿರಿಗಡ ಗ್ರಾಮದಲ್ಲಿ ಕಮುಕಪಲ್ಲಿಯನ್ನು ಸರ್ವಪರಿಹಾರವಾಗಿ ಕೊಟ್ಟನು.

೩. ಬೆಣ್ಣೂರು ತಾಮ್ರಶಾಸನವು.— ಈ ಶಾಸನದ ಕಾಲವು ಪೌಷಶುಕ್ಲ ಪ್ರತಿಪದೆಯೆಂದು ಮಾತ್ರ ಕೊಟ್ಟಿದೆ. ಕೃಷ್ಣವರ್ಮನಿಗೆ ದೋಷರಾಶಿ ವರ್ಮನೆಂದೂ ಇವನ ಅಜ್ಜನಾದ ವಿಷ್ಣುವರ್ಮನಿಗೆ ವಿಷ್ಣುದಾಸನೆಂದೂ ಹೆಸರುಗಳು ಕೊಡಲ್ಪಟ್ಟಿವೆ. ರಾಜನು ಸೇಂದ್ರಕ ವಿಷಯದಲ್ಲಿ ಪಲ್ಮಡಿ ಗ್ರಾಮದಲ್ಲಿಯ ರಾಜಭಾಗದ ದಶಬಂಧವನ್ನೂ ಹತ್ತು ನಿವರ್ತನಗಳ ಭೂಮಿಯನ್ನೂ ಭವಸ್ವಾಮಿಯೆಂಬ ಬ್ರಾಹ್ಮಣನಿಗೆ ದಾನಮಾಡಿದನೆಂದು ಬರೆದಿದೆ. ಇದರಲ್ಲಿ ಕೃಷ್ಣವರ್ಮನು ವೈಜಯಂತೀ ವಿಜಯಯಾತ್ರೆಗೆ ಹೊರಟನೆಂದು ಬರೆದಿರುವುದರಿಂದಲೂ[2] ದತ್ತಿಯು ಸೇಂದ್ರಕ

---

[1] *Ep. Ind.* Vol. VI, p. 18.

[2] "ಕದಂಬಾನಾಂ ಪಂಚಮೋ ಲೋಕಪಾಲಃ ಶ್ರೀಮದ್ಧರ್ಮ್ಮಾ ಮಹಾರಾಜಃ ವಿಜಯಶಿವ ಕೃಷ್ಣವರ್ಮ್ಮಾ ವೈಜಯಂತೀ ವಿಜಯಯಾತ್ರಾಮಭಿಪ್ರಸ್ಥಿತಃ" ಎಂದು ಬರೆದಿದೆ.

ವಿಷಯದಲ್ಲಿದ್ದುದರಿಂದಲೂ ವೈಜಯಂತಿಯನ್ನು ಸ್ವಾಧೀನಪಡಿಸಿಕೊಂಡ ಮೇಲೆ ಈ ಶಾಸನವು ಕೊರೆಯಲ್ಪಟ್ಟಿತೆಂದು ಹೇಳಬಹುದು. ಹಾಗಿದ್ದ ಪಕ್ಷದಲ್ಲಿ ಇದರ ಕಾಲವು ರಾಜನ ಏಳನೆಯ ವರ್ಷಕ್ಕಿಂತ ಹಿಂದೆ ಇದ್ದಿರಬೇಕು.[1]

ಕೃಷ್ಣವರ್ಮನ ತರುವಾಯ ಅವನ ಮಗನಾದ **ಅಜವರ್ಮನೂ** ಅವನಾದ ಮೇಲೆ ಅವನ ಮಗ **ಭೋಗಿವರ್ಮನೂ** ರಾಜ್ಯವಾಳಿದರು. ಭೋಗಿವರ್ಮ ಮಹಾರಾಜನು ತನ್ನ ಮಗ ವಿಷ್ಣುವರ್ಮನ ವಿಜ್ಞಾಪನೆಯ ಮೇರೆಗೆ ತಗರೇ ವಿಷಯದಲ್ಲಿದ್ದ ತಗರೇ ಮಹಾಗ್ರಾಮಾಂತರ್ಗತವಾದ ಇಪ್ಪತ್ತನಾಲ್ಕು ಹಳ್ಳಿಗಳಲ್ಲಿ ಕಿಱುಕೂಡಲೂರನ್ನು ಕಶ್ಯಪ ಗೋತ್ರದ ಭೂತ ಶರ್ಮನಿಗೆ ದಾನಮಾಡಿದನೆಂದು ತಗರೇ ತಾಮ್ರಶಾಸನದಲ್ಲಿ ಹೇಳಿದೆ.[2]

ಶಿವಮೊಗ್ಗೆ ತಾಮ್ರಶಾಸನದಲ್ಲಿ[3] ಕುಮಾರವರ್ಮ ಮಹಾರಾಜನ ಮಗನಾದ **ಮಾಂಧಾತರಾಜನು** ಉಚ್ಚಶೃಂಗಿಯಲ್ಲಿ ರಾಜ್ಯವಾಳುತ್ತಿದ್ದಾಗ ತನ್ನ ಆಳಿಕೆಯ ಐದನೆಯ ವರ್ಷದಲ್ಲಿ ಕಾರ್ತಿಕಮಾಸ ಶುಕ್ಲಪಕ್ಷ ದ್ವಾದಶಿಯಂದು ಆತ್ರೇಯ ಗೋತ್ರದ ತ್ರಯಂಬಕಸ್ವಾಮಿಯೆಂಬ ಬ್ರಾಹ್ಮಣನಿಗೆ ಫಾಲ್ಗುಟೀನಿ ಕಗ್ಗಿ ಗ್ರಾಮಗಳಲ್ಲಿ ಭೂಮಿಯನ್ನು ಕೊಟ್ಟಂತೆ ಹೇಳಿದೆ. ಕದಂಬ ವಂಶಾವಳಿಯಲ್ಲಿ ಇವರ ಸ್ಥಾನವನ್ನು ನಿರ್ಧಾರಮಾಡುವುದಕ್ಕೆ ಸಾಕಾದಷ್ಟು ಆಧಾರಗಳಿಲ್ಲ.[4] ಉಚ್ಚಶೃಂಗಿಯು ಹರಿವರ್ಮನ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ಹಲಸಿಶಾಸನದಿಂದ ತಿಳಿದಿದ್ದೇವೆ.

ಗೇರಸೊಪ್ಪೆಯ ಜಲಪಾತದ ಹತ್ತಿರದಲ್ಲಿ ಬಂಡೆಗಲ್ಲಿನ ಮೇಲೆ ಕೊರೆದಿರುವ ಒಂದು ಲಿಪಿಯಲ್ಲಿ[5] ಕದಂಬಕುಲದ **ದಾಮೋದರನೃಪನ** ನಿರ್ದೇಶವಿದೆ. ಅವನು

---

[1] ಬನ್ನಹಳ್ಳಿ ಶಾಸನದ ಕಾಲಕ್ಕೆ ಮುಂಚೆಯೇ ವೈಜಯಂತಿಯು ಕೃಷ್ಣವರ್ಮನ ವಶಕ್ಕೆ ಬಂದಿರಬೇಕೆಂದು ಮೇಲೆ ಹೇಳಿದ್ದೇವೆ.

[2] *Mys. Arch. Rep.*, 1918, p. 35.

[3] *Ibid.*, 1911, p. 31. ಈ ಶಾಸನದ ಮುದ್ರೆಯ ಮೇಲೆ ಸಿಂಹಲಾಂಛನವಿದೆ.

[4] ಮಾಂಧಾತರಾಜನಿಗೆ 'ಧರ್ಮಮಹಾರಾಜ' ಮೊದಲಾದ ಬಿರುದುಗಳಿಲ್ಲವಾದುದರಿಂದ ಕದಂಬರ ಅವನತಿಯ ಕಾಲದಲ್ಲಿ ೨ನೆಯ ಕೃಷ್ಣವರ್ಮನು ಹರಿವರ್ಮನನ್ನು ಸೋಲಿಸಿ ವೈಜಯಂತಿಯನ್ನಾಕ್ರಮಿಸಿಕೊಂಡನಂತರ ಹರಿವರ್ಮನ ಪಕ್ಷಕ್ಕೆ ಸೇರಿದ ಮಾಂಧಾತನು ಉಚ್ಚಶೃಂಗಿಯ ರಾಜಧಾನಿಯಿಂದ ಚಿಕ್ಕ ಪ್ರಾಂತ್ಯವನ್ನಾಳುತ್ತಿದ್ದಂತೆ ತೋರುತ್ತದೆ

[5] ಕೊಣ್ಣೂರ ಬಂಡೆಗಲ್ಲು ಶಾಸನ ( *Ind., Ant.*, Vol. XXI, p. 93 ).

ಪಿತೃಭಕ್ತನೂ ಸತ್ಯೋತ್ಸಾಹಸಂಪನ್ನನೂ ಪ್ರತಾಪಶಾಲಿಯೂ ಆಗಿದ್ದನೆಂದು ಒರೆದಿದೆ. ಲಿಪಿಶಾಸ್ತ್ರದ ದೃಷ್ಟಿಯಿಂದ ಇವನು ಕದಂಬರ ಕಡೆಯ ಕಾಲದವನಾಗಿದ್ದನೆಂದು ಹೇಳಬಹುದು.

ಚಲುಕ್ಯರ ೧ನೆಯ ಪುಲಕೇಶಿಯು ವಾತಾಪಿಯಲ್ಲಿ ನೆಲಸಿದ್ದನೆಂದು ಐಹೊಳೆಯ ಶಿಲಾಲಿಪಿಯಲ್ಲಿ ಹೇಳಿರುವುದರಿಂದ ಇವನು ಕದಂಬರ ಮಾಂಡಲಿಕನಾಗಿದ್ದು ಅವರು ನಿರ್ಬಲರಾದ ಸಮಯದಲ್ಲಿ ತನ್ನದೊಂದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿಕೊಂಡಿರಬೇಕು.[1] ಇವನ ಮಗನಾದ ಕೀರ್ತಿವರ್ಮನು ಕದಂಬ ಕದಂಬಕವನ್ನು ಚೆದರಿಸಿದನೆಂದು ಹೇಳಿರುವುದರಿಂದ ಅವನು ಅವರ ರಾಜ್ಯದ ಕೆಲಭಾಗವನ್ನಾಕ್ರಮಿಸಿರಬೇಕು. ಉಳಿದ ಭಾಗಗಳಲ್ಲಿ ಅಂದರೆ ಕೇವಲ ದಕ್ಷಿಣಕ್ಕಿದ್ದ ತಗರೇ ಪ್ರಾಂತದಲ್ಲಿ ಕದಂಬ ಅಜವರ್ಮ ಭೋಗಿವರ್ಮರು ಆಳುತ್ತಿದ್ದರೆಂದು ಭೋಗಿವರ್ಮನ ತಗರೇ ಶಾಸನ[2]ದಿಂದ ಊಹಿಸಬಹುದು. ೭ನೆಯ ಶತಮಾನದ ಆದಿಭಾಗದಲ್ಲಿ ಮಂಗಲೇಶನ ಮರಣಾನಂತರದಲ್ಲಿ ಉಂಟಾಗಿದ್ದ ಅರಾಜಕತೆಯ ಸಮಯವನ್ನು ಸಾಧಿಸಿ ಕದಂಬ ಮಾಂಡಲಿಕರು ವೈಜಯಂತಿಯಲ್ಲಿ ಸ್ವಾತಂತ್ರ್ಯ ಪತಾಕೆಯನ್ನು ನಟ್ಟಂತೆ ತೋರುತ್ತದೆ. ಆದರೆ ಪ್ರಬಲನಾದ ೨ನೆಯ ಪುಲಿಕೇಶಿಯು ವರದಾನದಿಯ ದಡದಲ್ಲಿದ್ದ ವನವಾಸಿಯನ್ನೂ ಅನೇಕ ದುರ್ಗಗಳನ್ನೂ ಸ್ವಾಧೀನಪಡಿಸಿಕೊಂಡು ಉದ್ಧಟರಾಗಿದ್ದ ಕದಂಬರಾಜರ ಹೆಮ್ಮೆಯನ್ನು ಮುರಿದನು. ಇಲ್ಲಿಂದಾಚೆಗೆ ಕದಂಬರು ಸಾಮಂತರಾಗಿಯೇ ಉಳಿದರು.

## ಕದಂಬರ ರಾಜ್ಯವಿಸ್ತಾರ

ಮಯೂರಶರ್ಮನು ಪಶ್ಚಿಮದಲ್ಲಿ ಸಮುದ್ರ ಪೂರ್ವದಿಕ್ಕಿನಲ್ಲಿ ಪ್ರೇಹರ(?) ಇವುಗಳ ಮಧ್ಯದಲ್ಲಿದ್ದ ರಾಜ್ಯವನ್ನು ಪಲ್ಲವರಿಂದ ತೆಗೆದುಕೊಂಡನೆಂದು ಮೇಲೆ ಹೇಳಿದ್ದೇವೆ. ಪ್ರೇಹರವು ಯಾವುದೆಂಬುದು ಗೊತ್ತಾಗಿಲ್ಲ. ತಾಳಗುಂದವು ಕದಂಬರ ಮೂಲಸ್ಥಾನವಾದುದರಿಂದಲೂ ಮಳವಳ್ಳಿಯಲ್ಲಿ ಅವರದೊಂದು ಪ್ರಾಕೃತ ಶಾಸನವು ಸಿಕ್ಕಿರುವುದರಿಂದಲೂ ಹಲಸಿ ವೈಜಯಂತಿಗಳು ಮೊದಲಿನಿಂದಲೂ ಅವರ ರಾಜಧಾನಿಗಳಾಗಿದ್ದುದರಿಂದಲೂ ಶಿವಮೊಗ್ಗೆ, ಉತ್ತರ ಕನ್ನಡ, ಧಾರವಾಡ, ಬೆಳಗಾವಿ ಜಿಲ್ಲೆಗಳು ಕದಂಬರ ಆಧಿಪತ್ಯಕ್ಕೆ ಒಳಪಟ್ಟಿದ್ದ

---

[1] ಫ್ಲೀಟರು ಜಯಸಿಂಹ ರಣರಾಗರೂ ಕದಂಬರ ಮಾಂಡಲಿಕರಾಗಿದ್ದಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ ( *Dyn. Kan. Dist.*, p. 343 ).

[2] *Mys. Arch. Rep.*, 1918, p. 35.

ವೆಂದು ಸಾಮಾನ್ಯವಾಗಿ ಹೇಳಬಹುದು. ಮಯೂರಶರ್ಮನು ಶ್ರೀಪರ್ವತದ ವರೆಗಿನ ರಾಜ್ಯವನ್ನು ಆಕ್ರಮಿಸಿದ್ದನೆಂದು ತಾಳಗುಂದಶಾಸನದಲ್ಲಿ ಹೇಳಿರುವುದ ರಿಂದ ಪಲ್ಲವರು ಅವನಿಗೆ ಕೊಟ್ಟಿದ್ದ ರಾಜ್ಯವು ಪ್ರಾಯಶಃ ಶ್ರೀಪರ್ವತವನ್ನು ಒಳಗೊಂಡಿರಬೇಕು. ಉಚ್ಚಂಗಿದುರ್ಗವು [1] ಹರಿವರ್ಮ ಮಾಂಧಾತರ ರಾಜಧಾನಿಯಾಗಿದ್ದುದರಿಂದ ಅದು ಅವರ ರಾಜ್ಯದ ಈಶಾನ್ಯದಿಕ್ಕಿನಲ್ಲಿದ್ದ ಪ್ರಾಂತದ ಮಧ್ಯವರ್ತಿಯಾಗಿರಬೇಕು. ಬಾದಾಮಿಯು ಕದಂಬರ ರಾಜ್ಯದಲ್ಲಿ ತ್ತೆಂದೂ ಅಲ್ಲಿ ಪುಲಿಕೇಶಿಯು ಮಾಂಡಲಿಕನಾಗಿ ಆಳುತ್ತಿದ್ದನೆಂದೂ ಹಿಂದೆ ಹೇಳಿದ್ದೇವೆ. ಇದರಿಂದ ಬಿಜಾಪುರ ಜಿಲ್ಲೆಯ ಕೆಲಭಾಗವು ಕದಂಬರ ಆಳಿಕೆ ಗೊಳಪಟ್ಟಿರಬೇಕು. ವಿಷ್ಣುವರ್ಮನ ಕೃತಕ ಬೀರೂರು ತಾಮ್ರಶಾಸನದಿಂದ ಸಿಂಧುಥಯ ರಾಷ್ಟ್ರದಲ್ಲಿ ಕಣ್ಣೇಗಸಕ ನದಿಯು ಇತ್ತೆಂದು ತಿಳಿಯುತ್ತದೆ. ಸಿಂಧುಥಯ ರಾಷ್ಟ್ರವು ಬಿಜಾಪುರ ಜಿಲ್ಲೆಯಲ್ಲಿತ್ತೆಂದೂ ಕಣ್ಣೇಗಸಕ ನದಿಯು ಕೃಷ್ಣಾನದಿಯಿರಬೇಕೆಂದೂ ರೈಸರು ಹೇಳಿದ್ದಾರೆ. [2] ಬೀರೂರು ಶಾಸನವನ್ನು ನಂಬುವುದಾದರೆ, ಉತ್ತರದಲ್ಲಿ ಸಿಂಧುಥಯರಾಷ್ಟ್ರವನ್ನು ( ಇದು ಪ್ರಾಯಶಃ ಸಿಂದಗಿ ತಾಲ್ಲೂಕಿನ ಭಾಗವನ್ನೊಳಗೊಂಡಿರಬಹುದು ) ಅದರಲ್ಲಿ ಸೇರಿಸ ಬೇಕಾಗುತ್ತದೆ.

ವಿಜಯ ಶಿವಮಾಂಧಾತೃವರ್ಮನು ತುಮಕೂರು ಜಿಲ್ಲೆಯಲ್ಲಿಯ ಕೋಳಾಲ ಗ್ರಾಮವನ್ನು ದಾನಮಾಡಿದ್ದಾನೆ. ಇದೇ ಕಾಲದಲ್ಲಿ ಗಂಗ ಅವಿನೀತನ ಪಟ್ಟಮಹಿಷಿಯು ಮುರುಕರ ವಿಷಯದಲ್ಲಿ ಕೊಳ್ಳಳ್ಳಿ ಗ್ರಾಮವನ್ನು ದಾನಮಾಡಿದಳೆಂದು ಅವನ ಶೃಂಗೇರಿ ತಾಮ್ರಶಾಸನದಿಂದ ಗೊತ್ತಾಗುತ್ತದೆ.[3] ಈ ಮುರುಕರ ವಿಷಯವು ( ಮುರುಗರ ನಾಡು ) ತುಮಕೂರು ತಾಲೂಕಿನ ಭಾಗಗಳನ್ನೊಳಗೊಂಡಿತ್ತೆಂದು ಹಿರೇ ಗುಂಡಿಗಲ್ಲಿನ ವೀರಗಲ್ಲುಗಳ ಆಧಾರದಿಂದ ಹೇಳಬಹುದು. ಆದುದರಿಂದ ತುಮಕೂರು ಜಿಲ್ಲೆಯ ಪಶ್ಚಿಮ ಭಾಗವು ಕದಂಬರ ಸ್ವಾಧೀನದಲ್ಲಿತ್ತೆಂದು ತಿಳಿಯಬಹುದು. ಇನೆಯ ಕೃಷ್ಣವರ್ಮನ ಮೊಮ್ಮಗನಾದ ಭೋಗಿವರ್ಮನು ತಗರೇ ಮಹಾಗ್ರಾಮದಲ್ಲಿಯ

---

[1] ಮೊಳಕಾಲ್ಮುರುವಿನಿಂದ ಪೂರ್ವಕ್ಕೆ ಮೂರು ಮೈಲುಗಳಲ್ಲಿರುವ ಉಚ್ಚಂಗಿ ದುರ್ಗವೇ ಇದೆಂದು ರೈಸರು ಹೇಳಿದ್ದಾರೆ ( *Mysore and Coorg from Inscriptions,* p. 26 ).

[2] *Ep. Carn.*, Vol. VI, Introduction. ಈ ಶಾಸನವು ಕೃತಕವಾಗಿದ್ದರೂ ಭೂವಿವರಣೆ ಮೊದಲಾದ ಭಾಗಗಳನ್ನು ನಂಬಬಹುದು.

[3] *Mys. Arch Rep.*, 1916, p. 35.

ಕೂಡಲೂರನ್ನು ದಾನಮಾಡಿದನೆಂದು ಹೇಳಿದ್ದೇವೆ. ತಗರೆಯು ಹಾಸನ ಜಿಲ್ಲೆಯ ಬೇಲೂರು ತಾಲೂಕಿಗೆ ಸೇರಿದೆ. ಆದಕಾರಣ ಹಾಸನದ ಉತ್ತರ ಭಾಗವು ಕದಂಬ ರಾಜ್ಯದ ದಕ್ಷಿಣ ಮೇರೆಯಾಗಿರಬೇಕು. ಹೀಗೆ ಉತ್ತರದಲ್ಲಿ ಬಿಜಾಪುರ ಜಿಲ್ಲೆ, ಪೂರ್ವದಲ್ಲಿ ಶ್ರೀಶೈಲ, ದಕ್ಷಿಣದಲ್ಲಿ ಹಾಸನ, ಪಶ್ಚಿಮಕ್ಕೆ ಶಿವಮೊಗ್ಗ ಜಿಲ್ಲೆ ಮತ್ತು ಸಮುದ್ರ— ಇವುಗಳು ಮೇರೆಯಾಗಿದ್ದ ಪ್ರದೇಶವನ್ನು ಕ್ರಿ. ಶ. ೪-೬ನೆಯ ಶತಮಾನಗಳಲ್ಲಿ ಕದಂಬರು ಆಳುತ್ತಿದ್ದರು. ಈ ರಾಜ್ಯವನ್ನು ಆಡಳಿತೆಯ ಸೌಕರ್ಯಕ್ಕಾಗಿ ಅನೇಕ ಪ್ರಾಂತಗಳಾಗಿ ವಿಂಗಡಿಸಿದ್ದರು. ಅವುಗಳನ್ನು 'ವಿಷಯ' ಎಂದು ಕರೆಯುತ್ತಿದ್ದರು. ಸುದ್ದಿಕುಂಡೂರು ವಿಷಯ, ಸೇಂದ್ರಕ ವಿಷಯ, ವಳ್ಳಾವಿ ವಿಷಯ, ಕರವನ್ನಾಡ್ಗ ವಿಷಯ, ತಗರೇ ವಿಷಯ, ಮೊಗಲೂರು ವಿಷಯಗಳೆಂಬ ಆರು ಭಾಗಗಳು ಅವರ ಲಿಪಿಗಳಲ್ಲಿ ಉಕ್ತವಾಗಿವೆ. ಪಲಾಸಿಕೆಯಲ್ಲಿಯ ಅರ್ಹದಾಲಯಕ್ಕೆ ಸುದ್ದಿಕುಂಡೂರು ವಿಷಯದೊಳಗಿನ ವಸಂತವಾಟಕ ಗ್ರಾಮವನ್ನು ಹರಿವರ್ಮನು ಕೊಟ್ಟನು. ಆದುದರಿಂದ ಪಲಾಸಿಕೆಯು ಸುದ್ದಿಕುಂಡೂರು ವಿಷಯದಲ್ಲಿದ್ದಿರಬಹುದು. ಕರವನ್ನಾಡ್ಗ ವಿಷಯದಲ್ಲಿದ್ದ ಗಿರಿಗಡ ಗ್ರಾಮದಲ್ಲಿ ಕಮುಕಪಲ್ಲಿಯು ಸೇರಿತ್ತೆಂದು ಮೇಲೆ ಹೇಳಿದ್ದೇವೆ. ಈ ವಿಷಯವು ಉತ್ತರ ಕನ್ನಡ ಜಿಲ್ಲೆಗೆ ಸೇರಿದ ಸಿರಸಿ ತಾಲೂಕಿನ ಒಂದು ಭಾಗವಾಗಿರಬೇಕು. ಈ ತಾಲೂಕಿನಲ್ಲಿ ಕರವನ್ನಾಡ್ಗವು ಕರೂರು ಎಂಬ ಹೆಸರಿನಿಂದಲೂ ಗಿರಿಗಡವು ಗಿರಿಗಡ್ಡೆ ಎಂಬ ಹೆಸರಿನಿಂದಲೂ ಈಗಲೂ ಇರುತ್ತವೆ. ಸೇಂದ್ರಕವಿಷಯವು ಶಿವಮೊಗ್ಗ ಉತ್ತರ ಕನ್ನಡ ಜಿಲ್ಲೆಗಳ ಭಾಗಗಳನ್ನೊಳಗೊಂಡಿತ್ತು. ವಳ್ಳಾವಿ ವಿಷಯದಲ್ಲಿ ಕೋಳಸಲ್ಲೂರು ಗ್ರಾಮವಿತ್ತೆಂದು ತಿಳಿದುಬಂದಿದೆ. ಈ ಗ್ರಾಮವು ಶಿವಮೊಗ್ಗ ಜಿಲ್ಲೆಯ ಚನ್ನಗಿರಿಯ ಹತ್ತಿರದಲ್ಲಿರುವ ಸಲ್ಲೂರೆಂದು ರೈಸರು ಹೇಳಿದ್ದಾರೆ.[1] ಆದುದರಿಂದ ಚನ್ನಗಿರಿಯ ಸುತ್ತಣ ಪ್ರದೇಶವು ವಳ್ಳಾವಿ ವಿಷಯಕ್ಕೆ ಸೇರಿರಬೇಕು. ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ತಗರೇಗ್ರಾಮದಲ್ಲಿ ದೊರೆತ ಶಾಸನದಿಂದ ಇಪ್ಪತ್ತನಾಲ್ಕು ಗ್ರಾಮಗಳನ್ನೊಳಕೊಂಡಿದ್ದ ತಗರೇ ಮಹಾಗ್ರಾಮವು ತಗರೇ ವಿಷಯದಲ್ಲಿತ್ತೆಂದು ತಿಳಿಯುತ್ತದೆ. ಆದುದರಿಂದ ತಗರೇ ವಿಷಯವು ಬೇಲೂರು ತಾಲೂಕಿನಲ್ಲಿದ್ದಿರಬೇಕು. ಮುಟ್ಟಗಿ ಗ್ರಾಮವು ಮೊಗಲೂರು ವಿಷಯದಲ್ಲಿತ್ತೆಂದು ರವಿವರ್ಮನ ನಿಲಂಬೂರು ಶಾಸನದಿಂದ ಗೊತ್ತಾಗುತ್ತದೆ. ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿ ಮುತ್ತಗಿ ಎಂಬ ಹಳ್ಳಿ ಇದೆ. ಇದೇ ಮುಟ್ಟಗಿಯಾಗಿದ್ದಿರಬಹುದು.

---

[1] *Ep. Carn.*, Vol. V, Introduction p. III.

ಗೋಪೀನಾಥರಾಯರು ಇದು ತಲಕಾಡಿನ ದಕ್ಷಿಣಕ್ಕೆ ಐದು ಮೈಲುಗಳ ದೂರದಲ್ಲಿರುವ ಬದನಗುಪ್ಪೆಯ ಪಕ್ಕದ ಮುತ್ತಗಿಯಾಗಿರಬೇಕೆಂದು ಹೇಳಿದ್ದಾರೆ.[1] ಆದರೆ ಈ ಪ್ರದೇಶವು ಗಂಗರಾಜ್ಯದಲ್ಲಿ ಸೇರಿತ್ತು.

## ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳು

ಕ್ರಿಸ್ತಶಕದ ೪ನೆಯ ಶತಮಾನಕ್ಕೆ ಪೂರ್ವದಲ್ಲಿ ದಕ್ಷಿಣ ಹಿಂದೂಸ್ಥಾನದಲ್ಲಿ ವೈದಿಕ ಬೌದ್ಧಧರ್ಮಗಳೆರಡೂ ಪ್ರಚಾರದಲ್ಲಿದ್ದುವೆಂದು ಹೇಳಿದ್ದೇವೆ. ಕದಂಬರ ಕಾಲದಲ್ಲಿ ಬೌದ್ಧಧರ್ಮದ ಪ್ರಸಾರವು ವಿಶೇಷವಾಗಿದ್ದಂತೆ ತೋರುವುದಿಲ್ಲ. ಆಗಿನ ರಾಜರು ಕೊಟ್ಟ ಶಾಸನಗಳಲ್ಲಿ ಬೌದ್ಧ ದತ್ತಿಗಳು ಹೆಚ್ಚಾಗಿ ಗೋಚರವಾಗುವುದಿಲ್ಲ. ಆದರೆ ಈ ಅವಧಿಯಲ್ಲಿ ಜೈನಧರ್ಮಕ್ಕೆ ರಾಜಾಶ್ರಯವಿದ್ದಿತು. ಕದಂಬ ರಾಜರು ಜೈನ ಸಂಘಗಳಿಗೆ ಕೊಟ್ಟ ದಾನಗಳಿಂದಲೂ ಗಂಗರು ಜೈನರಾಗಿದ್ದು ತಮ್ಮ ಧರ್ಮಕ್ಕೆ ಕೊಟ್ಟ ಪ್ರೋತ್ಸಾಹದಿಂದಲೂ ಈ ವಿಷಯವು ಸ್ಪಷ್ಟವಾಗುತ್ತದೆ. ಕದಂಬರ ಬ್ರಾಹ್ಮಣ ದತ್ತಿಗಳಿಂದಲೂ ಗಂಗರು ಮಾಡಿದ ಬ್ರಹ್ಮದೇಯ ದಾನಗಳಿಂದಲೂ ವೈದಿಕ ಧರ್ಮಕ್ಕೂ ಉತ್ತೇಜನವಿತ್ತೆಂದು ವ್ಯಕ್ತವಾಗುತ್ತದೆ. ೧ನೆಯ ಕೃಷ್ಣವರ್ಮನು ಅಶ್ವಮೇಧಯಾಗವನ್ನು ಮಾಡಿದುದು ಇದಕ್ಕೆ ಸಾಕ್ಷಿ. ಈ ಕಾಲದಲ್ಲಿ ಜೈನರಲ್ಲಿ ಯಾಪನೀಯ, ನಿರ್ಗ್ರಂಥ, ಕೂರ್ಚಕ, ಶ್ವೇತಪಟ, ಅಹರಿಷ್ಟಿ ಸಂಘಗಳೆಂಬ ಪಂಗಡಗಳಿದ್ದುವು. ಹಲಸಿಗೆಯೇ ಇವರ ಕೇಂದ್ರವಾಗಿತ್ತು. ಕಾಕುಸ್ಥವರ್ಮನಿಂದ ಖೇಟ ಗ್ರಾಮವನ್ನು ಪಡೆದ ಶ್ರುತಕೀರ್ತಿ ಸೇನಾಪತಿ ದಾಮಕೀರ್ತಿ ಭೋಜಕ, ಅವನ ಮಗನಾದ ಜಯಕೀರ್ತಿ ಪ್ರತೀಹಾರ, ಶ್ರೀಕೀರ್ತಿ ಮೊದಲಾದ ಜೈನ ಅಧಿಕಾರಿಗಳು ಮೃಗೇಶವರ್ಮ ರವಿವರ್ಮರ ಲಿಪಿಗಳಲ್ಲಿ ಉಕ್ತರಾಗಿದ್ದಾರೆ. ಒಂದು ಅಥವಾ ಹೆಚ್ಚು ಗ್ರಾಮಗಳ ಮೇಲೆ ನಿರಾಬಾಧ ಸ್ವಾಮ್ಯವುಳ್ಳವರೇ ಭೋಜಕರು.[2] ಮೇಲೆ ಹೇಳಿದ ದಾಮಕೀರ್ತಿ ಮೊದಲಾದ ಭೋಜಕರ ವಂಶಸ್ಥಾಪಕರು 'ನಿಮಿತ್ತಜ್ಞಾನ ಪಾರಗ' ರಾದ ಬಂಧುಷೇಣಾಚಾರ್ಯರು.[3] ಜಯಕೀರ್ತಿ ಪ್ರತೀಹಾರನು ಹಲಸಿಯ ಜಿನೇಂದ್ರನ ಉತ್ಸವಕ್ಕಾಗಿ ಕೊಟ್ಟ ಪುರುಖೇಟಕಗ್ರಾಮದ ಧನಾದಾಯದಲ್ಲಿ ಪ್ರತಿವರ್ಷ ಕಾರ್ತೀಕ ಮಾಸದಲ್ಲಿ ಹುಣ್ಣಿಮೆಯ ವರೆಗೆ ಎಂಟು ದಿನಗಳ ಉತ್ಸವವನ್ನು ನಡೆಯಿಸಬೇಕೆಂದೂ

[1] *Ep. Ind.*, Vol. VIII, p. 147.

[2] *Ep. Ind.*, Vol. I, p. 7, f, n. 12.

[3] *Ind. Ant.*, Vol. VI, p. 25.

ಮಳೆಗಾಲದಲ್ಲಿ ನಾಲ್ಕು ತಿಂಗಳು ಕಾಲ ಯಾಪನೀಯ ಸಂಘದ ತಪೋಧನರು ಉಪಭೋಗಮಾಡಬೇಕೆಂದೂ ರವಿವರ್ಮನು ವ್ಯವಸ್ಥೆಮಾಡಿದನು. ಕುಮಾರ ದತ್ತ ಪ್ರಮುಖರಾದ ವಿದ್ವಾಂಸರ ಗಣವು ಈ ವ್ಯವಸ್ಥೆಯನ್ನು ಪಾಲಿಸತಕ್ಕು ದೆಂದು ಆಜ್ಞೆಮಾಡಿದನು. ಹಲಸಿಗೆಯಲ್ಲಿಯ ಅರ್ಹದಾಲಯದಲ್ಲಿ ಪ್ರತಿ ವರ್ಷ ಎಂಟು ದಿವಸಗಳ ವರೆಗೆ **ಮಹಾಮಹೋತ್ಸವ**ವನ್ನು ನಡೆಯಿಸುವುದಕ್ಕೂ ಸಂಘದ ಆಹಾರ ದಾನಕ್ಕೂ ಉಪಯೋಗಿಸಬೇಕೆಂದು ವಸಂತವಾಟಕ ಗ್ರಾಮವನ್ನು ಹರಿವರ್ಮನು ವಾರಿಷೇಣಾಚಾರ್ಯರಿಂದ ಸ್ಥಾಪಿತವಾದ ಕೂರ್ಚಕ ಸಂಘಕ್ಕೆ ಪ್ರಮುಖರಾದ ಚಂದ್ರಕ್ಷಾಂತಾಚಾರ್ಯರಿಗೆ ಕೊಟ್ಟನು. ಇದೇ ರಾಜನು ಅಹರಿಷ್ಟ ಶ್ರಮಣ ಸಂಘದ ಚೈತ್ಯಾಲಯದಲ್ಲಿ ಪೂಜಾ ಸಂಸ್ಕಾರಾದಿಗಳಿಗಾಗಿಯೂ ಸಾಧುಜನೋಪಯೋಗಕ್ಕಾಗಿಯೂ ಮರದೇ ಗ್ರಾಮವನ್ನು ಧರ್ಮನಂದ್ಯಾಚಾರ್ಯರ ವಶಕ್ಕೆ ಒಪ್ಪಿಸಿದನು. ದೇವವರ್ಮನು ತ್ರಿಪರ್ವತದಲ್ಲಿದ್ದಾಗ ಅರ್ಹದಾಲಯದ ಭಗ್ನಸಂಸ್ಕಾರಕ್ಕಾಗಿ ಸಿದ್ಧಕೇದಾರ ದಲ್ಲಿ ಹನ್ನೆರಡು ನಿವರ್ತನಗಳ ಭೂಮಿಯನ್ನು ಯಾಪನೀಯ ಸಂಘಕ್ಕೆ ಕೊಟ್ಟನು. ಅಂತು ಜೈನರಲ್ಲಿ ಯಾಪನೀಯ ಮೊದಲಾದ ಸಂಘಗಳಿದ್ದುವೆಂದೂ ಬಂಧುಷೇಣ, ವಾರಿಷೇಣ, ಧರ್ಮನಂದಿ, ಕುಮಾರದತ್ತ, ಚಂದ್ರಕ್ಷಾಂತ ಮೊದಲಾದ ಕಾಲಜ್ಞಾನಿಗಳೂ ಶಾಸ್ತ್ರಪಾರಗರೂ ಆದ ಅನೇಕ ಆಚಾರ್ಯರಿಗೆ ರಾಜಾಶ್ರಯವಿತ್ತೆಂದೂ ತಿಳಿಯಬರುತ್ತದೆ. ಕೊಂಡಕುಂದಾನ್ವಯ ಸ್ಥಾಪಕ ರಾದ ಕೊಂಡಕುಂದಾಚಾರ್ಯರು ಶಿವಕುಮಾರ ಮಹಾರಾಜನ ಗುರುಗಳಾ-ಗಿದ್ದರೆಂದು ೧೨ನೆಯ ಶತಮಾನದ ಬಾಲಚಂದ್ರನು ತನ್ನ ಪ್ರಾಭೃತಸಾರದ ಪೀಠಿಕೆಯಲ್ಲಿ ಹೇಳಿದ್ದಾನೆ.[1] ಈ ಶಿವಕುಮಾರ ಮಹಾರಾಜನು ಕದಂಬ ಮಾಂಧಾತ ರಾಜನ ತಂದೆಯಾದ ಕುಮಾರವರ್ಮನಾಗಿರಬಹುದು.

ಒಬ್ಬ ಕದಂಬ ರಾಜನು ಕೊಂಡಮಾನ ವಂಶದ ಶಿವನಾಗದತ್ತನೆಂಬ ಬ್ರಾಹ್ಮಣನಿಗೆ ಹದಿಮೂರು ಗ್ರಾಮಗಳನ್ನು ದಾನಮಾಡಿದನೆಂದು ಹಿಂದೆ ಹೇಳಿದ್ದೇವೆ. ಕಾಕುಸ್ಥವರ್ಮನು ಸ್ಥಾನಕುಂದೂರಿನ ಪ್ರಣವೇಶ್ವರ ದೇವಾ ಲಯದ ಹತ್ತಿರ ಒಂದು ಕೆರೆಯನ್ನು ಕಟ್ಟಿಸಿದನು. ಮೃಗೇಶವರ್ಮ, ಶಿವಮಾಂಧಾತೃವರ್ಮ, ರವಿವರ್ಮ, ಹರಿವರ್ಮ, ೨ನೆಯ ಕೃಷ್ಣವರ್ಮ ಮೊದಲಾದ ರಾಜರು ಅನೇಕ ಬ್ರಹ್ಮದೇಯಗಳನ್ನು ಕೊಟ್ಟಿದ್ದಾರೆ. ಶಿವಮಾಂಧಾತೃವರ್ಮನಿಗೆ ದೇವಶರ್ಮನೆಂಬ ಬ್ರಾಹ್ಮಣನು ಗುರುವಾಗಿದ್ದನು.

---

[1] *Dyn. Kan. Dist.*, p. 288.

ಹೀಗೆ ಕದಂಬರ ಕಾಲದಲ್ಲಿ ಜೈನ ವೈದಿಕ ಧರ್ಮಗಳೆರಡೂ ರಾಜಾಶ್ರಯದಿಂದ ಅಭಿವೃದ್ಧಿಯನ್ನು ಹೊಂದುತ್ತಲಿದ್ದುವು. ಕದಂಬರು ವೈದಿಕ ಧರ್ಮಾವಲಂಬಿಗಳಾಗಿದ್ದರೆಂಬುದು ತಾಳಗುಂದ ಶಾಸನದಿಂದಲೂ "ಅಶ್ವಮೇಧಾವಭೃತಾಭಿಷಿಕ್ತಾನಾಂ" ಎಂಬ ಅವರ ವರ್ಣನೆಯಿಂದಲೂ ಸ್ಪಷ್ಟವಾಗುತ್ತದೆ. ಪ್ರಜೆಗಳ ಧರ್ಮವನ್ನು ಪಾಲಿಸುವುದು ರಾಜರ ಕರ್ತವ್ಯವಾದುದರಿಂದ ಕದಂಬರು ಅನ್ಯಧರ್ಮಿಯರಿಗೂ ಸಮದೃಷ್ಟಿಯಿಂದ ಪ್ರೋತ್ಸಾಹವನ್ನು ಕೊಡುತ್ತಿದ್ದರು.

ಕದಂಬ ರಾಜ್ಯದ ಬೇರೆ ಬೇರೆ ವಿಷಯಗಳಲ್ಲಿ ಯಾವ ಅಧಿಕಾರಿಗಳು ಆಳುತ್ತಿದ್ದರೆಂದು ಹೇಳುವುದಕ್ಕೆ ಆಧಾರಗಳಿಲ್ಲ. ಶ್ರುತಕೀರ್ತಿ ಸೇನಾಪತಿ, ಸಿಂಹಸೇನಾಪತಿ, ರಹಸ್ಯಾಧಿಕೃತ ದಾಮೋದರದತ್ತ, ರವಿವರ್ಮನ ವೈದ್ಯನಾದ ನೀಲಕಂಠ ದೇಶಾಮಾತ್ಯ, ಆಯುಕ್ತಕ ಜಿಯಂತ, ಆಜ್ಞಪ್ತಿ ದಾಮಕೀರ್ತಿ ಭೋಜಕ, ಜಯಕೀರ್ತಿ ಪ್ರತೀಹಾರರೇ ಮೊದಲಾದ ಅಧಿಕಾರಿಗಳು ಶಾಸನಗಳಲ್ಲಿ ಉಕ್ತರಾಗಿದ್ದಾರೆ. ಇವರ ವಿಷಯವಾಗಿ ನಮಗೆ ಇನ್ನೇನೂ ತಿಳಿದಿಲ್ಲ.

ಕದಂಬರ ಕಾಲದ ವಾಸ್ತುಶಿಲ್ಪದ ಪರಿಚಯವನ್ನು ಮಾಡಿಕೊಳ್ಳುವುದಕ್ಕೆ ಸಾಧನಗಳು ಕಡಿಮೆ. ಐಹೊಳೆಯಲ್ಲಿರುವ ಲಾಡಖಾನ್ ಗುಡಿಯು ಕ್ರಿ. ಶ. ಸುಮಾರು ೪೫೦ರಲ್ಲಿ ನಿರ್ಮಾಣವಾಗಿರಬೇಕೆಂದು ಎ. ಕೆ. ಕುಮಾರಸ್ವಾಮಿಯವರು ಹೇಳಿದ್ದಾರೆ. ಈ ಕಾಲದಲ್ಲಿ ಈ ಪ್ರದೇಶವು ಕದಂಬರ ವಶದಲ್ಲಿತ್ತು. ಆದರೆ ಈ ದೇವಾಲಯವನ್ನು ರಾಜಮನೆತನದವರು ಕಟ್ಟಿಸಿದರೋ ಇಲ್ಲವೋ ಎಂಬುದನ್ನು ನಿರ್ಧರಿಸುವುದಕ್ಕೆ ಆಧಾರಗಳಿಲ್ಲ. ಈ ಗುಡಿಗೆ ಶಿಖರವಿಲ್ಲ. ಮಾಳಿಗೆಯು ಬೌದ್ಧ ಚೈತ್ಯಗಳಲ್ಲಿ ಕಾಣಬರುವ ಕಮಾನುಗಳನ್ನುಳ್ಳದ್ದಾಗಿದೆ. ದೇವಾಲಯದ ಮುಂಭಾಗದಲ್ಲಿರುವ ಕಂಬಗಳ ಮೇಲೆ ನದೀ ದೇವಿಯ ವಿಗ್ರಹಗಳು ಕೆತ್ತಲ್ಪಟ್ಟಿವೆ. ಮಾಳಿಗೆಯ ಮೇಲೆ ಸೂರ್ಯ ದೇವರಿಗೋಸ್ಕರ ಒಂದು ಸಣ್ಣ ಗುಡಿಯುಂಟು. ಗೋಡೆಗಳಲ್ಲಿ ಬೊಂಬೆಗಳನ್ನು ಕೆತ್ತಿದ ಗೂಡುಗಳಿವೆ. ಇದೇ ಊರಿನಲ್ಲಿರುವ ದುರ್ಗಾ ದೇವಸ್ಥಾನವೂ ೬ನೆಯ ಶತಮಾನದ್ದೆಂದು ಈ ಪಂಡಿತರ ಅಭಿಪ್ರಾಯವು.[1] ಇದೂ ಬೌದ್ಧ ಚೈತ್ಯಾಲಯಗಳ ಮಾದರಿಯನ್ನು ಅನುಸರಿಸಿ ಕಟ್ಟಲ್ಪಟ್ಟಿದೆ. ಇದಕ್ಕೆ ಶಿಖರವಿದ್ದರೂ ಅದು ಗುಡಿ ಕಟ್ಟಿದ ಬಹಳ ಕಾಲಾನಂತರದಲ್ಲಿ ರಚಿಸಲ್ಪಟ್ಟಿರಬೇಕೆಂದು ಅವರು ಹೇಳಿದ್ದಾರೆ. ಇದರಂತೆಯೇ ಶಿಖರವಿಲ್ಲದ ಕೊಂತಗುಡಿ, ಹುಚ್ಚಿಮಲ್ಲಿಗುಡಿ ಮೊದಲಾದ ಇನ್ನೂ ಕೆಲವು

---

[1] *Htstory of Indian and Indovesian Art*, p. 79.

ಪ್ರಾಚೀನ ದೇವಸ್ಥಾನಗಳು ಐಹೊಳೆಯಲ್ಲಿವೆ. ಆದರೆ ಅವು ಚಲುಕ್ಯರ ಕಾಲಕ್ಕೆ ಪೂರ್ವದಲ್ಲಿ ನಿರ್ಮಿತವಾದವುಗಳೋ ಅಲ್ಲವೋ ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲ.

## ಕರ್ಣಾಟಕದ ರಾಜಕೀಯ ಪರಿಸ್ಥಿತಿಗಳು

### ( ೬ನೆಯ ಶತಮಾನ )

ವೈಜಯಂತಿಯಲ್ಲಿ ಆಳುತ್ತಿದ್ದ ಕದಂಬರು ೬ನೆಯ ಶತಮಾನದಲ್ಲಿ ಬಲಹೀನರಾಗಿದ್ದರೆಂದು ತಿಳಿಸಿದ್ದೇವೆ. ಈ ಸಮಯವನ್ನು ಸಾಧಿಸಿ ಚಲುಕ್ಯ ಮನೆತನದ ೧ನೆಯ ಪುಲಕೇಶಿಯು ಅವರ ರಾಜ್ಯದಲ್ಲಿ ಆಯಕಟ್ಟಿನ ಮೆಟ್ಟಾದ ವಾತಾಪಿ ಪಟ್ಟಣದಲ್ಲಿ ಸ್ವತಂತ್ರನಾದನು. ಈ ಕಾಲದಲ್ಲಿ ಪ್ರಸಿದ್ಧ ಕರ್ಣಾಟಕ ಅರಸು ಮನೆತನವೆಂದರೆ ಗಂಗರದು. ಇವರು ತುಮಕೂರು ಜಿಲ್ಲೆಯ ದಕ್ಷಿಣ ಮತ್ತು ಪೂರ್ವಕ್ಕಿರುವ ಮೈಸೂರು ಸಂಸ್ಥಾನದ ಭಾಗವನ್ನೂ ಅನಂತಪುರ ಜಿಲ್ಲೆಯ ಭಾಗಗಳನ್ನೂ ಉತ್ತರ ಆರ್ಕಾಡು, ಸೇಲಂ ಕೊಯಮುತ್ತೂರು ಜಿಲ್ಲೆಗಳ ಕೆಲ ಭಾಗಗಳನ್ನೂ ಒಳಕೊಂಡಿದ್ದ ರಾಜ್ಯವನ್ನು ಆಳುತ್ತಿದ್ದರು. ಕಡೂರು, ಶಿವಮೊಗ್ಗ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಭಾಗಗಳಲ್ಲಿ ಆಳುವರು ಶಿವಮೊಗ್ಗ ಜಿಲ್ಲೆಗೆ ಸೇರಿದ ಪೊಂಬುಚ್ಚ ( ಹುಂಚ )ವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳುತ್ತಿದ್ದರು. ಪಿರಾಪುರದಿಂದ ದೆಂದಲೂರು ಅಥವಾ ಕೃಷ್ಣಾ ನದಿಯವರೆಗಿರುವ ದೇಶಕ್ಕೆ ವಿಷ್ಣುಕುಂಡಿ ರಾಜರು ಅಧಿಪತಿಗಳಾಗಿದ್ದರು. ಉತ್ತರದಲ್ಲಿ ಪ್ರಾಯಶಃ ಕೃಷ್ಣಾನದಿ, ದಕ್ಷಿಣದಲ್ಲಿ ಕಾವೇರೀ ನದಿ, ಪೂರ್ವದಲ್ಲಿ ಸಮುದ್ರ, ಪಶ್ಚಿಮದಲ್ಲಿ ಕದಂಬ ಗಂಗರಾಜ್ಯಗಳೇ ಮೇರೆಗಳಾಗಿದ್ದ ಪ್ರದೇಶದಲ್ಲಿ ಪಲ್ಲವರಿದ್ದರು. ಇವರ ರಾಜಧಾನಿ ಪ್ರಸಿದ್ಧ ಕಾಂಚೀ ಪಟ್ಟಣವಾಗಿತ್ತು. ಇದರ ದಕ್ಷಿಣಕ್ಕೆ ಚೋಳರು ಉರಗಪುರದಲ್ಲಿಯೂ ಪಾಂಡ್ಯರು ಮಧುರೆಯಲ್ಲಿಯೂ ರಾಜ್ಯಭಾರ ಮಾಡುತ್ತಿದ್ದರು. ಇವರ ಪಶ್ಚಿಮಕ್ಕೆ ಮಲೆಯಾಳ ಪ್ರಾಂತದಲ್ಲಿ ಕೇರಳರು ರಾಜರಾಗಿದ್ದರು. ಅಲ್ಲಿಯೇ ಸಮೀಪದಲ್ಲಿದ್ದ ಎಲಿಮಲೆಯಲ್ಲಿ ಮೂಷಕರು ಆಳುತ್ತಿದ್ದರು. ಇನ್ನು ಉತ್ತರಕ್ಕೆ ಅಂದರೆ ಪಶ್ಚಿಮ ಸಮುದ್ರದ ತೀರದಲ್ಲಿದ್ದ ಪುರಿ ( ಪೋರ್ ಬಂದರ್ )ಯೇ ಮುಖ್ಯಪಟ್ಟಣವಾಗಿದ್ದ ಕೊಂಕಣದಲ್ಲಿ ಮೌರ್ಯರೂ ಲಾಟ ( ಗುಜರಾತ, ಮಾಳವದೇಶದ ಭಾಗಗಳು ) ದಲ್ಲಿ ಕಟಚ್ಚುರಿ ( ಕಲತ್ಸುರಿ ) ಗಳೂ ಆಳುತ್ತಿದ್ದರು. ನಳರು ಮಧ್ಯಪ್ರಾಂತದಲ್ಲಿದ್ದಂತೆ ತೋರುತ್ತದೆ. ಈ ವಂಶದ ರಾಜನಾದ ಭವತ್ತವರ್ಮನ ತಾಮ್ರಶಾಸನದಿಂದ ಇವನ ರಾಜಧಾನಿಯು ನಂದಿವರ್ಧನವಾಗಿತ್ತೆಂದು

ತಿಳಿಯುತ್ತದೆ. ಈ ನಂದಿವರ್ಧನವು ಮಧ್ಯಪ್ರಾಂತದಲ್ಲಿದೆಯೆಂದು ಈ ಶಾಸನವನ್ನು ಪ್ರಕಟಿಸಿದ ಗುಪ್ತೆಯವರು ಹೇಳಿದ್ದಾರೆ.[1] ಇವರ ಶಿಲಾಲಿಪಿಗಳು ಮದ್ರಾಸ್ ಆಧಿಪತ್ಯದ ಜಯಪುರ ಏಜನ್ಸಿಯಲ್ಲಿರುವ ಪೊಡಾಗಡ ಗ್ರಾಮದಲ್ಲಿಯೂ ಸಿಕ್ಕಿವೆ.[2] ಪೂರ್ವ ಸಮುದ್ರದ ಹತ್ತಿರ ಪಿಠಾಪುರದ ಮೇಲ್ಭಾಗದಲ್ಲಿ ಕಳಿಂಗರೂ ಅವರ ಪಶ್ಚಿಮ ದಿಕ್ಕಿನ ನೆರೆಹೊರೆಯವರಾಗಿ ಕೋಸಲರೂ ರಾಜ್ಯವಾಳುತ್ತಿದ್ದರು. ಈ ರೀತಿಯಾಗಿ ದಕ್ಷಿಣ ಹಿಂದೂಸ್ಥಾನದಲ್ಲಿ ಅನೇಕ ರಾಜರು ಬೇರೆ ಬೇರೆ ಸಂಸ್ಥಾನಗಳಲ್ಲಿ ರಾಜ್ಯವಾಳುತ್ತಿದ್ದ ಸಮಯದಲ್ಲಿ ಚಲುಕ್ಯರು ವಾತಾಪಿ ನಗರಿಯಲ್ಲಿ ಸ್ವತಂತ್ರವಾದ ರಾಜ್ಯವನ್ನು ಸ್ಥಾಪಿಸಿದರು.

---

[1] *Ep. Ind.*, Vol. XIX, p. 102.

[2] ೧ನೆಯ ವಿಕ್ರಮಾದಿತ್ಯನ ಕರ್ನೂಲು ತಾಮ್ರಶಾಸನದಲ್ಲಿ ನಳವಾಡಿ ವಿಷಯದಲ್ಲಿದ್ದ ರತ್ನಗಿರಿಯನ್ನು ಈ ರಾಜನು ದಾನಮಾಡಿದಂತೆ ಹೇಳಿದೆ. ಈ ರತ್ನಗಿರಿ ಕರ್ನೂಲು ಜಿಲ್ಲೆಯಲ್ಲಿರಬೇಕೆಂದೂ ಬಳ್ಳಾರಿ ಕರ್ನೂಲು ಜಿಲ್ಲೆಗಳ ಪ್ರಾಂತವೇ ನಳವಾಡಿ ವಿಷಯವಾಗಿತ್ತೆಂದೂ ಫ್ಲೀಟರು ಬರೆದಿದ್ದಾರೆ. ( *Dyn. Kan Dist.*, pp. 336, 363.) ವಿನಯಾದಿತ್ಯನ ಹನ್ನೆರಡನೆಯ ವರ್ಷದ ದಯ್ಯಮದಿನ್ನೆ ತಾಮ್ರಶಾಸನದಲ್ಲಿ ರಾಜನು ತಗರ ನದಿಯ ಉತ್ತರ ದಡದಲ್ಲಿದ್ದ ತಳಯಖೇಟದಲ್ಲಿದ್ದಾಗ ನಳವಾಡಿ ವಿಷಯದ ಉಳ್ಚಳ್ ಗ್ರಾಮದಲ್ಲಿ ಭೂಮಿಯನ್ನು ಬ್ರಾಹ್ಮಣರಿಗೆ ದಾನಮಾಡಿದನೆಂದು ಹೇಳಿದೆ. ತಗರ ನದಿಯೇ ಈಗಿನ ತೇರ್ (ಥೈರ್ನ) ನದಿಯೆಂದೂ ಅದರ ಉತ್ತರ ದಂಡೆಯಲ್ಲಿದ್ದ ಥೈರ ಖೆಡ್ಡವೇ ಶಾಸನದಲ್ಲಿ ಉಕ್ತವಾದ ತಳಯಖೇಟವಾಗಿರಬೇಕೆಂದೂ ಕೃಷ್ಣಶಾಸ್ತ್ರಿಗಳು ಬರೆದಿದ್ದಾರೆ. ( *M.E.R.*, 1916, p. 130.) ಉಳ್ಚಳ್ ಕರ್ನೂಲು ತಾಲೂಕಿಗೆ ಸೇರಿದ ಉಲಚಾಲವಾಗಿರಬಹುದು. ಈ ಶಾಸನವನ್ನು ಶ್ರೀ ಪಂಚಮುಖಿಯವರು ಪ್ರಸಿದ್ಧಿಸಿದ್ದಾರೆ. ( *Ep. Ind* , Vol. XXII, pp. 24 ff. ) ನಳವಾಡಿ ವಿಷಯಕ್ಕೂ ನಳ ಅರಸರ ರಾಜ್ಯವಾದ ಜಯಪುರ ಏಜನ್ಸಿಯ ಭಾಗಕ್ಕೂ ಅಂತರ ಬಹಳವಿರುವುದರಿಂದ ಅವೆರಡಕ್ಕೆ ಸಂಬಂಧವನ್ನು ಕಲ್ಪಿಸಲಾಗದೆಂದು ಹೇಳಿದ್ದಾರೆ.

## ಭಾಗ ೨ :—ಚಲುಕ್ಯರು.

ಚಲುಕ್ಯರು ಕದಂಬರಂತೆ ಮಾನವ್ಯಸಗೋತ್ರರು. ಹಾರಿತೀ ಪುತ್ರರು. ಸಪ್ತಮಾತೃಗಳಿಂದಲೂ ಕಾರ್ತಿಕೇಯನಿಂದಲೂ ಪರಿರಕ್ಷಿಸಲ್ಪಟ್ಟು ಅನೇಕ ಕಲ್ಯಾಣಗಳನ್ನು ಪಡೆದಿದ್ದರು. ಭಗವನ್ನಾರಾಯಣ ಪ್ರಸಾದದಿಂದ ವರಾಹ ಲಾಂಛನವನ್ನು ಪಡೆದು ಅದರ ಬಲದಿಂದ ಅನೇಕ ರಾಜರನ್ನು ಗೆದ್ದರು. ಇವರ ಪ್ರಶಸ್ತಿಯು ಶಾಸನಗಳಲ್ಲಿ ಈ ರೀತಿಯಾಗಿ ಬರುತ್ತದೆ.

“ ಶ್ರೀಮತಾಂ ಸಕಲಭುವನಸಂಸ್ತೂಯಮಾನಮಾನವ್ಯಸಗೋತ್ರಾಣಾಂ ಹಾರಿತೀಪುತ್ರಾಣಾಂ ಸಪ್ತಲೋಕಮಾತೃಭಿಃಸಪ್ತಮಾತೃಬಿರಭಿವರ್ದ್ಧಿತಾನಾಂ ಕಾರ್ತಿಕೇಯಪರಿರಕ್ಷಣಪ್ರಾಪ್ತಕಲ್ಯಾಣ ಪರಂಪರಾಣಾಂ ಭಗವನ್ನಾರಾಯಣ ಪ್ರಸಾದಸಮಾಸಾದಿತವರಾಹಲಾಂಛನೇಕ್ಷಣವಶೀಕೃತಾಶೇಷಮಹೀಭೃತಾಂ ಚಲುಕ್ಯಾನಾಂ”

ಇವರು ವರಾಹ ಲಾಂಛನರು. ಪಾಳಿಧ್ವಜರು. ಇವರ ಮೂಲಸ್ಥಾನ ವಾವುದೆಂಬುದನ್ನು ನಿಶ್ಚಯಿಸುವದಕ್ಕೆ ಸಾಕಾದಷ್ಟು ಆಧಾರಗಳಿಲ್ಲ. ೮ನೆಯ ಶತಮಾನದ ವರೆಗಿನ ಇವರ ಲಿಪಿಗಳಲ್ಲೆಲ್ಲಿಯೂ ಈ ಸಂಗತಿ ಉಕ್ತವಾಗಿಲ್ಲ. ೧೧ನೆಯ ಶತಮಾನದ ಕಲ್ಯಾಣದ ಚಾಲುಕ್ಯರ ಲಿಪಿಗಳಲ್ಲಿ[1] ಮಾತ್ರ ಚಲುಕ್ಯರು ಮೊದಲು ಅಯೋಧ್ಯೆಯಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದರೆಂದೂ ಅಲ್ಲಿ ೫೯ ರಾಜರಾಳಿದ ತರುವಾಯದಲ್ಲಿ ದಕ್ಷಿಣಾಪಥಕ್ಕೆ ಬಂದು ೧೬ ಮಂದಿ ಆಳಿದ ರೆಂದೂ ಆ ಮೇಲೆ ಕೆಲಕಾಲ ರಾಜ್ಯಭ್ರಷ್ಟರಾಗಿರಲು ಜಯಸಿಂಹನೆಂಬ ಪರಾಕ್ರಮಶಾಲಿಯಾದ ಅರಸನು ರಾಷ್ಟ್ರಕೂಟ ಕೃಷ್ಣನ ಮಗನಾದ ಇಂದ್ರನನ್ನು ಸೋಲಿಸಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನೆಂದೂ ಹೇಳಿದೆ. ಇವನ ಮಗನು ರಣರಾಗನು. ಅವನ ಮಗನು ೧ನೆಯ ಪುಲಕೇಶಿಯು.

---

[1] See the *Dynasties of the Kanarese Districts* by Fleet, pp. 342 f.

ಆದರೆ ಪೂರ್ವ ಚಲುಕ್ಯರ ಶಾಸನಗಳಲ್ಲಿ ೫೯ ರಾಜರಾಳಿದಮೇಲೆ ವಿಜಯಾದಿತ್ಯ ನೆಂಬ ರಾಜನು ದಕ್ಷಿಣಕ್ಕೆ ಬಂದು ತ್ರಿಲೋಚನ ಪಲ್ಲವನೊಡನೆ ಯುದ್ಧಮಾಡಿ ಸತ್ತನೆಂದೂ ಗರ್ಭಿಣಿಯಾಗಿದ್ದ ಅವನ ಪತ್ನಿಯು ಮುಡಿವೇಮು ಎಂಬ ಗ್ರಾಮದಲ್ಲಿ ಸೋಮಯಾಜಿ ವಿಷ್ಣುಶರ್ಮನ ಮನೆಯಲ್ಲಿ ವಿಷ್ಣುವರ್ಧನನೆಂಬ ಮಗನನ್ನು ಹೆತ್ತಳೆಂದೂ ಈ ವಿಷ್ಣುವರ್ಧನನು ಪಲ್ಲವರನ್ನು ಸೋಲಿಸಿ ಅವರ ರಾಜಕುಮಾರಿಯನ್ನು ಮದುವೆಯಾಗಿ ವಿಜಯಾದಿತ್ಯನೆಂಬ ಮಗನನ್ನು ಪಡೆದ ನೆಂದೂ ಇವನ ಮಗನೇ ೧ನೆಯ ಪುಲಿಕೇಶಿಯೆಂದೂ ಹೇಳಿದೆ. ಇವೆರಡು ವೃತ್ತಾಂತಗಳಲ್ಲಿ ಬಹಳ ವ್ಯತ್ಯಾಸವುಂಟು. ಒಂದರಲ್ಲಿ ಮೂಲ ಪುರುಷನಿಗೆ ಜಯಸಿಂಹನೆಂದೂ ಮತ್ತೊಂದರಲ್ಲಿ ವಿಜಯಾದಿತ್ಯನೆಂದೂ ಹೆಸರುಗಳಿವೆ. ಜಯಸಿಂಹನು ರಾಜ್ಯಸ್ಥಾಪನೆ ಮಾಡಿದನು. ಆದರೆ ವಿಜಯಾದಿತ್ಯನು ಯುದ್ಧದಲ್ಲಿ ಮಡಿದನು. ಜಯಸಿಂಹನು ಬರುವ ಮೊದಲು ದಕ್ಷಿಣಾಪಥದಲ್ಲಿ ೧೬ ರಾಜರಾಳಿದ್ದರು. ವಿಜಯಾದಿತ್ಯನು ಮಾತ್ರ ದಕ್ಷಿಣಕ್ಕೆ ಬಂದ ಮೊದಲ ನೆಯ ಅರಸನು. ಜಯಸಿಂಹ ಪುಲಿಕೇಶಿಗಳ ಮಧ್ಯದಲ್ಲಿ ರಣರಾಗನೊಬ್ಬನೇ ಇರುವನು. ಆದರೆ ವಿಜಯಾದಿತ್ಯ ಪುಲಿಕೇಶಿಗಳ ಮಧ್ಯದಲ್ಲಿ ೨ ರಾಜರಿರು ತ್ತಾರೆ. ಇದಲ್ಲದೆ ಈ ಐತಿಹ್ಯಗಳು ಇವರ ರಾಜ್ಯವಳಿದು ೩ ಶತಮಾನಗಳ ವರೆಗೂ ಎಲ್ಲಿಯೂ ಕಾಣಬರುವದಿಲ್ಲವಾದುದರಿಂದ ಇವುಗಳಲ್ಲಿ ತಥ್ಯಾಂಶವೆಷ್ಟಿದೆ ಯೆಂಬುದನ್ನು ನಿರ್ಧಾರಮಾಡಲು ಶಕ್ಯವಿಲ್ಲ.

ಚಲುಕ್ಯರ ಲಿಪಿಗಳು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಇರುತ್ತವೆ. ಎಲ್ಲಕ್ಕೂ ಪ್ರಾಚೀನ ಲಿಪಿಯೆಂದರೆ ಬಾದಾಮಿಯ ೩ನೆಯ ಗುಹೆಯ ಬಂಡೆಯ ಮೇಲೆ ಕೊರೆದ ಕೀರ್ತಿವರ್ಮನ ಶ. ಕ. ೫೦೦ರ ಶಾಸನವು.[1]

ಕರ್ಣಾಟಕದಲ್ಲಿ ಮೊದಲು ಸಾಮ್ರಾಜ್ಯಸ್ಥಾಪಕರು ಚಲುಕ್ಯರು. ಕದಂಬ, ಗಂಗ, ಪಲ್ಲವ, ಕಳಿಂಗ, ಚೋಳ, ಕೇರಳ, ಪಾಂಡ್ಯ ಮೊದಲಾದ ಅನೇಕ ರಾಜರನ್ನು ಜಯಿಸಿ ಅವರ ರಾಜ್ಯದ ಭಾಗಗಳನ್ನು ಕಿತ್ತುಕೊಂಡು ಒಂದು ಸ್ವತಂತ್ರ ಸಾಮ್ರಾಜ್ಯವನ್ನು ಏಕಛತ್ರದಿಂದ ಆಳಲಿಕ್ಕೆ ಪ್ರಾರಂಭ ಮಾಡಿದವರಿವರೇ. ಕ್ರಿ. ಶ. ೭೫೪ ರ ಸಾಮನಗಡ ತಾಮ್ರಶಾಸನದಲ್ಲಿ ರಾಷ್ಟ್ರಕೂಟ ದಂತಿದುರ್ಗನು ಕರ್ಣಾಟಕ ಸೈನ್ಯವನ್ನು ಸೋಲಿಸಿ ವಲ್ಲಭರ (ಚಲುಕ್ಯರ) ರಾಜ್ಯವನ್ನು ಕಿತ್ತುಕೊಂಡನೆಂದು ಹೇಳಿದೆ.[2] ಈ ವಲ್ಲಭರಿಗೆ

---

[1] *Ind. Ant.*, Vol. X, p. 57.

[2] *Ibid*, Vol. XI, p. 108.

ಕರ್ಣಾಟಕರೆಂದು ಹೆಸರಿರಬೇಕು. ಇದೇ ಅಂಶವು ಪಾಂಡ್ಯ ನೆಡುಂಜಡೆಯನ ವೆಳ್ವಿಕುಡಿ ಶಾಸನದಿಂದಲೂ ಗೊತ್ತಾಗುತ್ತದೆ.[1] ಸುಮಾರು ಕ್ರಿ. ಶ. ೭೬೯-೭೦ ರಲ್ಲಿದ್ದ ನೆಡುಂಜಡೆಯನ ಅಜ್ಜನಾದ ಶಡೈಯನಿಗೆ ಮಧುರ ಕರುನಾಟಕ (ಕರ್ಣಾಟಕ) ವೆಂಬ ಹೆಸರಿತ್ತು. ಪಾಂಡ್ಯರಿಗೂ ಕರ್ಣಾಟಕರೆಂದು ಹೆಸರುಗೊಂಡ ಚಲುಕ್ಯರಿಗೂ ಉಂಟಾಗಿದ್ದ ವಿವಾಹಸಂಬಂಧದಿಂದ ಹುಟ್ಟಿದ ಮಗನಿಗೆ 'ಮಧುರ ಕರ್ಣಾಟಕ'ನೆಂದು ಬಿರುದುಬಂದಿರಬೇಕೆಂದು ಆ ಶಾಸನವನ್ನು ಪ್ರಸಿದ್ಧಿಸಿದ ಹೊಸಕೋಟೆ ಕೃಷ್ಣಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ.[2] ಚಲುಕ್ಯರ ಶಾಸನಗಳಲ್ಲಿ ಅವರು ಜಯಿಸಿದ ಪ್ರಾಂತಗಳನ್ನು ಹೇಳುವಾಗ ಕರ್ಣಾಟಕವು ಮಾತ್ರ ನಿರ್ದಿಷ್ಟವಾಗಿಲ್ಲ. ಉಳಿದ ದಕ್ಷಿಣಾಪಥದ ದೇಶಗಳೆಲ್ಲ ಕೊಡಲ್ಪಟ್ಟಿವೆ. ಇದರಿಂದ ಚಲುಕ್ಯರು ಕರ್ಣಾಟಕದವರೆಂದು ಸೂಚಿತವಾಗುತ್ತದೆ. ಇದಲ್ಲದೆ ಅವರ ಭಾಷೆಯು ಕನ್ನಡವಿರಬೇಕೆಂದು ನಮ್ಮ ಅಭಿಪ್ರಾಯ. ಸಾತಾರಾ ಪ್ರಾಂತದಲ್ಲಿ ದಾನಮಾಡಿದ ಸಾತಾರಾ ತಾಮ್ರಶಾಸನದ ಮೊಹರಿನ ಮೇಲೆ ವಿಷ್ಣುವರ್ಧನನ 'ಬಿಟ್ಟರಸ' ಎಂದು ಕೊಟ್ಟಿದೆ.[3] ಇದು 'ವಿಷ್ಣುವರ್ಧನ ರಾಜ' ಎಂಬುದರ ಕನ್ನಡ ರೂಪಾಂತರ ಅಥವಾ ಕನ್ನಡ ಶಬ್ದದ ರೂಪಾಂತರವೇ 'ವಿಷ್ಣುವರ್ಧನ ರಾಜ' ಎಂದು ತಿಳಿಯುವುದು ಸಮಂಜಸ. ಪುಲಿಕೇಶಿಯ ಹೆಸರಿನಲ್ಲಿ ಮೊದಲಿನ ಶಬ್ದವು ಕನ್ನಡವಾಗಿದೆ. ಅವನ ತಮ್ಮನಾದ ಬುದ್ಧವರಸನ ಹೆಸರೂ ಕನ್ನಡದ ಛಾಯೆಯುಳ್ಳದ್ದಾಗಿದೆ. ವಿಕ್ರಮಾದಿತ್ಯನಿಗೆ ಕೋಕುಲಿ ಎಂಬ ಹೆಸರಿತ್ತು. ಸಂಜಾನ ತಾಮ್ರಶಾಸನವನ್ನು ಪ್ರಸಿದ್ಧಿಸುವಾಗ ಸ್ಟೆನ್ ಕೋನೋ ಇವರು ಇದು ದ್ರಾವಿಡ ಶಬ್ದವೆಂದು ಬರೆದಿದ್ದಾರೆ.[4] ಆ ಶಾಸನದಲ್ಲಿ ಬುದ್ಧವರಸನಿಗೆ 'ಮದನಂಗಾಶ್ರಯ' ಎಂಬ ಬಿರುದು ಕೊಟ್ಟಿದೆ. ಇದನ್ನು ಶ್ರೀಮದನಂಗಾಶ್ರಯವೆಂದು ತಿದ್ದಬೇಕೆಂದು ಸ್ಟೆನ್‌ಕೋನೋ ಬರೆದಿದ್ದಾರೆ.[5] ಆದರೆ ಅದರ ಹಿಂದಿನ ಶಬ್ದವು 'ಪರಮ ಮಹೇಶ್ವರೋ' ಎಂದು ಇರುವದರಿಂದ ಮುಂದಿನ ಶಬ್ದದ ಮೊದಲನೆಯ ಅಕ್ಷರವು ಅಲ್ಪಪ್ರಾಣವಿರಬೇಕೆಂದು ಆ ಶಾಸನವನ್ನು ಬರೆದವನ ಅಭಿಪ್ರಾಯವಾಗಿರಬೇಕು. ಸ್ಖಲಿತವೆಂದು ಬಗೆಯುವುದಾದರೆ 'ಪರಮ ಮಾಹೇಶ್ವರ'

---

[1] *Ep. Ind.*, Vol. XVII, pp. 291, ff.

[2] *Ep. Ind.*, Vol. XVII, p. 293, note

[3] *Ind. Ant.*, Vol. XIX, p. 310, plate.

[4] *Ep. Ind.*, Vol. XIV, p. 145.

[5] *Ibid*, p. 150, foot note 5.

ಶಬ್ದವು ವಿಸರ್ಗಾಂತವಾಗಿ ಉಳಿಯಬೇಕಾಗಿತ್ತು. ಅದನ್ನು ಸ್ಖಲಿತವೆಂದು ತಿಳಿಯುವದು ಪ್ರಾಮಾಣಿಕವಲ್ಲ. ಅಂತು ಕೊಂಕಣ ಪ್ರಾಂತದಲ್ಲಿ ಆಳುತ್ತಿದ್ದ ಬುದ್ಧವರಸನಿಗೆ 'ಮದಸಂಗಾಶ್ರಯ'ವೆಂಬ ಬಿರುದು ಬರಬೇಕಾದರೆ ಚಲುಕ್ಯರ ಭಾಷೆಯು ಕನ್ನಡವಿರಬೇಕೆಂದು ನಿಶ್ಚಿತವಾಗುತ್ತದೆ. ಮೇಲಿನ ಕಾರಣಗಳಿಂದಲೂ ಈ ಸಿದ್ಧಾಂತವು ದೃಢಪಡುತ್ತದೆ.

## ಚಲುಕ್ಯರ ವಂಶಾವಳಿ

ಚಲುಕ್ಯರ ವಂಶಾವಳಿಯಲ್ಲಿ ಬಿಕ್ಕಟ್ಟಿನ ಪ್ರಶ್ನೆಗಳು ಇಲ್ಲ. ಆದರೂ ಇಲ್ಲಿ ಇತ್ತೀಚಿಗೆ ತಿಳಿದ ಹೊಸ ಅಂಶಗಳನ್ನು ಹೇಳಬೇಕಾಗಿದೆ. ೧ನೆಯ ಜಯಸಿಂಹನ ಮೊಮ್ಮಗನಾದ ೧ನೆಯ ಪುಲಿಕೇಶಿಗೆ ಬಟ್ಪೂರ ಕುಲದ ದುರ್ಲಭದೇವಿಯ ಹೊಟ್ಟೆಯಿಂದ ೧ನೆಯ ಕೀರ್ತಿವರ್ಮನೂ ಇನ್ನೊಬ್ಬ ರಾಣಿಯ ಹೊಟ್ಟೆಯಿಂದ (ಹೆಸರು ಗೊತ್ತಿಲ್ಲ) ಮಂಗಲೇಶನೂ ಹುಟ್ಟಿದರು. ಮಹಾಕೂಟ ಶಿಲಾಶಾಸನದಲ್ಲಿ[1] ಮಂಗಲೇಶನು ದುರ್ಲಭದೇವಿಯನ್ನು "ಸ್ವಗುರುಪತ್ನಿ" ಎಂದು ಕರೆದುದರಿಂದ ಕೀರ್ತಿವರ್ಮ ಮಂಗಲೇಶರು ಒಂದೇ ತಾಯಿಯ ಮಕ್ಕಳಲ್ಲವೆಂದು ಊಹಿಸಬಹುದು. ಸತ್ಯಾಶ್ರಯ ಧ್ರುವರಾಜ ಇಂದ್ರವರ್ಮನು ಬಪ್ಪೂರ ಕುಲದವನೆಂದೂ ಅವನು ಕ್ರಿ. ಶ. ೬೧೦--೧೧ ರಲ್ಲಿ ರೇವತೀದ್ವೀಪವನ್ನೂ ನಾಲ್ಕು ವಿಷಯಗಳನ್ನೂ ಆಳುತ್ತಿದ್ದನೆಂದೂ ಗೋವಾ ತಾಮ್ರಶಾಸನದಿಂದ[2] ಗೊತ್ತಾಗುತ್ತದೆ. ಅವನ ಆಳಿಕೆಯ ೨೦ ನೆಯ ವರ್ಷದಲ್ಲಿ ಈ ಶಾಸನವು ಹುಟ್ಟಿತೆಂದು ಬರೆದಿರುವುದರಿಂದ ಅವನು ಕ್ರಿ. ಶ. ೫೯೦ರಲ್ಲಿ ಅಂದರೆ ಕೀರ್ತಿವರ್ಮನ ಕಾಲದಲ್ಲಿ ಆಳಲಿಕ್ಕೆ ಮೊದಲು ಮಾಡಿರಬೇಕು. ಈ ಧ್ರುವರಾಜ ಇಂದ್ರವರ್ಮನು ಮಂಗಲೇಶನ ಮಗನಾಗಿರಬಹುದೆಂದೂ ಅವನಿಗೆ ಅರಸೊತ್ತಿಗೆಯನ್ನು ಕೊಡಿಸುವುದಕ್ಕೆ ಮಂಗಲೇಶನು ತನ್ನ ಅಣ್ಣನ ಮರಣಾನಂತರ ಪ್ರಯತ್ನಮಾಡಿದನೆಂದೂ ಫ್ಲೀಟರು ಬರೆದಿದ್ದಾರೆ.[3] ಧ್ರುವರಾಜನ ತಾಯಿ ಬಪ್ಪೂರ ಕುಲದವಳಾಗಿರಬಹುದಾದುದರಿಂದ ಅವನು ಬಪ್ಪೂರ ಕುಲದವನೆಂದು ಕರೆಯಲ್ಪಟ್ಟನೆಂದೂ ಇದೇ ರೀತಿಯಾಗಿ ಚಾಲುಕ್ಯ ೧ನೆಯ ಸೋಮೇಶ್ವರನ ಮಗ ೩ನೆಯ ಜಯಸಿಂಹನು ತಾಯಿಯ ವಂಶದಿಂದ

---

[1] *Ind. Ant.*, Vol. XIX, p, 7.

[2] *Jour., Bom. Br. R. A. Soc.*, Vol. X, p. 348.

[3] *Dyn. Kan. Dist.*, p. 349.



(Plate 5) ೧ನೆಯ ಪುಲಿಕೇಶಿಯ ಬಾದಾಮಿಯ ಬಂಡೆಗಲ್ಲು ಶಾಸನ : ಶಕೆ ೪೬೫

# ಬಾದಾಮಿಯ ಚಲುಕ್ಯರು



ಜಯಸಿಂಹ
ರಣರಾಗ
ಸತ್ಯಾಶ್ರಯ ರಣವಿಕ್ರಮ ಪುಲಿಕೇಶಿ
( ಸು. ಕ್ರಿ.ಶ. ೫೫೦ )
ದುರ್ಲಭದೇವಿಯ ಹೊಟ್ಟೆಯಲ್ಲಿ
ಸತ್ಯಾಶ್ರಯ, ರಣವಿಕ್ರಮ, ಕೀರ್ತಿವರ್ಮ
( ಕ್ರಿ. ಶ. ೫೬೬-೫೯೬ )
ರಣವಿಕ್ರಾನ್ತ ಮಂಗಲೇಶ
( ಕ್ರಿ.ಶ. ೫೯೭-೮—೬೦೯-೧೦ )
ಜಯಸಿಂಹರಾಜ
ರಣವಿಕ್ರಾನ್ತ ಬುದ್ಧವರ್ಮರಾಜ
ವಿಜಯವರ್ಮರಾಜ
( ಕ್ರಿ.ಶ. ೬೪೩ )
ಲಾಟಮಂಡಲದಲ್ಲಿ)
ಸೇಂದ್ರಕ ರಾಜಕುಮಾರಿಯಿಂದ
ಸತ್ಯಾಶ್ರಯ, ಪೃಥ್ವೀವಲ್ಲಭ,
ಪರಮೇಶ್ವರ ಪುಲಿಕೇಶಿ
( ಕ್ರಿ.ಶ. ೬೦೯-೧೦—೬೪೨ ?)
ವಿಷಮಸಿದ್ಧಿ ಕುಬ್ಜವಿಷ್ಣುವರ್ಧನ
( ಪೂರ್ವಚಲುಕ್ಯ ಮನೆತನದ
ಮೂಲಪುರುಷನು )
ಧರಾಶ್ರಯ
ಜಯಸಿಂಹವರ್ಮ
ನಾಸಿಕ
ಪ್ರಾಂತ
ದಲ್ಲಿ
ಜಯಾಶ್ರಯ
ತ್ರಿಭುವನಾಶ್ರಯ
ನಾಗವರ್ಧನ
ಮದನಂಗಾಶ್ರಯ
ಬುದ್ಧವರಸ ( ಅಪ-
ರಾಂತ ಕುಲಾಬಾ
ಠಾಣಾ ಜಿಲ್ಲೆಗಳಲ್ಲಿ
ಆದಿತ್ಯವರ್ಮ
(ಕರ್ನೂಲ
ಜಿಲ್ಲೆಯಲ್ಲಿ)
ಚಂದ್ರಾದಿತ್ಯ
(ಹೆಂಡತಿ, ವಿಜಯಮಹಾದೇವಿ)
(ರತ್ನಾಗಿರಿ ಜಿಲ್ಲೆ
ಸಾವಂತವಾಡಿ ಸಂಸ್ಥಾನಗಳಲ್ಲಿ)
ಸತ್ಯಾಶ್ರಯ ರಣರಸಿಕ
ಅನಿವಾರಿತ ವಿಕ್ರಮಾದಿತ್ಯ
(ಹೆಂಡತಿ, ಗಂಗಮಹಾದೇವಿ)
ಕ್ರಿ ಶ. ೬೫೫-೬೮೧
ಧಾರಾಶ್ರಯ
ಜಯಸಿಂಹವರ್ಮ
(ಲಾಟಮಂಡಲದಲ್ಲಿ)
ಕ್ರಿ.ಶ. ೬೭೧-೬೯೨
ಸತ್ಯಾಶ್ರಯ ರಾಜಾಶ್ರಯ
ವಿನಯಾದಿತ್ಯ ಕ್ರಿ.ಶ. ೬೮೧-೬೯೬
ಶ್ರ್ಯಾಶ್ರಯ ಶೀಲಾದಿತ್ಯ
ಕ್ರಿ.ಶ. ೬೭೧, ೬೯೨
ವಿನಯಾದಿತ್ಯ,
ಯುದ್ಧಮಲ್ಲ, ಜಯಾಶ್ರಯ,
ಮಂಗಲರಸ
ಕ್ರಿ.ಶ. ೭೩೧-೩೨
ಅವನಿಜನಾಶ್ರಯ
ಪುಲಿಕೇಶಿ
ಕ್ರಿ.ಶ. ೭೩೯
ಸತ್ಯಾಶ್ರಯ ನಿರವದ್ಯ ವಿಜಯಾದಿತ್ಯ
ಕ್ರಿ.ಶ. ೬೯೬-೭೩೩
ಕುಂಕುಮಮಹಾದೇವಿ
ಸತ್ಯಾಶ್ರಯ ಅನಿವಾರಿತ ವಿಕ್ರಮಾದಿತ್ಯ
(ಹೆಂಡತಿ ಲೋಕಮಹಾದೇವಿ, ತ್ರೈಲೋಕ್ಯಮಹಾದೇವಿ)
(ಕ್ರಿ.ಶ. ೭೩೩-೩೪—೭೪೪-೪೫)
ಸತ್ಯಾಶ್ರಯ ನೃಪಸಿಂಹ ಕೀರ್ತಿವರ್ಮ
ಕ್ರಿ.ಶ. ೭೪೪-೪೫—೭೫೭

'ಪಲ್ಲವಾನ್ವಯ'ನೆಂದು ಕರೆಯಲ್ಪಟ್ಟಿರುವನೆಂದೂ ಅವರು ಪ್ರತಿಪಾದಿಸಿದ್ದಾರೆ.[1] ಆದರೆ ಈ ಊಹೆ ಸಮಂಜಸವಲ್ಲ. ಇನೆಯ ಜಯಸಿಂಹನು ಪಲ್ಲವಾನ್ವಯ ನೆಂದು ಹೇಳಿದ್ದರೂ 'ಚಾಳುಕ್ಯ ಚೂಡಾಮಣಿ' ಎಂದೂ ವರ್ಣಿಸಲ್ಪಟ್ಟಿದ್ದಾನೆ. ಇದಲ್ಲದೆ ಧ್ರುವರಾಜ ಇಂದ್ರವರ್ಮನು ಮಂಗಲೇಶನ ಮಗನಾಗಿದ್ದರೆ ಅವನನ್ನು 'ಪೃಥ್ವೀವಲ್ಲಭ'ನಾದ ಪುಲಿಕೇಶಿ ರೇವತೀದ್ವೀಪದಲ್ಲಿಯಾಗಲಿ ನಾಲ್ಕು ವಿಷಯಗಳಲ್ಲಿಯಾಗಲಿ ಆಳಗೊಡುತ್ತಿರಲಿಲ್ಲ. ಅವನು ಹಚ್ಚಿಕೊಂಡ 'ಸತ್ಯಾಶ್ರಯ'ವೆಂಬ ವಿಶೇಷಣವು ಅವನು ಪುಲಿಕೇಶಿಯ ಮಾಂಡಲಿಕನಾಗಿದ್ದ ನೆಂದು ಸೂಚಿಸುತ್ತದೆ.

ಕೀರ್ತಿವರ್ಮನ ಮಗನಾದ ಪುಲಿಕೇಶಿಗೆ ಕುಬ್ಜವಿಷ್ಣುವರ್ಧನ, ಧರಾಶ್ರಯ ಜಯಸಿಂಹವರ್ಮ, ಬುದ್ಧವರಸರೆಂದು ಮೂವರು ತಮ್ಮಂದಿ ರಿದ್ದರು. ಅವರಲ್ಲಿ ಜಯಸಿಂಹವರ್ಮ ಬುದ್ಧವರಸರು ಅನುಕ್ರಮವಾಗಿ ನಿರ್ಪಾನಸಂಜಾನ ಕೃತಕಶಾಸನಗಳಲ್ಲಿ ಉಕ್ತರಾಗಿದ್ದಾರೆ. ಅದರಿಂದ ಇವರು ಕಲ್ಪಿತರಾಜರೆಂದು ತಿಳಿಯಕೂಡದು. ನಿರ್ಪಾನಶಾಸನವು ನಿಜವೆಂದು ಭಾಂಡಾರ ಕರವರು ತಿಳಿದಿದ್ದಾರೆ.[2] ಸಂಜಾನ ಶಾಸನಗಳಲ್ಲಿ ಕೊಟ್ಟ ಐತಿಹಾಸಿಕ ಅಂಶಗಳನ್ನು ನಂಬಬಹುದೆಂದು ಅದನ್ನು ಪ್ರಸಿದ್ಧಿಸಿದ ಸ್ಟೆನ್‌ಕೋನೋ ಹೇಳಿದ್ದಾರೆ.[3] ಜಯಸಿಂಹವರ್ಮನು ನಾಸಿಕ ಪ್ರಾಂತದಲ್ಲಿ ಆಳುತ್ತಿದ್ದನೆಂದು ಆ ಶಾಸನದಿಂದ ತಿಳಿಯಬಹುದು. ಬುದ್ಧವರಸನು ಠಾಣಾ ಜಿಲ್ಹೆಯಲ್ಲಿ ಆಳುತ್ತಿದ್ದನು. ಪುಲಿಕೇಶಿಗೆ ಆದಿತ್ಯವರ್ಮ, ಚಂದ್ರಾದಿತ್ಯ, ೧ನೆಯ ವಿಕ್ರಮಾ ದಿತ್ಯ, ಧಾರಾಶ್ರಯ ಜಯಸಿಂಹವರ್ಮರೆಂದು ನಾಲ್ವರು ಗಂಡುಮಕ್ಕಳೂ ಅಂಬೇರಾ ಎಂಬ ಒಬ್ಬ ಹೆಣ್ಣುಮಗಳೂ ಇದ್ದರೆಂದು ಶಾಸನಗಳಿಂದ ಗೊತ್ತಾಗುತ್ತದೆ.[4] ಆದಿತ್ಯವರ್ಮ ಚಂದ್ರಾದಿತ್ಯರು ಮಹಾರಾಜಾಧಿರಾಜ ಎಂದು ಸಾಮ್ರಾಜ್ಯೈಶ್ವರ್ಯಸೂಚಕವಾದ ಬಿರುದುಗಳನ್ನು ಧರಿಸಿದ್ದಾರೆ. ಅವರು ಯಾವಾಗ ಎಲ್ಲಿ ಆಳುತ್ತಿದ್ದರೆಂಬುದು ಗೊತ್ತಿಲ್ಲ. ಆದಿತ್ಯವರ್ಮನ ಶಾಸನವು ಕರ್ನೂಲ ಜಿಲ್ಹೆಯಲ್ಲಿ ಸಿಕ್ಕಿದೆ. ಚಂದ್ರಾದಿತ್ಯನ ಹೆಂಡತಿಯಾದ ವಿಜಯಮಹಾದೇವಿಯ ನೇರೂರು ಕೋಚ್ರೇಂ ಶಾಸನಗಳಿಂದ ರತ್ನಾಗಿರಿ

---

1 *Ibid.*

2 *History of the Dekkan* p. 185.

3 *Ep. Ind.* Vol. XIV, p. 147.

4 ಹೊಸೂರು ತಾಮ್ರಶಾಸನ, *Ind. Ant.* Vols. VIII pp. 89–96 and IX p. 304.

ಜಿಲ್ಹೆಯ ಸಾವಂತವಾಡಿ ಸಂಸ್ಥಾನಗಳು ಅವನ ಆಧಿಪತ್ಯದಲ್ಲಿದ್ದವೆಂದು ಗೊತ್ತಾಗುತ್ತದೆ. ಧಾರಾಶ್ರಯ ಜಯಸಿಂಹವರ್ಮನು ಲಾಟಮಂಡಲದಲ್ಲಿ ಆಳುತ್ತಿದ್ದನು.

ಲಾಟಮಂಡಲದ ಚಾಳುಕ್ಯರು ಬಾದಾಮಿಯ ಚಲುಕ್ಯರ ಅಧೀನರಾಗಿಯೇ ಇದ್ದರು. ಕ್ರಿ. ಶ. ೬೪೩ರ ಕೈರಾ ತಾಮ್ರಶಾಸನದಲ್ಲಿ ಜಯಸಿಂಹ ರಾಜನ ಮೊಮ್ಮಗನೂ ರಣವಿಕ್ರಾಂತ ಬುದ್ಧವರ್ಮ ರಾಜನ ಮಗನೂ ಆದ ವಿಜಯವರ್ಮರಾಜನು ವಿಜಯಪುರದಲ್ಲಿದ್ದಾಗ ಕಾಶಾಕೂಲ ವಿಷಯದಲ್ಲಿ ಸಂಧಿಯರ ಗ್ರಾಮದ ಪೂರ್ವದಿಕ್ಕಿನಲ್ಲಿದ್ದ ಪರಿಯಯ ಗ್ರಾಮವನ್ನು ಜಂಬೂಸರದ ಛಾತ್ರರಿಗೆ ದಾನಮಾಡಿದನೆಂದು ಬರೆದಿದೆ. ದತ್ತಗ್ರಾಮವು ಸುರತ ಜಿಲ್ಹೆಯಲ್ಲಿ ಓಲ್ಪಾಡ ತಾಲೂಕಿನಲ್ಲಿದ್ದ ಪರಿಯಾ. ಇದರಿಂದ ವಿಜಯವರ್ಮನು ಲಾಟದಲ್ಲಿ ಆಳುತ್ತಿದ್ದನೆಂದು ಹೇಳಬಹುದು.[1] ಸೇಂದ್ರಕವಂಶದ ಪೃಥ್ವೀವಲ್ಲಭ ನಿಕುಂಭಲ್ಲಶಕ್ತಿಯು ಶ್ರೀಯಣಾಹಾರ ವಿಷಯದಲ್ಲಿ ಬಲಸಗ್ರಾಮವನ್ನು ಕ್ರಿ.ಶ. ೬೫೫, ಅಗಸ್ಟ ೮ನೆಯ ದಿನದಲ್ಲಿ ದಾನಮಾಡಿದನೆಂದು ಬಾಗುಮ್ರಾಶಾಸನದಿಂದ ಗೊತ್ತಾಗುತ್ತದೆ. ಶ್ರೀಯಣಾಹಾರವು ಬಾಡೋಲಿಯ ಹತ್ತಿರದಲ್ಲಿದ್ದ ಈಗಿನ ತೇನ್.[2] ಇದರಿಂದ ಸೇಂದ್ರಕರು ಅದೇ ಲಾಟ ಪ್ರಾಂತದಲ್ಲಿ ಆಳುತ್ತಿದ್ದರೆಂದು ಹೇಳಬಹುದು. ನಿಕುಂಭಲ್ಲಶಕ್ತಿಯ ಮಗನಾದ ನಿಕುಂಭ ಜಯಶಕ್ತಿಯು ಕ್ರಿ. ಶ. ೬೮೦ರಲ್ಲಿ ಕುಂದಲಿಕಾಮಲ ವಿಷಯದಲ್ಲಿದ್ದ ಸೇಣಾಣಕ ಗ್ರಾಮವನ್ನು ದಾನಮಾಡಿದನು. ಅಂತು ವಿಜಯವರ್ಮರಾಜನ ತರುವಾಯದಲ್ಲಿ ಸೇಂದ್ರಕರು ಸುರತ ಪ್ರಾಂತದಲ್ಲಿ ಚಲುಕ್ಯರ ಮಾಂಡಲಿಕರಾಗಿದ್ದರು.

ವಿಕ್ರಮಾದಿತ್ಯನ ತಮ್ಮನಾದ ಧಾರಾಶ್ರಯ ಜಯಸಿಂಹವರ್ಮನೂ ಅವನ ಸಂತಾನದವರೂ ಬಡೋದಾ ಪ್ರಾಂತದ ದಕ್ಷಿಣಭಾಗದಲ್ಲಿ ಆಳುತ್ತಿದ್ದರು. ನವಸಾರಿಯ ಎರಡು ತಾಮ್ರಶಾಸನಗಳಿಂದಲೂ (ಕ್ರಿ. ಶ. ೬೭೧, ೭೩೯) ಸುರತ ತಾಮ್ರಶಾಸನ (ಕ್ರಿ. ಶ. ೬೯೨), ಬಲ್ಸಾರ ತಾಮ್ರಶಾಸನ (ಕ್ರಿ, ಶ. ೭೩೧–೩೨) ಗಳಿಂದಲೂ ಜಯಸಿಂಹವರ್ಮನಿಗೆ ಶ್ರ್ಯಾಶ್ರಯ ಶೀಲಾದಿತ್ಯ, ವಿನಯಾದಿತ್ಯ ಯುದ್ಧಮಲ್ಲ ಜಯಾಶ್ರಯ ಮಂಗಲರಸ, ಅವನಿಜನಾಶ್ರಯ ಪುಲಿಕೇಶಿಗಳೆಂಬ ಮೂವರು ಮಕ್ಕಳಿದ್ದರು. ಶ್ರ್ಯಾಶ್ರಯ ಶೀಲಾದಿತ್ಯನು ಕ್ರಿ. ಶ. ೬೭೧, ೬೯೨ ರಲ್ಲಿ ಯುವರಾಜನೆಂದು ಹೇಳಿಕೊಂಡುದರಿಂದ ಆಗ ಜಯಸಿಂಹವರ್ಮನು ಬದುಕಿದ್ದನೆಂದು ತಿಳಿಯಬಹುದು.

[1] *Ind. Ant.* Vol. VII, p. 241.
[2] *Ind. Ant.* Vol. XVIII, p. 265.

ವಿಕ್ರಮಾದಿತ್ಯನ ಮಗ ವಿನಯಾದಿತ್ಯನಿಗೆ ವಿಜಯಾದಿತ್ಯನೆಂಬ ಮಗನೂ ಕುಂಕುಮಮಹಾದೇವಿಯೆಂಬ ಮಗಳೂ ಇದ್ದರು 1 ವಿಜಯಾದಿತ್ಯನ ಮಗನು ೨ನೆಯ ವಿಕ್ರಮಾದಿತ್ಯನು; ಇವನ ಮಗನು ೨ನೆಯ ಕೀರ್ತಿವರ್ಮನು. ಇವನ ಕಾಲದಲ್ಲಿ ಚಲುಕ್ಯರಾಜ್ಯವು ರಾಷ್ಟ್ರಕೂಟರ ಸ್ವಾಧೀನವಾಯಿತು. ಸಾಮನಗಡ ಶಾಸನದಲ್ಲಿ ದಂತಿದುರ್ಗನು ಕರ್ಣಾಟಕಬಲವನ್ನು ಸೋಲಿಸಿದನೆಂದು ಬರೆದಿದೆ. ೧ನೆಯ ಕೃಷ್ಣನು ಚಲುಕ್ಯರನ್ನು ಸಂಪೂರ್ಣವಾಗಿ ಜಯಿಸಿ ಅವರ ರಾಜ್ಯವನ್ನೆಲ್ಲ ಆಕ್ರಮಿಸಿದನು. ಸುಮಾರು ೨ ಶತಮಾನಗಳ ನಂತರ ಚಲುಕ್ಯಮನೆತನದ ತೈಲಪನು ೩ನೆಯ ಕೃಷ್ಣನಲ್ಲಿ ಸೇವಕನಾಗಿದ್ದು 2 ಕಡೆಗೆ ಅವರ ಆಳಿಗಾಲದಲ್ಲಿ ತನ್ನ ಮನೆತನದ ಪೂರ್ವವೈಭವವನ್ನು ಸಂಪಾದಿಸಿದನು.

ಓದುಗರ ಸೌಕರ್ಯಕ್ಕಾಗಿ ಬಾದಾಮಿ ಚಲುಕ್ಯರ ವಂಶಾವಳಿಯನ್ನು ಮಗ್ಗುಲಿನ ಪುಟದಲ್ಲಿ ಕೊಟ್ಟಿದ್ದೇವೆ.

ಜಯಸಿಂಹ ರಣರಾಗರು ಕದಂಬರ ಮಾಂಡಲಿಕರಾಗಿದ್ದಿರಬೇಕು. ರಣರಾಗನ ಮಗನಾದ ಪುಲಿಕೇಶಿಯು ೬ನೆಯ ಶತಮಾನದ ಕೊನೆಯ ಭಾಗದಲ್ಲಿ ಕದಂಬ ಅರಸುಮನೆತನದ ಒಳಜಗಳಗಳನ್ನೂ ಬಲಹೀನತೆಯನ್ನೂ ಕಂಡು ವಾತಾಪಿಯಲ್ಲಿ ಸ್ಥಿರವಾದ ರಾಜ್ಯವನ್ನು ಸಂಪಾದಿಸಿದನು. ಇವನೇ ಚಲುಕ್ಯ ವಂಶವಲ್ಲಿ ಮೊದಲು ಸತ್ಯಾಶ್ರಯನೆಂದು ಪ್ರಸಿದ್ಧಿಯನ್ನು ಪಡೆದನು. ಇವನ ತರುವಾಯದಲ್ಲಿ ಆಳಿದ ರಾಜರೆಲ್ಲ ಈ ಬಿರುದನ್ನು ಧರಿಸಿದ್ದಾರೆ. ಪುಲಿಕೇಶಿಯನ್ನು 'ರಣವಿಕ್ರಮ'ನೆಂದೂ ಕರೆಯುತ್ತಿದ್ದರು.[3] ಇವನಿಗೆ ಇಂದುಕಾಂತಿ,[4] ಬಪ್ಪೂರಕುಲದ ದುರ್ಲಭದೇವಿ ಎಂಬ ಇಬ್ಬರು ಹೆಂಡಂದಿರಿದ್ದರು. ಮಹಾ-

---

[1] ೧೧ ನೆಯ ಶತಮಾನದ ಗುಡಗೇರಿ ಶಿಲಾಶಾಸನ (Ind. Ant. Vol. XVIII, p. 38).

[2] ನರಸಲಿಗಿ ಶಿಲಾಶಾಸನ (B. K. No. 113 of 1929-30)

[3] ಐಹೊಳೆ ಶಾಸನ (*Ep. Ind.* Vol. VI pp. ff.)

[4] ' ಶ್ರೀತೇಂದುಕಾಂತಿರಪಿ ಶ್ರೀವಲ್ಲಭೋಽಪ್ಯಯಾಸೀ ದ್ವಾತಾಪೀಪುರೀವಧೂವರತಾಂ'' ಎಂದು ಐಹೊಳೆ ಶಾಸನದಲ್ಲಿ ಪುಲಿಕೇಶಿಯನ್ನು ಕುರಿತು ಹೇಳಿದೆ. ಇಂದುಕಾಂತಿಯ ಪತಿಯಾಗಿದ್ದರೂ, ರಾಜ್ಯಲಕ್ಷ್ಮಿಗೊಡೆಯನಾಗಿದ್ದರೂ, ವಾತಾಪಿಯನ್ನು ವರಿಸಿದನೆಂದು ಹೇಳಿದರೆ ವಿರೋಧಾಭಾಸವು ಸ್ಪಷ್ಟವಾಗುತ್ತದೆ. ಕೀಲ್ಹಾರ್ನರು ಇಂದುಕಾಂತಿಯೆಂದರೆ ಚಂದ್ರನಂತೆ ಕಾಂತಿಯುಳ್ಳವನಾಗಿದ್ದನೆಂದು ಹೇಳಿದ್ದಾರೆ. ಡುಬ್ರಾಯಿಲರು, ಇಂದುಕಾಂತಿಯು ಒಂದು ಪಟ್ಟಣದ ಹೆಸರೆಂದು ಬರೆದಿದ್ದಾರೆ. (*Ancient History of Deccan*, p. 111.)

ಕೂಟದ ಲಿಪಿಯಲ್ಲಿ ಮಂಗಲೇಶನು ದುರ್ಲಭದೇವಿಯನ್ನು 'ಸ್ವಗುರುಪತ್ನೀ' ಎಂದು ಕರೆದುದರಿಂದ ಆಕೆಯು ಅವನ ಮಲತಾಯಿಯಾಗಿರಬಹುದು. ಪುಲಿಕೇಶಿಯು ಅಗ್ನಿಷ್ಟೋಮ, ಅಗ್ನಿಚಯನ, ವಾಜಪೇಯಾದಿ ಯಾಗಗಳನ್ನು ಮಾಡಿದ್ದನಲ್ಲದೆ ಅಶ್ವಮೇಧಯಜ್ಞವನ್ನು ಮಾಡಿ ಪುಣ್ಯವನ್ನು ಸಂಪಾದಿಸಿದ್ದನು. ಇವನ ವಿಷಯದಲ್ಲಿ ಹೆಚ್ಚಿನ ಸಂಗತಿಗಳಾವುವೂ ತಿಳಿದಿಲ್ಲ.[1]

ಇವನ ಮಗನಾದ ೧ನೆಯ ಕೀರ್ತಿವರ್ಮನು ಕ್ರಿ. ಶ. ೫೬೬ರಲ್ಲಿ ರಾಜನಾದನೆಂದು ಬಾದಾಮಿಯ ವೈಷ್ಣವ ಗುಹೆಯಲ್ಲಿರುವ ಅವನ ೧೨ನೆಯ ವರ್ಷವಾದ ಶಕ ೫೦೦ ( ಕ್ರಿ. ಶ. ೫೭೮ ) ರಲ್ಲಿ ಕೊರೆದ ಶಿಲಾಲಿಪಿಯಿಂದ ಗೊತ್ತಾಗುತ್ತದೆ.[2] ಇದರಲ್ಲಿ ಕೀರ್ತಿವರ್ಮನ ತಮ್ಮನಾದ ಮಂಗಲೇಶನು ಅದ್ಭುತವಾದ ಒಂದು ಸುಂದರ ವಿಷ್ಣುಗೃಹವನ್ನು ನಿರ್ಮಿಸಿ ಅದರಲ್ಲಿ ವಿಷ್ಣುಪ್ರತಿಮೆಯನ್ನು ಪ್ರತಿಷ್ಠಿಸಿ ಬಲಿಪೂಜಾದಿ ನಿಮಿತ್ತವಾಗಿ ಲಂಜೀಶ್ವರ ( ನಂದಿಕೇಶ್ವರ ) ಗ್ರಾಮವನ್ನು ಕೊಟ್ಟನೆಂದು ಬರೆದಿದೆ. ಕೀರ್ತಿವರ್ಮನಿಗೆ ಪುರುರಣಪರಾಕ್ರಮನೆಂದೂ, ಪರಾಕ್ರಮೇಶ್ವರನೆಂದೂ ಬಿರುದುಗಳಿದ್ದಂತೆ ತಿಳಿಯುತ್ತದೆ.[3] ಇವನು ನೆರೆಹೊರೆಯ ರಾಜರಾಗಿದ್ದ ಕದಂಬ ಗಂಗರನ್ನು ಸೋಲಿಸಿದನೆಂದೂ, ಮೌರ್ಯನಳರನ್ನು ಬಗ್ಗುಬಡಿದನೆಂದೂ ಐಹೊಳೆ ಶಾಸನದಲ್ಲಿ ಹೇಳಿದೆ. ದಕ್ಷಿಣದಲ್ಲಿದ್ದ ದ್ರಮಿಳ ( ಪಲ್ಲವ ), ಚೋಳ, ಪಾಂಡ್ಯ, ಕೇರಳ, ಮೂಷಕ, ಆಳುಪರನ್ನೂ ಪರಾಜಿತರನ್ನಾಗಿ ಮಾಡಿದನು. ಉತ್ತರದಲ್ಲಿ ವಂಗ, ಅಂಗ, ಕಲಿಂಗ, ವೆಟ್ಟೂರ, ಮಗಧ, ಮದ್ರಕ ದೇಶಗಳ ರಾಜರನ್ನು ಗೆದ್ದನೆಂದು ಮಹಾಕೂಟ ಶಾಸನದಲ್ಲಿ ಕೊಟ್ಟಿದೆ.[4] ಈ ಉತ್ತರ ದಿಗ್ವಿಜಯವು ಬೇರೆ ಯಾವ ಶಾಸನಗಳಲ್ಲಿಯೂ

---

[1] ಶಕ ೩೧೦, ೪೧೧ ರ ಇವನ ೨ ತಾಮ್ರಶಾಸನು ಸಿಕ್ಕಿರುತ್ತವೆ. ಒಂದರಲ್ಲಿ ನಾಗಸ್ವಾಮಿ ದಿಕ್ಷಿತರೇ ಮೊದಲಾದ ಬ್ರಾಹ್ಮಣರಿಗೆ ಪುಲಿಕೇಶಿಯು ಪಿಪ್ಪಲನಗರವನ್ನು ಕೊಟ್ಟನೆಂದೂ, ಇನ್ನೊಂದರಲ್ಲಿ ರುದ್ರನೀಲ ಸೈಂದ್ರಕಕುಲದ ಸ್ವಾಮಿಯಾರನ ಆಧಿಪತ್ಯದಲ್ಲಿದ್ದ ಕುಹುಂಡಿ ವಿಷಯದ ಅಲಕ್ತಕ ನಗರಿಯಲ್ಲಿ ಚೈತ್ಯಾಲಯವನ್ನು ಕಟ್ಟಿಸಿ ಅದಕ್ಕೆ ಭೂದಾನಮಾಡಿದನೆಂದೂ ಹೇಳಿದೆ. ೨ನೆಯ ಶಾಸನದಲ್ಲಿ ಸಿದ್ಧನಂದಿ, ಚಿಲಾಕಾಚಾರ್ಯ, ನಾಗದೇವ ಮತ್ತು ಜಿನನಂದಿ ಎಂದು ಜೈನಗುರುಗಳ ಪರಂಪರೆ ಕೊಟ್ಟಿದೆ. ಇವೆರಡೂ ಕೃತಕಶಾಸನಗಳು. (*Ind. Ant.* Vols. IX, p. 293, VII. p. 209., *Dyn. Kan. Dist.* p. 344. note 5).

[2] *Ind. Ant.* Vol. X, p. 58.

[3] ಮಹಾಕೂಟದ ಸ್ತಂಭಲಿಪಿ.

[4] *Ind. Ant.* Vol. XIX, p. 16.

ಕಾಣಬರುವುದಿಲ್ಲವಾದುದರಿಂದ ಇದರಲ್ಲಿ ತಥ್ಯಾಂಶವೆಷ್ಟಿದೆಯೆಂಬುದನ್ನು ಹೇಳಲಿಕ್ಕಾಗದು. ಕೀರ್ತಿವರ್ಮನೂ ಬಹು ಸುವರ್ಣ ಅಗ್ನಿಷ್ಟೋಮಯಾಗಗಳನ್ನು ಮಾಡಿ ಪುಣ್ಯವನ್ನು ಪಡೆದಿದ್ದನು. ಪ್ರಾಚೀನ ಕಾಲದಲ್ಲಿ ರಾಜರು ದಿಗ್ವಿಜಯವನ್ನು ಮಾಡಿ ಶತ್ರುಗಳನ್ನು ನಿರ್ಮೂಲ ನಾಶಮಾಡಿ ಸ್ವದೇಶದಲ್ಲಿ ಶಾಂತತೆಯನ್ನು ನೆಲೆಗೊಳಿಸಿದಮೇಲೆ ಯಜ್ಞಯಾಗಾದಿಗಳನ್ನು ಮಾಡುವ ಸಂಪ್ರದಾಯವಿತ್ತು.[1] ಇದರಿಂದ ಅಶ್ವಮೇಧಯಾಜಿಯಾದ ಪುಲಿಕೇಶಿಯು ಸ್ವತಂತ್ರರಾಜ್ಯವನ್ನು ನಿರಾಬಾಧವಾಗಿ ಸ್ಥಾಪಿಸಿದನೆಂದೂ ಅವನ ಮಗನಾದ ಕೀರ್ತಿವರ್ಮನು ಅದನ್ನು ಸ್ಥಿರಪಡಿಸಿದುದಲ್ಲದೆ ಹಬ್ಬಿಸಿದನೆಂದೂ ತಿಳಿಯಬಹುದು.

ಚಿಪಳುಣಶಾಸನದಲ್ಲಿ[2] ಸೇಂದ್ರಕಮನೆತನದ ಶ್ರೀವಲ್ಲಭಸೇನಾನಂದರಾಜನು ೨ನೆಯ ಪುಲಿಕೇಶಿಯ ಸೋದರಮಾವನೆಂದು ಬರೆದಿರುವುದರಿಂದ ಕೀರ್ತಿವರ್ಮನು ಸೇಂದ್ರಕರಾಜನ ಕುಮಾರಿಯನ್ನು ಲಗ್ನವಾಗಿರಬೇಕು. ಇವನಿಗೆ ಪುಲಿಕೇಶಿ, ವಿಷ್ಣುವರ್ಧನ, ಧಾರಾಶ್ರಯಜಯಸಿಂಹ, ಬುದ್ಧವರಸ[3] ಎಂದು ನಾಲ್ಕು ಜನ ಮಕ್ಕಳಿದ್ದರು. ಕೀರ್ತಿವರ್ಮನು ಸಾಯುವಾಗ ಹಿರಿಯ ಮಗನಾದ ಪುಲಿಕೇಶಿಯು ಅಲ್ಪವಯಸ್ಕನಾಗಿದ್ದಿರಬಹುದು. ಆದುದರಿಂದ ಅವನ ತಮ್ಮನಾದ ಮಂಗಲೇಶನು ಚಲುಕ್ಯರಾಜ್ಯದ ಸೂತ್ರಗಳನ್ನು ವಹಿಸಿದನು.

ಮಂಗಲೇಶನಿಗೆ ಉರುರಣಪರಾಕ್ರಮವೆಂಬ ಬಿರುದು ಇತ್ತು. ಮಹಾಕೂಟದ ಶಿಲಾಶಾಸನದಲ್ಲಿ ಇವನ ಆಳಿಕೆಯ ೫ನೆಯ ವರ್ಷವು ಸಿದ್ಧಾರ್ಥಿ

[1] ಗುಪ್ತಮನೆತನದ ಸಮುದ್ರಗುಪ್ತ, ವಿಷ್ಣುಕುಂಡಿ ೧ನೆಯ ಮಾಧವವರ್ಮ ಮೊದಲಾದ ರಾಜರು ಹೀಗೆ ದಿಗ್ವಿಜಯಾನಂತರ ಅಶ್ವಮೇಧಾದಿ ಯಾಗಗಳನ್ನು ಮಾಡಿದ್ದಾರೆ. ಮಹಾಭಾರತದಲ್ಲಿ ಪಾಂಡವರು ಯಾಗಮಾಡಿದುದೂ ದಿಗ್ವಿಜಯಾನಂತರ.

[2] ನಿರ್ಪಾನಶಾಸನದಲ್ಲಿ ಧಾರಾಶ್ರಯ ಜಯಸಿಂಹವರ್ಮನು ಪುಲಿಕೇಶಿವಲ್ಲಭನ ತಮ್ಮನೆಂದು ಬರೆದಿದೆ. ಇದು ಕೃತಕಶಾಸನವಾಗಿದ್ದರೂ ಈ ಅಂಶವನ್ನು ನಂಬಬಹುದು. (*Int. Ant.* Vol. IX, p. 124. *Dyn. Kan. Dist.* p. 358, note 1).

[3] ಸಂಜಾನ ಕೃತಕ ಶಾಸನದಲ್ಲಿ ಬುದ್ಧವರಸನು ೨ನೆಯ ಪುಲಿಕೇಶಿಯ ತಮ್ಮನೆಂದೂ, ಕೊಕ್ಕುಲಿ ವಿಕ್ರಮಾದಿತ್ಯನ ಚಿಕ್ಕಪ್ಪನೆಂದೂ ಬರೆದಿದೆ. (*Ep. Ind.* Vol. XIV, p.) ಬಾಂಧವ್ಯವನ್ನು ಕೊಡುವ ಈ ಅಂಶವನ್ನು ನಂಬಬಹುದೆಂದೂ ಶಾಸನವು ೭ನೆಯ ಶತಮಾನದ ಅಕ್ಷರಗಳಲ್ಲಿ ಕೊರೆಯಲ್ಪಟ್ಟಿರುವುದರಿಂದ ಸೃಷ್ಟಿಯಾಗಿದ್ದರೂ ಆಕಾಲದ ರಾಜರ ಹೆಸರುಗಳನ್ನೇ ಕೊಟ್ಟಿರುವುದೆಂದೂ ಅದನ್ನು ಪ್ರಸಿದ್ಧಿಸಿದ ಸ್ಟೆನ್ ಕೋನೋ ಅಭಿಪ್ರಾಯಪಟ್ಟಿದ್ದಾರೆ.

ಎಂದು ಬರೆದಿದೆ. ಈ ಸಂವತ್ಸರವು ಕ್ರಿ. ಶ. ೬೦೧–೬೦೨ಕ್ಕೆ ಸರಿಯಾದುದರಿಂದ ಮಂಗಲೇಶನು ಕ್ರಿ. ಶ. ೫೯೬–೯೭ರಲ್ಲಿ ಸಿಂಹಾಸನವನ್ನೇರಿರಬೇಕು. ಇವನು ೧೮ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿದ್ದ ಚಲುಕ್ಯವಂಶದ ಸ್ವಾಮಿರಾಜ ನನ್ನು ಕೊಂದನೆಂದು ನೇರೂರ ಶಾಸನದಲ್ಲಿ ಹೇಳಿದೆ. ಈ ಸ್ವಾಮಿರಾಜ ನಾರೆಂಬುದು ಗೊತ್ತಿಲ್ಲ. ಮಂಗಲೇಶನು ಕಲಚ್ಚೂರಿ ರಾಜನಾದ ಶಂಕರಗಣನ ಮಗನಾದ ಬುದ್ಧವರ್ಮರಾಜನನ್ನು ಕಾಳೆಗದಲ್ಲಿ ಸೋಲಿಸಿ ಅವನ ಧನಸಂಚಯ ವನ್ನು ಸ್ವಾಧೀನಪಡಿಸಿಕೊಂಡು ಅದನ್ನು ತನ್ನ ಕುಲದೇವತೆಯ ಉತ್ಸವಕ್ಕಾಗಿ ವ್ಯಯಮಾಡಿದನು. ಗಂಗಾತೀರದಲ್ಲಿ ಜಯಸ್ತಂಭವನ್ನು ನಿಲ್ಲಿಸಬೇಕೆಂದು ಬಗೆದವನು ತನ್ನ ದೇಶದಲ್ಲಿಯೇ ಮಹಾಕೂಟೇಶ್ವರ ದೇವಸ್ಥಾನದಲ್ಲಿ ಧರ್ಮಸ್ತಂಭವನ್ನು ಸ್ಥಾಪಿಸಿದನು. ಬದಾಮಿಯ ಬೆಟ್ಟದಲ್ಲಿ ವಿಷ್ಣುವಿಗ್ರಹ ವನ್ನು ಕೊರೆಯಿಸಿದವನಿವನೇ. ಇವನು ಕೀರ್ತಿವರ್ಮನ ಪ್ರೀತಿಯ ತಮ್ಮ ನಾಗಿದ್ದರೂ ಅವನ ಮರಣಾನಂತರದಲ್ಲಿ ರಾಜ್ಯದಾಶೆಯಿಂದ ವಯಸ್ಸಿಗೆ ಬಂದಿದ್ದ ಪುಲಿಕೇಶಿಯನ್ನು ಬಿಟ್ಟು ತನ್ನ ಮಗನಿಗೇ ಅರಸೊತ್ತಿಗೆ ಬರಬೇಕೆಂದು ನಿಶ್ಚಯಿಸಿದನು.[1] ಇದನ್ನು ತಿಳಿದು ಪಟ್ಟಕ್ಕೆ ಬಾಧ್ಯನಾದ ೨ನೆಯ ಪುಲಿಕೇಶಿಯು ದೇಶವನ್ನು ಬಿಟ್ಟುಹೋಗಲು ನಿಶ್ಚಯಿಸಿದನು.[2] ಮತ್ತು ಪ್ರಭು ಮಂತ್ರೋತ್ಸಾಹಶಕ್ತಿಸಂಪನ್ನನಾದುದರಿಂದ ಚಿಕ್ಕಪ್ಪನೊಡನೆ ಹೋರಾಡಿ ಅವನನ್ನು ಸೋಲಿಸಿ ಚಲುಕ್ಯ ರಾಜ್ಯಲಕ್ಷ್ಮಿಯನ್ನು ವರಿಸಿದನು. ಮಂಗಲೇಶನು ಈ ಕಾಳೆಗದಲ್ಲಿ ಚಲುಕ್ಯಪಟ್ಟದೊಂದಿಗೆ ಜೀವವನ್ನೂ ತೊರೆದನು.

## ಮಂಗಲೇಶನ ಶಾಸನಗಳು :

೧. ಬಾದಾಮಿಯ ವೈಷ್ಣವ ಗುಹೆಯ ಬಂಡೆಗಲ್ಲಿನ ಮೇಲೆ ಕೊರೆದ ಶಾಸನವು.[3] ಮಂಲೇಶನು ತಾನು ವಿಷ್ಣುಪೂಜೆಗಾಗಿ ಹಿಂದೆ ಕೊಟ್ಟಿದ್ದ ಲಂಜಿಗೇಶ್ವರ ಗ್ರಾಮದಲ್ಲಿ ದೇವರ ಹೂವಾಡಿಗರಿಗೆ ೩ ವೀಸ ಪ್ರಮಾಣ ದಿಂದ ಆಯವನ್ನು ಕೊಟ್ಟನು.

---

[1] ಕೀರ್ತಿವರ್ಮನು ಸಾಯುವಾಗ ಪುಲಿಕೇಶಿ ಚಿಕ್ಕವನಿದ್ದನೆಂದೂ ಅವನು ವಯಸ್ಸಿಗೆ ಬರುವವರೆಗೆ ಮಂಗಲೇಶನು ರಾಜ್ಯಸೂತ್ರಗಳನ್ನು ವಹಿಸಿದ್ದನೆಂದೂ ೧೧ನೆಯ ಶತಮಾನದ ಕೌಠೇಂ ನೀಲಗುಂದ ಮೊದಲಾದ ತಾಮ್ರಶಾಸನಗಳಲ್ಲಿ ಬರೆದಿದೆ.

[2] ಪುಲಿಕೇಶಿ 'ಅಪರುದ್ಧಚರಿತ ವ್ಯವಸಾಯಬುದ್ಧಿ'ಯಾದನೆಂದು ಐಹೊಳೆ ಶಾಸನ ದಲ್ಲಿ ಬರೆದಿದೆ.

[3] *Int. Ant.* Vol. X, p. 59.

೨. ಮಹಾಕೂಟದ ಶಾಸನವು.[1]— ರಾಜನು ತನ್ನ ಆಳಿಕೆಯ ೫ನೆಯ ವರ್ಷವಾದ ಸಿದ್ಧಾರ್ತ್ಥಿ ಸಂವತ್ಸರದಲ್ಲಿ ಉತ್ತರ ದಿಗ್ವಿಜಯವನ್ನು ಮಾಡಿ ಭಾಗೀರಥೀ ತೀರದಲ್ಲಿ ಜಯಸ್ತಂಭವನ್ನು ನಿಲ್ಲಿಸಬೇಕೆಂದು ನಿಶ್ಚಯಿಸಿದವನು ತನ್ನ ಮೊದಲಿನ ವಿಚಾರವನ್ನು ಬಿಟ್ಟು ತನ್ನ ದೇಶದಲ್ಲಿಯೇ ಶ್ರೀಮುಕುಟೇಶ್ವರ ದೇವಸ್ಥಾನದ ಮುಂದೆ ಧರ್ಮಸ್ತಂಭವನ್ನು ಊರಿದನು. ಕಲತ್ತೂರಿ ವಿಜಯದಿಂದ ಬಂದ ಹಣವು ಕುಲದೇವತೋತ್ಸವಾದಿಗಳಲ್ಲಿ ವೆಚ್ಚವಾದುದರಿಂದ ತನ್ನ ತಂದೆಯುಣ್ಣಿಂದಿರು ಮುಕುಟೇಶ್ವರನಿಗೆ ಪೂರ್ವದಲ್ಲಿ ಕೊಟ್ಟ ದತ್ತಿಯು ಸಾಲದೇ ಇದ್ದುದರಿಂದ ಕಿಸುವೊಳಲ್, ಕೆಂದೂರುಮಾಸ್ಯ, ನಂದಿಗ್ರಾಮ, ವ್ರೀಹಿಮುಖ, ಶ್ರೀಯಂಬಾಟಕ ಮೊದಲಾದ ಗ್ರಾಮಗಳನ್ನು ತನ್ನ ಮಲತಾಯಿಯಾದ ದುರ್ಲಭದೇವಿಯ ಅನುಮತಿಯಿಂದ ಆ ದೇವರಿಗೆ ದಾನಮಾಡಿದನು.

೩. ನೆರೂರು ತಾಮ್ರಶಾಸನವು.[2] — ಮಂಗಲೇಶನು ಶಂಕರಗಣನ ಮಗನಾದ ಬುದ್ಧವರ್ಮನನ್ನು ಸೋಲಿಸಿದನೆಂದೂ ೧೮ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿದ್ದ ಚಲುಕ್ಯವಂಶದ ಸ್ವಾಮಿರಾಜನನ್ನು ಕೊಂದನೆಂದೂ ಹೇಳಿ, ಕೊಂಕಣ ವಿಷಯದಲ್ಲಿ ಕುಂಡಿವಾಟಕ ಗ್ರಾಮವನ್ನು ದಾನಮಾಡಿದನೆಂದು ಬರೆದಿದೆ. ದತ್ತವಾದ ಗ್ರಾಮವು ರತ್ನಾಗಿರಿ ಜಿಲ್ಲೆಯ ಸಂಗಮೇಶ್ವರ ತಾಲೂಕಿನಲ್ಲಿದ್ದ ಕುಂದಿಯಾಗಿರಬಹುದು. [3]

ಮಂಗಲೇಶನು ಕಾಳೆಗದಲ್ಲಿ ಮಡಿದ ಕೂಡಲೇ ದೇಶದಲ್ಲಿ ಅರಾಜಕತೆಯು ಹಬ್ಬಿತು. ಸಣ್ಣಪುಟ್ಟ ಮಾಂಡಲಿಕರು ಸ್ವತಂತ್ರರಾಗಬೇಕೆಂದು ದಂಗೆಯನ್ನು ಎಬ್ಬಿಸಿದರು. ಅವರಲ್ಲಿ ಅಪ್ಪಾಯಿಕ, ಗೋವಿಂದರೆಂಬ ಪುಂಡರು [4] ಭೀಮಾ ನದಿಯ ಉತ್ತರ ದಂಡೆಯ ವರೆಗೆ ಗಜಸೈನ್ಯದೊಂದಿಗೆ ಬಂದಿರಲು ಉತ್ಸಾಹ ಸಂಪನ್ನನಾದ ಪುಲಿಕೇಶಿಯು ಅವರನ್ನು ತಡೆದು ಸೋಲಿಸಿದನು. ಅವರಲ್ಲೊಬ್ಬನು ಶರಣಾಗತನಾದನು; ಇನ್ನೊಬ್ಬನು ಪುಲಿಕೇಶಿಯ ಪರಾಕ್ರಮಕ್ಕೆ ಹೆದರಿ ಓಡಿಹೋದನು. ಆ ಮೇಲೆ ಪುಲಿಕೇಶಿಯು ವರದಾನದಿಯ ದಂಡೆಯ

---

[1] *Ibid*. Vol. XIX, p. 7.

[2] *And. Ant*. Vol. VII, p. 161.

[3] *Dyn. Kan. Dist*., p. 348 note 4.

[4] ಅಪ್ಪಾಯಿಕ ಗೋವಿಂದನು ಒಬ್ಬನೇ ಎಂದು, ಡಾ. ಎಂ. ಎಚ್. ಕೃಷ್ಣ ಇವರು ತಪ್ಪು ತಿಳಿದುಕೊಂಡಿದ್ದಾರೆ. (M.A.R.1931 p. 202.)

ಮೇಲಿದ್ದ ವನವಾಸಿಯನ್ನೂ, ಅನೇಕ ಕೋಟೆಗಳನ್ನೂ ಸ್ವಾಧೀನಪಡಿಸಿಕೊಂಡನು. ಗಂಗ ಆಳುಪರಾಜರು ತಮ್ಮ ಕೋಶಗಳನ್ನು ಇವನಿಗೆ ಸಮರ್ಪಿಸಿ ಇವನ ಅಡಿಯಾಳಾದರು. ಕೊಂಕಣ ದೇಶದಲ್ಲಿ ಮೌರ್ಯರನ್ನು ಪರಾಜಯಿಸಿ ಪಶ್ಚಿಮಸಮುದ್ರದ ಮುಖ್ಯ ಬಂದರವಾಗಿದ್ದ ಪುರಿಯನ್ನು ಕೈವಶಮಾಡಿಕೊಂಡನು. ಲಾಟ, ಮಾಳವ, ಗೂರ್ಜರ ರಾಜರು ಇವನ ಪ್ರತಾಪಕ್ಕೆ ಹೆದರಿ ಶರಣಾಗತರಾದರು. ಸಕಲೋತ್ತರಾಪಥಾಧೀಶ್ವರನಾದ ಹರ್ಷನು ದಕ್ಷಿಣಾಪಥದ ವಿಜಯಕ್ಕಾಗಿ ದೊಡ್ಡ ಸೈನ್ಯದೊಂದಿಗೆ ವಿಂಧ್ಯಪರ್ವತದ ವರೆಗೆ ಬಂದಿರಲು ಪುಲಿಕೇಶಿಯು ಅವನ ಸೈನ್ಯವನ್ನು ಧ್ವಂಸಮಾಡಿ ಅವನನ್ನು ಹಿಂದಕ್ಕಟ್ಟಿದನು. ಈ ರೀತಿಯಾಗಿ[1] ದಂಗೆ ಎಬ್ಬಿಸಿದ್ದ ಸಾಮಂತರನ್ನೂ ವಿಜಯಾಕಾಂಕ್ಷಿಗಳಾದ ಶತ್ರುಗಳನ್ನೂ ಮುರಿಬಡಿದು ದೇಶದಲ್ಲಿ ಶಾಂತತೆಯನ್ನು ನೆಲೆಗೊಳಿಸಿ ೯೯೦೦೦ ಗ್ರಾಮಗಳನ್ನೊಳಗೊಂಡ ಮೂರು ಮಹಾರಾಷ್ಟ್ರಕಗಳಿಗೆ ಅಧಿಪತಿಯಾದನು. ಕೋಸಲ, ಕಲಿಂಗದೇಶಗಳ ರಾಜರು ಇವನ ಸೈನ್ಯದ ಸುಳುವನ್ನು ಕೇಳಿ ಭಯಗ್ರಸ್ತರಾದರು. ಪಿಷ್ಟಪುರ (ಗೋದಾವರಿ ಜಿಲ್ಹೆಯಲ್ಲಿರುವ ಪಿಠಾಪುರ)ದ ಕೋಟೆಯನ್ನು ಕೈವಶಮಾಡಿಕೊಂಡನು. ಕೌನಾಲ ಸರೋವರದ ಮಾರ್ಗವಾಗಿ ದಕ್ಷಿಣಕ್ಕೆ ಬಂದು ಪರಾಕ್ರಮದಿಂದ ಮೆರೆಯುತ್ತಿದ್ದ ಪಲ್ಲವರಾಜನನ್ನು ಕಾಂಚೀಪುರದ ಪ್ರಾಕಾರದೊಳಗೆ ಭಯದಿಂದ ಅವಿತುಕೊಳ್ಳುವಂತೆ ಮಾಡಿದನು. ಮಹೇಂದ್ರವಿಕ್ರಮನು ಪೆರುವಳನೆಲ್ಲೂರಲ್ಲಿ ತನ್ನ ಪ್ರಕೃತ್ಯಮಿತ್ರರನ್ನು (ದ್ವಿಷಾತಾಂ ವಿಶೇಷಾನ್) ಯುದ್ಧದಲ್ಲಿ ಸೋಲಿಸಿದನೆಂದು ಪಲ್ಲವ ಶಾಸನಗಳಲ್ಲಿ ಹೇಳಿರುವುದರಿಂದ[2] ಪಲ್ಲವ ಮನೆತನದ ನಿಸರ್ಗಶತ್ರುಗಳಾದ ಚಲುಕ್ಯರ ೨ನೆಯ ಪುಲಿಕೇಶಿಯು ಸೋಲಿಸಿದ ಪಲ್ಲವರಾಜನು ಮಹೇಂದ್ರವಿಕ್ರಮನೇ ಆಗಿರಬೇಕೆಂದು ಫ್ಲೀಟರು ಅಭಿಪ್ರಾಯಪಟ್ಟಿದ್ದಾರೆ.[3] ಪುಲಿಕೇಶಿಯು ಕಾವೇರೀನದಿಯನ್ನು ದಾಟಿ ಚೋಳ,

---

[1] ಕೆಲವರು ಪುಲಿಕೇಶಿಯು ಹರ್ಷವರ್ಧನನನ್ನು ಸೋಲಿಸಿದ ಮೇಲೆ ೯೯೦೦೦ ಗ್ರಾಮಗಳುಳ್ಳ 'ಮಹಾರಾಷ್ಟ್ರಕತ್ರಯ'ವೆಂಬ ದೇಶವನ್ನು ಗೆದ್ದನೆಂದು ಹೇಳಬಹುದು. ಆದರೆ ವರ್ಣನಾರೀತಿಯನ್ನೂ ಶಬ್ದಪ್ರಯೋಗವನ್ನೂ ನೋಡಿದರೆ ಶತ್ರುಭಂಗವಾದ ಮೇಲೆ ಪುಲಿಕೇಶಿ ತನ್ನ ರಾಜ್ಯವಾದ ಮಹಾರಾಷ್ಟ್ರಕತ್ರಯಕ್ಕೆ ಅಧಿಪತಿಯಾದನೆಂದು ಗೊತ್ತಾಗುತ್ತದೆ. ಇದಲ್ಲದೆ ಮಹಾರಾಷ್ಟ್ರಕತ್ರಯವೆಂಬ ಹೆಸರಿನ ದೇಶವು ಇದ್ದುದು ಎಲ್ಲಿಯೂ ತಿಳಿಯಬಂದಿಲ್ಲ. ಮುಂದೆ 'ಮಹಾರಾಷ್ಟ್ರಕತ್ರಯ'ವನ್ನು ಕುರಿತು ಬರೆದ ಟಿಪ್ಪಣಿಯಲ್ಲಿ ಈ ವಿಷಯದ ಚರ್ಚೆಯನ್ನು ನೋಡಿರಿ.

[2] ಕಾಶಾಕುಡಿ ತಾಮ್ರಶಾಸನ, (S.I.I. Vol. II No. 73)

[3] *Dyn. Kan. Dist.* pp. 324, 350.

ಕೇರಳ, ಪಾಂಡ್ಯರ ಮೇಲಿದ್ದ ಪಲ್ಲವರ ವರ್ಚಸ್ಸನ್ನು ತೆಗೆದುಹಾಕಿ ಅವರನ್ನು ಸಂತೋಷಗೊಳಿಸಿದನು. ಹೀಗೆ ಪ್ರಭುಮಂತ್ರೋತ್ಸಾಹಶಕ್ತಿಸಂಪನ್ನನಾದ ಪುಲಿಕೇಶಿಯು ದಿಗ್ವಿಜಯವನ್ನು ಮುಗಿಸಿ ದೇವಬ್ರಾಹ್ಮಣರನ್ನು ಪೂಜಿಸಿ ರಾಜಧಾನಿಯಾದ ವಾತಾಪಿಪಟ್ಟಣವನ್ನು ಹೊಕ್ಕನು. ಪುಲಿಕೇಶಿಯ ೩ನೆಯ ವರ್ಷವಾದ ಶಕ ೫೩೪ ರ ಹೈದ್ರಾಬಾದ ತಾಮ್ರಶಾಸನದಲ್ಲಿ ಅವನು ಅನೇಕ ಶತ್ರುರಾಜರನ್ನು ಗೆದ್ದು 'ಪರಮೇಶ್ವರ'ನೆಂಬ ಬಿರುದನ್ನು ಪಡೆದು ವಾತಾಪಿಯಲ್ಲಿ ರಾಜ್ಯಭಾರಮಾಡುತ್ತಿದ್ದನೆಂದು ಬರೆದಿರುವುದರಿಂದ ಈ ದಿಗ್ವಿಜಯವು ಶಕ ೫೩೪ (ಕ್ರಿ. ಶ. ೬೧೨)ಕ್ಕಿಂತ ಪೂರ್ವದಲ್ಲಿಯೇ ಸಂಭವಿಸಿರಬೇಕು.[1]

ಸತ್ಯಾಶ್ರಯ ಧ್ರುವರಾಜ ಇಂದ್ರುವರ್ಮನು ಪುಲಿಕೇಶಿಯ ಮಾಂಡಲಿಕನಾಗಿ ರೇವತೀದ್ವೀಪದಲ್ಲಿ ಶಕ ೫೩೨, ಮಾಘ ಪೌರ್ಣಿಮೆಯ ದಿನದಂದು (೫-೧-೬೧೧) ಆಳುತ್ತಿದ್ದನು. ಕೊಪ್ಪರಂ ತಾಮ್ರಶಾಸನದ ಕಾಲವು ಪುಲಿಕೇಶಿಯ ಆಳಿಕೆಯ ೨೧ ನೆಯ ವರ್ಷದ ಕಾರ್ತಿಕ ಮಹಾನವಮಿ (ಕ್ರಿ. ಶ. ೬೩೧, ಅಕ್ಟೋಬರ ೧೦). ಇದರಿಂದ ಪುಲಿಕೇಶಿಯ ಪಟ್ಟಬಂಧವು ೧೧-೧೦-೬೧೦ ಅಥವಾ ಅಲ್ಲಿಂದಾಚೆಗೆ ಜರುಗಿರಬೇಕೆಂದು ಸುಯೆಲ್ಲರು ಹೇಳಿದ್ದಾರೆ.[2] ಮೇಲಿನ ಗೋವಾಶಾಸನದ ಕಾಲದಲ್ಲಿ ಪುಲಿಕೇಶಿಯು ಮಹಾರಾಜನಾಗಿದ್ದುದರಿಂದ ಅವನು ೧೧-೧೦-೬೧೦, ೫-೧-೬೧೧ರ ಮಧ್ಯದಲ್ಲಿ ಚಲುಕ್ಯರಾಜ್ಯದ ಸೂತ್ರಗಳನ್ನು ವಹಿಸಿರಬೇಕು.

ದಿಗ್ವಿಜಯಾನಂತರದಲ್ಲಿ ಪುಲಿಕೇಶಿಯು ತನ್ನ ತಮ್ಮಂದಿರಲ್ಲೊಬ್ಬನಾದ ಧರಾಶ್ರಯ ಜಯಸಿಂಹವರ್ಮನನ್ನು ಉತ್ತರದಲ್ಲಿ ನಾಸಿಕ ಪ್ರಾಂತಕ್ಕೂ, ಮತ್ತೊಬ್ಬನಾದ ಕುಬ್ಜ ವಿಷ್ಣುವರ್ಧನನನ್ನು ವೆಂಗಿಮಂಡಳಕ್ಕೂ ಅಧಿಪತಿಗಳನ್ನಾಗಿ ನೇಮಿಸಿದನು. ವಿಷ್ಣುವರ್ಧನನು ಕ್ರಿ. ಶ. ೬೧೬-೧೭ರಲ್ಲಿ ಪುಲಿಕೇಶಿಯು ಯುವರಾಜನಾಗಿ ಸಾತಾರೆಯ ಪ್ರಾಂತದಲ್ಲಿ ಆಳುತ್ತಿದ್ದನೆಂದು ಸಾತಾರೆ ತಾಮ್ರಶಾಸನದಿಂದ ಗೊತ್ತಾಗುತ್ತದೆ. ಕೆಲಕಾಲವಾದ ಮೇಲೆ ವಿಷ್ಣುವರ್ಧನನ ಮನೆತನವು ಸ್ವತಂತ್ರವಾಗಿ ಆಳತೊಡಗಿತು. ಈ ಮನೆತನ

---

[1] *Dyn. Kan. Dist*, pp. 351, 356. ಮಂಗಲೇಶನ ಮರಣಾನಂತರದಲ್ಲಿ ಚಲುಕ್ಯರ 'ಛತ್ರಭಂಗ' ವಾದುದರಿಂದ ಪುಲಿಕೇಶಿಯು ಉನ್ಮತ್ತರಾದ ರಾಜರನ್ನು ಸೋಲಿಸಿ ವಾತಾಪಿಪುರವನ್ನು ಪ್ರವೇಶಿಸಿದನೆಂದು ಐಹೊಳೆ ಶಾಸನದಲ್ಲಿ ಹೇಳಿರುವುದರಿಂದ ಆ ಶಾಸನದಲ್ಲಿ ಹೇಳಿದ ದಿಗ್ವಿಜಯವು ಒಂದೇ ಪ್ರಸಂಗದಲ್ಲಿ ನಡೆದುದು ಸ್ವಾಭಾವಿಕವು.

[2] *Ep. Ind.* Vol. XVIII. p. 260, Post Script.

ದವರೇ ಪೂರ್ವ ಚಲುಕ್ಯರೆಂದು ಹೆಸರುಗೊಂಡರು. ಬಪ್ಪೂರ ಕುಲದ ಸತ್ಯಾಶ್ರಯ ಧ್ರುವರಾಜ ಇಂದ್ರವರ್ಮನು ಪುಲಿಕೇಶಿಯ ಅಧೀನನಾಗಿ ತನ್ನ ೨೦ನೆಯ ವರ್ಷವಾದ ಶಕ ೫೩೨ (ಕ್ರಿ. ಶ. ೬೧೧) ರಲ್ಲಿ ರೇವತೀದ್ವೀಪದಲ್ಲಿದ್ದ ನಾಲ್ಕು ವಿಷಯುಗಳನ್ನೂ [1] ಅನೇಕ ಮಂಡಳಗಳನ್ನೂ ಆಳುತ್ತಿದ್ದನೆಂದು ಹೇಳಿದ್ದೇವೆ. [2] ಗುಜರಾತದ ಆಳಿಕೆಯು ಶಕ ೫೧೨ (ಕ್ರಿ. ಶ. ೫೯೦) ರಲ್ಲಿ ಪ್ರಾರಂಭಿಸಿರಬೇಕು. ಅಂದರೆ ಕೀರ್ತಿವರ್ಮರಾಜನು ಕೊಂಕಣದ ಮೌರ್ಯ ರನ್ನು ಸೋಲಿಸಿ ಆ ಪ್ರಾಂತದ ಭಾಗಗಳನ್ನು ತನ್ನ ತಾಯಿಯಾದ ಬಪ್ಪೂರ ಕುಲದ ದುರ್ಲಭದೇವಿಯು ಕಡೆಯಿಂದ ಬಾಂಧವನಾದ ಧ್ರುವರಾಜ ಇಂದ್ರ ವರ್ಮನಿಗೆ ಕೊಟ್ಟಿರಬಹುದು.[3]

ಪುಲಿಕೇಶಿಯು ಈ ರೀತಿಯಾಗಿ ಬೇರೆಬೇರೆ ಭಾಗಗಳಲ್ಲಿ ತನ್ನ ಪ್ರತಿನಿಧಿ ಗಳನ್ನಿಟ್ಟು ವಿಸ್ತಾರವಾದ ರಾಜ್ಯವನ್ನಾಳುತ್ತಿದ್ದನು. ಇವನ ಖ್ಯಾತಿಯು ಭರತವರ್ಷದಲ್ಲಿ ಮಾತ್ರವಲ್ಲದೆ ಇರಾಣದೇಶದವರೆಗೂ ಹಬ್ಬಿತ್ತು. ಅಲ್ಲಿಯ ರಾಜನಾದ ೨ನೆಯ ಖುಸ್ರುವಿಗೂ ಪುಲಿಕೇಶಿಗೂ ಪತ್ರವ್ಯವಹಾರವು ನಡೆದಿ ತ್ತೆಂದೂ ಖುಸ್ರುವಿನ ಸಭೆಗೆ ಪುಲಿಕೇಶಿಯು ತನ್ನ ರಾಯಭಾರಿಯನ್ನು ಕಳುಹಿಸಿದ್ದನೆಂದೂ "ಟಬರಿ" ಎಂಬ ಅರಬ್ ಇತಿಹಾಸಕರ್ತನ ಗ್ರಂಥದಿಂದ ಗೊತ್ತಾಗುತ್ತದೆ. [4] ಇದನ್ನು ಕುರಿತು ಈತನು ಹೀಗೆ ಬರೆದಿದ್ದಾನೆ: ಖುಸ್ರುವಿನ ಮಗನಾದ ಷಿರಿಯನು ತನ್ನ ತಂದೆಯನ್ನು ಪಟ್ಟದಿಂದ ತಳ್ಳಿ ಸೆರೆಯಲ್ಲಿಟ್ಟುದಲ್ಲದೆ ಅವನನ್ನು ಕೊಂದು ತಾನೇ ರಾಜನಾಗಬೇಕೆಂದು ಹವಣಿ ಸುತ್ತಿದ್ದನು. ಈ ಉದ್ದೇಶವನ್ನು ಸಾಧಿಸುವುದಕ್ಕಾಗಿ ಷಿರಿಯನು ತಂದೆಯ ಮೇಲೆ ಕೆಲವು ಆಪಾದನೆಗಳನ್ನು ಹೊರಿಸಿದಾಗ ಖುಸ್ರು ತಾನು ತಪ್ಪಿತಸ್ಥನಲ್ಲ ವೆಂದು ಪ್ರತಿಪಾದಿಸುವ ಸಮಯದಲ್ಲಿ ತನ್ನ ಮಗನಿಗೆ ಹೇಳಿದ್ದೇನಂದರೆ:— 'ಎರಡು ವರ್ಷಗಳ ಹಿಂದೆ ಹಿಂದೂ ದೇಶದ ಅರಸನಾದ ಪುಲಿಕೇಶಿಯು ನಮ್ಮ

---

[1] ನಾಲ್ಕು ವಿಷಯುಗಳಲ್ಲಿ ಲಾಟವು ಒಂದಾಗಿತ್ತೆಂದು ಫ್ಲೀಟರು ಬರೆದಿದ್ದಾರೆ. *Dyn. Kan. Dist.* p. 311.

[2] ಗೋವಾ ತಾಮ್ರಶಾಸನ, *J. Bom. R.A.S.* Vol. X, p. 348.

[3] ಸತ್ಯಾಶ್ರಯಧ್ರುವರಾಜ ಇಂದ್ರವರ್ಮನು ಮಂಗಲೇಶನ ಮಗನಾಗಿರಬಹುದೆಂದು ಫ್ಲೀಟರು ಹೇಳುತ್ತಾರೆ. (*Dyn. Kan. Dist.* p. 349)

[4] *Jour. R. As. Soc.* Vol. XI, p. 165. ಪ್ರೊ. ಮುಜುಮದಾರರು ಈ ಪತ್ರವ್ಯವಹಾರವು ಖುಸ್ರುವಿಗೂ, ಪರಮೇಶ್ವರ ಹರ್ಷವರ್ಧನನಿಗೂ ನಡೆದಿತ್ತೆಂದು ಹೇಳುತ್ತಾರೆ.

ರಾಜ್ಯಭಾರದ ೩೬ ನೆಯ ವರ್ಷದಲ್ಲಿ ನಮಗೊಂದು ಪತ್ರವನ್ನೂ ನಿಮ್ಮೆಲ್ಲರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ಪತ್ರಗಳನ್ನೂ, ಪಾರಿತೋಷಕಗಳನ್ನೂ ರಾಯಭಾರಿಗಳ ಮುಖಾಂತರವಾಗಿ ಕೊಟ್ಟು ಕಳುಹಿಸಿದ್ದನು. ನಿನಗೆ ಅವನು ಕತ್ತೆ ಪಾರಿವಾಳ ಗಳನ್ನು ಕಳುಹಿಸಿದ್ದುದನ್ನು ಮರೆತುಬಿಟ್ಟೆಯಾ? ನಿನಗೆ ಬರೆದಿದ್ದ ಪತ್ರದ ಮೇಲೆ 'ರಹಸ್ಯ'ವೆಂದು ಹಿಂದೂ ದೇಶದ ಭಾಷೆಯಲ್ಲಿ ಬರೆದಿದ್ದುದನ್ನು ಕಂಡು ಅದನ್ನು ನಿನಗೆ ಕೊಡದೆ ಆ ಭಾಷೆಯನ್ನರಿತವನನ್ನು ಕರೆಯಿಸಿ ಓದಿಸಿದೆವು. ಅದರಲ್ಲಿ ಹೀಗೆ ಇತ್ತು: 'ಸಂತೋಷವಾಗಿರು, ಎದೆಗುಂದಬೇಡ. ಖುಸ್ರುವಿನ ೩೮ ನೆಯ ವರ್ಷದಲ್ಲಿ ನೀನು ಇರಾಣದ ಸಾರ್ವಭೌಮನಾಗುವೆ— ಪುಲಿಕೇಶಿ' ಪುಲಿಕೇಶಿಯ ಸಾಮ್ರಾಜ್ಯಕ್ಕೂ ಇರಾಣಕ್ಕೂ ನಿಕಟಸಂಬಂಧವಿದ್ದಿತೆಂಬುದು ಅಜಂತಾ ಗುಹೆಗಳಲ್ಲಿಯ ಚಿತ್ರಗಳಲ್ಲಿ ಕಾಣಬರುವ ಇರಾಣ ದೇಶದ ಉಡುಪು ಗಳಿಂದಲೂ ಗೊತ್ತಾಗುತ್ತದೆ. [1]

ಚೀನದೇಶದ ಪ್ರವಾಸಿಕನಾದ ಹುಯೆನ್‌ತ್ಸಾಂಗನು ಬೌದ್ಧಮತದ ತತ್ವಗಳನ್ನು ತಿಳಿದುಕೊಳ್ಳುವುದಕ್ಕೂ ಬೌದ್ಧಗ್ರಂಥಗಳನ್ನು ಸಂಗ್ರಹಿಸುವುದಕ್ಕೂ ಕ್ರಿ. ಶ. ೬೨೯ ರಿಂದ ೬೪೫ರ ವರೆಗೆ ಹಿಂದುಸ್ಥಾನದಲ್ಲಿ ಸಂಚರಿಸಿ ಪುಲಿಕೇಶಿಯ ಸಾಮ್ರಾಜ್ಯ, ರಾಜಧಾನಿ, ಜನರ ಸ್ವಭಾವ ಮೊದಲಾದವುಗಳನ್ನು ಕುರಿತು ಹೀಗೆ ಬರೆದಿದ್ದಾನೆ :— ಮೊಹೋಲಚ (ಮೊಹೋಲಟ) ವು ಸುಮಾರು ೬೦೦೦ ಲಿ (ಸು ೧೦೦೦ ಮೈಲು) ಸುತ್ತಳತೆಯುಳ್ಳದ್ದು. ಸುಮಾರು ೩೦ ಲಿ ಸುತ್ತಳತೆಯುಳ್ಳ ಅವರ ರಾಜಧಾನಿಯ ಪಶ್ಚಿಮಕ್ಕೆ ಒಂದು ದೊಡ್ಡ ನದಿಯುಂಟು. ಭೂಮಿಯು ಬಹು ಫಲವತ್ತಾಗಿದೆ. ಅದು ನಿರಂತರವಾಗಿ ಕೃಷಿಯಲ್ಲಿದ್ದು ಚನ್ನಾಗಿ ಬೆಳೆಯುತ್ತದೆ. ದೇಶದ ಹವೆ ಉಷ್ಣ. ಜನರು ಪ್ರಾಮಾಣಿಕರೂ ಸಭ್ಯರೂ ಆಗಿದ್ದಾರೆ. ಅವರು ಎತ್ತರವಾದ ಆಕಾರವುಳ್ಳವರೂ ಕಟುವಾದ ಛಲವಂತರೂ ತಮಗೆ ಉಪಕಾರಮಾಡಿದವರಿಗೆ ಕೃತಜ್ಞರೂ ಹಗೆಗಳಿಗೆ ನಿರ್ದಯರೂ ಆಗಿದ್ದಾರೆ. ತಮಗೆ ಅವಮಾನ ಮಾಡಿದವರಿಗೆ ಪ್ರತೀಕಾರ ಮಾಡಲು ಪ್ರಾಣವನ್ನಾದರೂ ತೊರೆಯುವರು. ವಿಪತ್ತಿಗೀಡಾದವರು ಇವರ ಸಹಾಯವನ್ನು ಕೋರಿದರೆ ಅವರಿಗೆ ನೆರವಾಗುವ ಭರದಲ್ಲಿ ತಮ್ಮ ಸ್ವಾರ್ಥವನ್ನು ಎಣಿಸುವುದೇ ಇಲ್ಲ. ಶತ್ರುಗಳ ಮೇಲೆ ಸೇಡನ್ನು ತೀರಿಸಿಕೊಳ್ಳುವ ಮೊದಲು ಅವರಿಗೆ ಎಚ್ಚರ ಕೊಡುವರು, ಆಮೇಲೆ ಉಭಯಪಕ್ಷದವರೂ ಶಸ್ತ್ರಪಾಣಿ

---

[1] ಹೈದರಾಬಾದ ಶಾಸನಖಾತೆಯವರು ಪ್ರಸಿದ್ಧಮಾಡಿದ ಅಜಂತೆಯ ಚಿತ್ರಗಳನ್ನು ನೋಡಿರಿ.

ಗಳಾಗಿ ಹೋರಾಡುವರು. ಶತ್ರು ಪಲಾಯನಮಾಡಿದರೆ ಅವನನ್ನು ಬೆನ್ನಟ್ಟುವರು. ಆದರೆ ಶರಣಾಗತನಾದವನನ್ನು ಕೊಲ್ಲುವುದಿಲ್ಲ. ಸೇನಾಪತಿ ಯುದ್ಧದಲ್ಲಿ ಸೋತರೆ ಅವನನ್ನು ದಂಡನೆಗೆ ಗುರಿಮಾಡುವುದಿಲ್ಲ. ಅವನಿಗೆ ಹೆಂಗಸರ ಉಡುವುಗಳನ್ನು ಉಡಿಸುವರು. ಈ ಅಪಮಾನವನ್ನು ಸಹಿಸಲಾರದೆ ತಾನೇ ಪ್ರಾಣವನ್ನು ನೀಗಿಕೊಳ್ಳುವನು. ಈ ದೇಶದಲ್ಲಿ ನೂರಾರು ಮಂದಿ ಜಟ್ಟಿಗಳಿದ್ದಾರೆ. ಹೋರಾಡುವುದಕ್ಕೆ ಮೊದಲು ಅವರು ಮದ್ಯಪಾನದಿಂದ ಮತ್ತರಾಗುವರು. ಆಗ ಒಬ್ಬೊಬ್ಬನು ಹತ್ತುಸಾವಿರ ಮಂದಿಯನ್ನು ಎದುರಿಸುವಷ್ಟು ಸಮರ್ಥನಾಗುವನು. ಜಟ್ಟಿಯು ಕಾಳಗದಲ್ಲಿ ಯಾರನ್ನಾದರೂ ಕೊಂದರೆ ಅವನು ಶಿಕ್ಷೆಗೆ ಗುರಿಯಾಗುವುದಿಲ್ಲ. ಅವರು ಯುದ್ಧಕ್ಕೆ ಹೋಗುವಾಗ ನಗಾರಿಗಳನ್ನು ಬಾರಿಸುತ್ತ ಹೋಗುವರು. ಮದಿಸಿದ ನೂರಾರು ಆನೆಗಳನ್ನು ತೆಗೆದುಕೊಂಡು ರಣಾಂಗಣಕ್ಕೆ ನುಗ್ಗಿ ಆರ್ಭಟಿಸುವಾಗ ಶತ್ರುಗಳು ಇವರೆದುರಿಗೆ ನಿಲ್ಲಲಾರರು. ಇಂತಹ ಬಲಿಷ್ಠರಾದ ಸೈನಿಕರೂ ಆನೆಗಳೂ ರಾಜನಲ್ಲಿರುವುದರಿಂದ ನೆರೆಹೊರೆಯ ಅರಸನನ್ನು ಕಂಡರೆ ಅವನಿಗೆ ಲಕ್ಷ್ಯವಿಲ್ಲ. ಇವನು ಕ್ಷತ್ರಿಯನು. ಇವನ ಹೆಸರು ಪುಲೊಕಿಷೆ (ಪುಲಕೇಶಿ). ಇವನ ರಾಜ್ಯತಂತ್ರವು ವಿಶಾಲವ್ಯಾಪ್ತಿಯುಳ್ಳದ್ದು. ಇವನ ಧರ್ಮಕಾರ್ಯಗಳು ಲೋಕಕ್ಕೆ ಹಿತಕಾರಿಗಳಾಗಿವೆ. ಪ್ರಜೆಗಳು ಇವನಿಗೆ ಬಹು ವಿಧೇಯರಾಗಿದ್ದಾರೆ. ಈಗ ಶೀಲಾದಿತ್ಯ ಮಹಾರಾಜನು ( ಹರ್ಷವರ್ಧನನು ) ಪೂರ್ವದಿಂದ ಪಶ್ಚಿಮದ ವರೆಗಿರುವ ದೇಶಗಳನ್ನು ಗೆದ್ದು ದೂರದಲ್ಲಿಯ ಅನ್ಯ ದೇಶಗಳಿಗೂ ದಂಡೆತ್ತಿ ಹೋಗಿದ್ದಾನೆ. ಆದರೆ ಈ ದೇಶದ ಜನರು ಮಾತ್ರ ಅವನ ಆಧಿಪತ್ಯಕ್ಕೆ ಒಳ ಪಟ್ಟಿಲ್ಲ. ಇವರನ್ನು ಜಯಿಸಬೇಕೆಂದು ಅವನು ಪಂಚಪ್ರಾಂತಗಳಿಂದಲೂ ದಂಡನ್ನು ಕೂಡಿಸಿ ತಾನೇ ಅದರ ನಾಯಕತ್ವವನ್ನು ವಹಿಸಿ ಅವರ ಮೇಲೆ ಹೋದರೂ ಅವರು ಇವನಿಗೆ ಬಗ್ಗಲಿಲ್ಲ. ಇದಿಷ್ಟು ಅವರ ಪೌರುಷದ ಮಾತಾಯಿತು. ಈ ಜನರು ವಿದ್ಯಾವ್ಯಸನಿಗಳು. ಜೈನ ವೈದಿಕ ಗ್ರಂಥಗಳನ್ನೂ, ಬೌದ್ಧ ಗ್ರಂಥಗಳನ್ನೂ ಅಧ್ಯಯನಮಾಡುವರು. ಈ ರಾಜ್ಯದಲ್ಲಿ ಸುಮಾರು ೧೦೦ ಸಂಘಾರಾಮಗಳಿವೆ. ಅವುಗಳಲ್ಲಿ ಸುಮಾರು ೫೦೦೦ ಬಿಕ್ಷುಗಳಿದ್ದಾರೆ. ಅವರು ಮಹಾಯಾನ, ಹೀನಯಾನಗಳೆರಡನ್ನೂ ಅನುಸರಿಸುತ್ತಾರೆ. ಇಲ್ಲಿ ಸುಮಾರು ೧೦೦ ದೇವಾಲಯಗಳೂ ಇವೆ. ಭಿನ್ನ ಭಿನ್ನ ಮತದ ಅನೇಕ ಜೈನ ವೈದಿಕ ಧರ್ಮಾನುಯಾಯಿಗಳು ಅವುಗಳಲ್ಲಿ ವಾಸಮಾಡುತ್ತಾರೆ. ರಾಜಧಾನಿಯ ಒಳಗೂ ಹೊರಗೂ ನಾಲ್ವರು ಪ್ರಾಚೀನ ಬುದ್ಧರ ವಾಸಸ್ಥಾನ ಸ್ಮಾರಕಗಳಾದ ೫ ಸ್ತೂಪಾರಾಮಗಳಿವೆ. ಅವುಗಳನ್ನು ಕಟ್ಟಿಸಿದವನು ಅಶೋಕಮಹಾರಾಜನು. ಇವಲ್ಲದೆ ಅಲ್ಲಿ ಇನ್ನೂ ಅಸಂಖ್ಯ ಸ್ತೂಪಗಳಿರುತ್ತವೆ. ಈ ಪಟ್ಟಣದ ಹತ್ತಿರವೇ

ದಕ್ಷಿಣ ಭಾಗದಲ್ಲಿ ಬೋಧಿಸತ್ವನ ವಿಗ್ರಹವುಳ್ಳ ಒಂದು ಸಂಘಾರಾಮವುಂಟು. ಈ ಬೋಧಿಸತ್ವನ ಮಹಿಮೆಯು ದೇಶದಲ್ಲೆಲ್ಲ ಹಬ್ಬಿದೆ. ಈತನ ಪ್ರಸಾದದಿಂದ ಅನೇಕರ ಬೇಡಿಕೆಗಳು ಕೈಗೂಡಿವೆ. ಈ ದೇಶದ ಪೂರ್ವದ ಮೇರೆಯಲ್ಲಿ ಎತ್ತರವಾದ ಶಿಖರಗಳೂ ಕಡಿದಾದ ಕೊಳ್ಳಗಳೂ ಉಳ್ಳ ಒಂದು ದೊಡ್ಡ ಪರ್ವತವಿದೆ. ಇದರ ಒಂದು ಕಣಿವೆಯಲ್ಲಿ ಭವ್ಯವಾದ ಪಡಸಾಲೆಗಳುಳ್ಳ ಸಂಘಾರಾಮವುಂಟು. ಈ ಭವನವನ್ನು ಅರ್ಹತ್ ಆಚಾರನು ಕೊರೆಯಿಸಿದನು. ಇಲ್ಲಿಂದ ಸುಮಾರು ೧೦೦೦ ಲಿ ( ೧೬೬ ಮೈಲು ) ಅಂತರ ಪಶ್ಚಿಮಕ್ಕೆ ಹೋಗಿ ನರ್ಮದಾನದಿಯನ್ನು ದಾಟಿದರೆ ಭರುಕಚ್ಛ ( ಪೋಲಕಿಚೆಪೊ ) ದೇಶವು ಸಿಕ್ಕುತ್ತದೆ. " [1]

ಹುಯೆನ್‌ತ್ಸಾಂಗನು ವರ್ಣಿಸಿರುವ ಮೋಹೋಲಚ ( ಟ ) ವು ಮಹಾರಟ್ಠ ( ಮಹಾರಾಷ್ಟ್ರದ ) ಅಪಭ್ರಂಶವು. ಈ ದೇಶದ ರಾಜಧಾನಿಯ ವರ್ಣನಾಂಶಗಳಿಂದ ಅದು ನಾಸಿಕವೇ ಆಗಿರಬೇಕೆಂದು ಹೇಳಬಹುದು. ಈ ದೇಶದ ಪೂರ್ವಮೇರೆಯಲ್ಲಿದ್ದ ಪರ್ವತವು ಅಜಂತಾ ಗುಹೆಗಳುಳ್ಳ ವಿಂಧ್ಯಾದ್ರಿಯ ಸಾಲು. ಈ ಪರ್ವತಾವಳಿಯ ಮತ್ತು ರಾಜಧಾನಿಯ ವರ್ಣನಾಭಾಗದಿಂದ ಹುಯೆನ್‌ತ್ಸಾಂಗನು ಪುಲಕೇಶಿಯ ರಾಜ್ಯದ ಒಂದು ಭಾಗವಾದ ಮಹಾರಾಷ್ಟ್ರವನ್ನುಮಾತ್ರ ನೋಡಿದ್ದನೆಂದು ಹೇಳಬೇಕಾಗುತ್ತದೆ.[2] ಉತ್ತರಾಪಥದ ಹರ್ಷವರ್ಧನನು ತನಗಾದ ಅವಮಾನವನ್ನು ಪ್ರತೀಕರಿಸಿ ದಕ್ಷಿಣ ದೇಶವನ್ನು ಸ್ವಾಧೀನಪಡಿಸಿಕೊಳ್ಳಲು ಹವಣಿಸುತ್ತಿದ್ದನು. ಇವನನ್ನು ಎದುರಿಸುವುದಕ್ಕೋಸ್ಕರ ಪುಲಕೇಶಿಯು ತನ್ನರಾಜ್ಯದ ಉತ್ತರಸೀಮೆಯಲ್ಲಿ ಸೈನ್ಯದೊಂದಿಗೆ ಸಿದ್ಧನಾಗಿದ್ದನು. ದೊಡ್ಡಪಟ್ಟಣವಾದ ನಾಸಿಕವು ಇವನ ನೆಲೆವೀಡಾಗಿತ್ತು. ಮೇಲೆ ವರ್ಣಿತವಾದ ಇವನ ಸೈನ್ಯವೇ ಶ್ರೀಹರ್ಷ ವಚ್ರುಟಾದಿಗಳನ್ನು ಸೋಲಿಸಿದ ಕರ್ಣಾಟಕ ಬಲವು.[3]

ಹುಯೆನ್‌ತ್ಸಾಂಗನು ಕ್ರಿ. ಶ. ೬೩೯-೪೦ ರಲ್ಲಿ ಪುಲಿಕೇಶಿಯ ರಾಜ್ಯದಲ್ಲಿ ಪ್ರವಾಸಮಾಡಿದನು. ಅಂದಮೇಲೆ ಕ್ರಿ. ಶ. ೬೪೦ರ ವರೆಗೆ ಪುಲಿಕೇಶಿಯು ಒಳ್ಳೇ ಉನ್ನತ ಸ್ಥಿತಿಯಲ್ಲಿದ್ದಿರಬೇಕು. ಇದೇಕಾಲದಲ್ಲಿ ಕಂಚಿಯಲ್ಲ ಮಹೇಂದ್ರವಿಕ್ರಮವರ್ಮನ ಮಗನಾದ ನರಸಿಂಹವರ್ಮನು ಪಲ್ಲವ ರಾಜ್ಯವನ್ನಾಳು

---

[1] *Beal's Buddhist Records*, Vol. II. p. 255.

[2] ಮುಂದೆ 'ಮಹಾರಾಷ್ಟ್ರಕತ್ರಯ'ವನ್ನು ಕುರಿತು ಬರೆದ ಟಿಪ್ಪಣಿಯನ್ನು ನೋಡಿರಿ.

[3] ದಂತಿದುರ್ಗನ ಸಾಮನಗಡ ತಾಮ್ರಶಾಸನ, *Ind. Ant. Vol.* XI, p. 111.

ತ್ತಿದ್ದನು. ಪಲ್ಲವರ ಲಿಪಿಗಳಲ್ಲಿ ಇವನು ಪರಿಯಳ, ಮಣಿಮಂಗಲ, ಸೂರಮಾರ ಎಂಬ ಯುದ್ಧರಂಗಗಳಲ್ಲಿ ಪುಲಿಕೇಶಿಯನ್ನು ಸೋಲಿಸಿದನೆಂದು ಹೇಳಿದೆ.[1] ಈ ಮನೆತನದ ರಾಜನಾದ ೧ನೆಯ ಪರಮೇಶ್ವರವರ್ಮನ ಕೂರಂ ಶಾಸನದಲ್ಲಿ ನರಸಿಂಹವರ್ಮನು ಪುಲಿಕೇಶಿಯ ಬೆನ್ನಮೇಲೆ ಸೋಲು ಎಂಬ ಅಕ್ಷರಗಳನ್ನು ಬರೆದು ಅವನ ಮಾನಭಂಗಮಾಡಿದನೆಂದು ಹೇಳಿರುತ್ತದೆ. ಅದರಲ್ಲಿ ನರಸಿಂಹವರ್ಮನಿಗೆ 'ವಾತಾಪಿಕೊಂಡ' ಎಂಬ ಬಿರುದು ಕೊಟ್ಟಿರುವುದರಿಂದ ಅವನು ಪುಲಿಕೇಶಿಯನ್ನು ಸೋಲಿಸಿ ವಾತಾಪಿಯನ್ನು ಸ್ವಾಧೀನಪಡಿಸಿಕೊಂಡಿರಬಹುದು. ಬಾದಾಮಿಯಲ್ಲಿ ಸಿಕ್ಕುವ ಅವನದೊಂದು ಶಿಲಾಲಿಪಿಯಿಂದ ಈ ಅರ್ಥವು ಸ್ಪಷ್ಟವಾಗುತ್ತದೆ.[2] ಮತ್ತು ಪುಲಿಕೇಶಿಯ ಮಾಂಡಲಿಕನಾಗಿದ್ದ ಲಾಟಮಂಡಲದ ರಾಜನಾದ ವಿಜಯವರ್ಮನು ತನ್ನ ಕ್ರಿ. ಶ. ೬೪೩ರ ಶಾಸನದಲ್ಲಿ[3] ಸಾರ್ವಭೌಮನ ಹೆಸರನ್ನೇ ಎತ್ತುವುದಿಲ್ಲವಾದುದರಿಂದ ಸುಮಾರು ೬೪೩ರಲ್ಲಿ ಪುಲಿಕೇಶಿಗೆ ಪಲ್ಲವರೊಡನೆ ಆದ ಕಾಳಗದಲ್ಲಿ ವಿಪತ್ತು ಸಂಭವಿಸಿರಬೇಕು. ಇಲ್ಲಿಂದ ಕ್ರಿ.ಶ. ೬೫೫ ರ ವರೆಗೆ ಚಲುಕ್ಯ ರಾಜ್ಯವು ಪಲ್ಲವರ ಸ್ವಾಧೀನದಲ್ಲಿತ್ತು.[4]

---

[1] ಕಾಶಾಕುಡಿ, ಕೂರಂ ತಾಮ್ರಶಾಸನಗಳು. *S. I. I.* Vol. II, pt. III. Page 343 and *Ep. Ind* Vols. III, p. 277; XVII, p. 340; *S. I. I.* Vol. I, pp. 144. pp.

[2] ನರಸಿಂಹವರ್ಮನು ವಾತಾಪಿಯನ್ನು ಸ್ವಾಧೀನಪಡಿಸಿಕೊಂಡಮೇಲೆ ಈ ಶಾಸನವನ್ನು ಕೊರೆಯಿಸಿದ್ದಾನೆ. ಇದರಲ್ಲಿ ಅವನ ಆಳಿಕೆಯ ಸಂವತ್ಸರವನ್ನು ನಿರ್ದೇಶಿಸುವ 'ತ್ರ' ಮತ್ತು 'ಯ' ಕಾರವೂ ಅದರ 'ಓ' ಕಾರದ್ಯೋತಕ ಚಿನ್ಹಗಳೂ ಕಾಣಿಸುತ್ತವೆ. ಶಾಸನದ ಬಹುಭಾಗವು ಒಡೆದಿರುವುದರಿಂದ ಈ ಶಬ್ದವು "ತ್ರಯೋದಶ"ವೋ, 'ತ್ರಯೋವಿಂಶ'ವೊ ಹೇಳಲಿಕ್ಕಾಗದು. *Ind. Ant.* Vol. IX p. 99. ಆದರೆ ಬಂಡೆಗಲ್ಲ ಮೇಲೆ ಬರೆದಿರುವ ಈ ಶಾಸನವನ್ನು ಕಲ್ಲ ಮೇಲೆ ಓದಲಾಗಿ ಈ ಅಂಕವು ತ್ರಯೋದಶವೇ ಇರಬೇಕೆಂದು ಸ್ಪಷ್ಟವಾಗುತ್ತದೆ.

[3] ಕೈರಾ ತಾಮ್ರಶಾಸನ, *Ind. Ant.* Vol. VII, p. 241. ಭಾಂಡಾರಕರರು ಇದು ಕೃತಕವೆಂದು ತಿಳಿದಿದ್ದಾರೆ (*Early History of Dekkan* p. 188, note 3). ಫ್ಲೀಟರು ಇದನ್ನು ನಿಜವೆಂದೂ ಭಾಂಡಾರಕರರ ಅಭಿಪ್ರಾಯವನ್ನು ಒಪ್ಪಿಕೊಳ್ಳಲಾಗದೆಂದೂ ಹೇಳಿದ್ದಾರೆ. (*Dyn. Kan. Dist.*, p. 359, note 2).

[4] ೧ನೆಯ ವಿಕ್ರಮಾದಿತ್ಯನ ೧ನೆಯ ವರ್ಷವು ಕ್ರಿ. ಶ. ೬೫೫ ಎಂದು ಮುಂದೆ ಸಿದ್ಧಮಾಡಿದ್ದೇವೆ. ಕಲಚೂರಿ ವರ್ಷ, ೪೦೬ ಭಾದ್ರಪದ ಅಮಾವಾಸ್ಯೆ ಅಂದರೆ ಕ್ರಿ. ಶ. ೬೫೫ ರ ಅಗಸ್ಟ ೮ನೆಯ ದಿನದಲ್ಲಿ ಹುಟ್ಟಿದ ಪೃಥ್ವೀವಲ್ಲಭ ನಿಕುಂಭಲ್ಲಶಕ್ತಿ ಎಂಬ ಸೇಂದ್ರಕರಾಜನ ಬಾಗುಮ್ರಾ ತಾಮ್ರಶಾಸನದಲ್ಲಿ (*Ind. Ant.* Vol. XVIII, p. 265) ಸಾರ್ವಭೌಮನ ಹೆಸರೇ ಹೇಳಿಲ್ಲವಾದುದರಿಂದ .ಆಗ ಚಲುಕ್ಯ ರಾಜ್ಯದ

ಪುಲಿಕೇಶಿಯು ಕ್ರಿ. ಶ. ೬೧೦–೧೧ರಲ್ಲಿ ಚಲುಕ್ಯ ಸಿಂಹಾಸನವನ್ನೇರುವ ಪೂರ್ವದಲ್ಲಿ ದೇಶದಲ್ಲೆಲ್ಲ ಅರಾಜಕತೆ ಹಬ್ಬಿತ್ತು; ಅನೇಕ ದಂಗೆಗಳಾಗಿ ಸಣ್ಣ ಪುಟ್ಟರಾಜರು ತಲೆಯೆತ್ತುತ್ತಿದ್ದರು. ಕೀರ್ತಿವರ್ಮನಿಂದ ಪರಾಜಿತರಾದ ರಾಜರು ಸ್ವತಂತ್ರರಾಗಬೇಕೆಂದು ಹವಣಿಸುತ್ತಿದ್ದರು. ಹೀಗೆ ಚಲುಕ್ಯ ಚಕ್ರವರ್ತಿಗೆ ಗೌರವವೇ ಕೊರೆಯಲು ಕೆಚ್ಚೆದೆಯವನಾದ ಪುಲಿಕೇಶಿಯು ಯುಕ್ತಿಯಿಂದಲೂ ಶೌರ್ಯಸಾಹಸಗಳಿಂದಲೂ ತನ್ನ ರಾಜ್ಯದ ಬಂಡುಗಾರರನ್ನು ಮುರಿಬಡೆದು ಉತ್ತರದಲ್ಲಿ ಗುಜರಾತದ ವರೆಗೂ ಪೂರ್ವದಲ್ಲಿ ಪಿಠಾಪುರದ ವರೆಗೂ ರಾಜ್ಯವನ್ನು ಸಂಪಾದಿಸಿ ಅಲ್ಲಲ್ಲಿ ತನ್ನ ಪ್ರತಿನಿಧಿಗಳನ್ನು ನೇಮಿಸಿ ವಿಶಾಲವಾದ ಕರ್ಣಾಟಕ ಸಾಮ್ರಾಜ್ಯವನ್ನು ತನ್ನ ರಾಜಧಾನಿಯಾದ ವಾತಾಪಿಪುರಿಯಿಂದ ಆಳುತ್ತಿದ್ದನು. ಕರ್ಣಾಟಕದಲ್ಲಿ ಮೊದಲು ಸಾಮ್ರಾಜ್ಯಸ್ಥಾಪಕನೆಂದರೆ ಪುಲಿಕೇಶಿಯೇ. ಇದಕ್ಕಾಗಿ ಅವನು ತನ್ನ ಆಯುಷ್ಯವನ್ನೆಲ್ಲ ಅರ್ಪಿಸಿ ಘೋರವಾದ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿ ಎಲ್ಲೆಲ್ಲಿಯೂ ತನ್ನ ಕೀರ್ತಿಯು ಬೆಳಗುವಂತೆ ಮಾಡಿದನು.

ಪುಲಿಕೇಶಿಗೆ ಆದಿತ್ಯವರ್ಮ,[1] ಚಂದ್ರಾದಿತ್ಯ,[2] ವಿಕ್ರಮಾದಿತ್ಯ, ಧಾರಾಶ್ರಯ ಜಯಸಿಂಹವರ್ಮ[3] ರೆಂಬ ನಾಲ್ವರು ಮಕ್ಕಳಿದ್ದರು. ಅಂಬೇರಾ ಎಂಬ ಒಬ್ಬ ಮಗಳಿದ್ದಂತೆ ಮೈಸೂರಿನ ಒಂದು ಕೃತಕ ಶಾಸನದಲ್ಲಿ ಬರೆದಿದೆ.[4] ಇವರಲ್ಲಿ

---

ಪುನರ್ಘಟನೆಯು ಇನ್ನೂ ಆಗಿದ್ದಿಲ್ಲವೆಂದು ಫ್ಲೀಟರು ಊಹಿಸಿದ್ದಾರೆ. (*Dyn. Kan. Dist.* p. 361). ಆದರೆ ಈ ಊಹೆಯು ಅಷ್ಟೊಂದು ಸಬಲವಾಗಿ ತೋರುವುದಿಲ್ಲ. ಜಯಶಕ್ತಿಯ ಸೇಂದ್ರಕ ತಾಮ್ರಶಾಸನದಿಂದ ಅವನ ತಂದೆಯಾದ ನಿಕುಂಭಲ್ಲಶಕ್ತಿಯು ಚಲುಕ್ಯರ ಮಾಂಡಲಿಕನಾಗಿದ್ದನೆಂದು ಧ್ವನಿತವಾಗುತ್ತದೆ. ಇದಲ್ಲದೆ ವಿಕ್ರಮಾದಿತ್ಯನ ಪಟ್ಟಬಂಧವು ಸಪ್ಟೆಂಬರ ೬೫೪, ಜುಲೈ ೬೫೫ ರ ಮಧ್ಯದಲ್ಲಿ ಆಗಿತ್ತೆಂದು ಮುಂಡೆ ನಿರ್ಧಾರಿತವಾಗಿದೆ.

[1] ಕರ್ನೂಲ ತಾಮ್ರಶಾಸನ, *Jour. BO.B.R.A. Soc.* Vol. XVI, pp. 223, 233.

[2] ನೆರೂರು, ಕೊಚ್ರೇಂ ತಾಮ್ರಶಾಸನಗಳು; *Ind. Ant.* Vols. VII, p. 163; VIII, p. 44.

[3] ನವಸಾರೀ, ಸುರತ ತಾಮ್ರಶಾಸನಗಳು; Jour. Bom. Br. R.A. Soc. Vol. XVI, p. 1; *Proceedings : Scventh International Congress of Oricntalists.* p. 225.

[4] ಹೊಸೂರು ತಾಮ್ರಶಾಸನ : *Ind. Ant.* Vol. VIII, p.p. 89, 96; ಈ ಶಾಸನದ ಅಚ್ಚು *ibid Vol. IX*, p. 304 ರಲ್ಲಿ ಅದೆ. *Dyn. Kan. Dist.* p. 358, note 1.

ವಿಕ್ರಮಾದಿತ್ಯನು ಚಳುಕ್ಯರಾಜ್ಯದಲ್ಲಿ ಅಭಿಷಿಕ್ತನಾದನು. ಧಾರಾಶ್ರಯ ಜಯಸಿಂಹವರ್ಮನು ಗುಜರಾತದಲ್ಲಿ (ಲಾಟಮಂಡಲ) ಆಳುತ್ತಿದ್ದನು. ಆದಿತ್ಯವರ್ಮನು ಕರ್ನೂಲ ಶಾಸನದಲ್ಲಿ ಮಹಾರಾಜಾಧಿರಾಜ, ಪರಮೇಶ್ವರ, ಪೃಥ್ವೀವಲ್ಲಭನೆಂದು ಉಕ್ತನಾಗಿರುವುದರಿಂದ ಅವನು ರಾಜ್ಯಾಧಿಪತ್ಯವನ್ನು ವಹಿಸಿದಂತೆ ತೋರುತ್ತದೆ. ಮೇಲೆ ಹೇಳಿರುವಂತೆ ಸುಮಾರು ಕ್ರಿ. ಶ. ೬೪೨–೪೫ರಲ್ಲಿ ಪಲ್ಲವರು ಬಾದಾಮಿಯನ್ನು ಹಿಡಿದುಕೊಂಡು ಚಲುಕ್ಯ ರಾಜ್ಯವನ್ನು ಕ್ರಿ. ಶ. ೬೫೫ ರಲ್ಲಿ ವಿಕ್ರಮಾದಿತ್ಯನು ಸಿಂಹಾಸನವನ್ನೇರುವವರೆಗೆ ತಮ್ಮ ಆಧಿಪತ್ಯಕ್ಕೊಳಪಡಿಸಿಕೊಂಡಿದ್ದುದರಿಂದ ಆದಿತ್ಯವರ್ಮನು ಯಾವಾಗ ಮತ್ತು ಯಾವ ಅಧಿಕಾರದಿಂದ ಆಳುತ್ತಿದ್ದನೆಂಬುದು ಗೊತ್ತಾಗುವುದಿಲ್ಲ.[1] ಚಂದ್ರಾದಿತ್ಯನ ಹೆಂಡತಿಯಾದ ವಿಜಯಭಟ್ಟಾರಿಕೆಯು ವಿಕ್ರಮಾದಿತ್ಯನ ಕೈಕೆಳಗೆ ಆಳುತ್ತಿದ್ದಳೆಂದು ನೇರೂರು, ಕೊಚ್ರೇಂ ತಾಮ್ರಶಾಸನಗಳಿಂದ ಗೊತ್ತಾಗುತ್ತದೆ. ನೇರೂರು ಶಾಸನದಲ್ಲಿ 'ಸ್ವರಾಜ್ಯ ಪಂಚಮ ಸಂವತ್ಸರೇ' ಎಂದು ಕೊಟ್ಟಿರುವುದರಿಂದ ಇದು ಚಂದ್ರಾದಿತ್ಯನ ರಾಜ್ಯಭಾರವನ್ನು ಸೂಚಿಸುತ್ತದೆ. ಮತ್ತು ಇವೆರಡು ಶಾಸನಗಳ ಮೊಹರುಗಳಮೇಲೆ 'ಚಂದ್ರಾದಿತ್ಯ'ನ ಅಂಕಿತವಿರುತ್ತದೆ. ಇದರಿಂದಲೂ ಅವನ ರಾಜ್ಯಭಾರವು ಸ್ಪಷ್ಟವಾಗುತ್ತದೆ. ಆದರೆ ಚಂದ್ರಾದಿತ್ಯನನ್ನು ಕುರಿತು ಏನೂ ಹೇಳದೆ ಅವನ ಹೆಂಡತಿಯು 'ಸ್ವರಾಜ್ಯ' ಐದನೇ ವರ್ಷದಲ್ಲಿ ದಾನಮಾಡಿದಂತೆ ಹೇಳಿರುವುದರಿಂದ ಆಗ ಚಂದ್ರಾದಿತ್ಯನು ಬದುಕಿರಲಿಲ್ಲವೆಂದೂ ಈ ಐದನೆಯ ವರ್ಷವು ವಿಕ್ರಮಾದಿತ್ಯನ ಆಳಿಕೆಗೆ ಸಂಬಂಧಿಸುತ್ತದೆಂದೂ ತಿಳಿಯುಬಹುದು.[2]

## ಪುಲಿಕೇಶಿಯ ಕಾಲದ ಶಾಸನಗಳು :

೧. ಗೋವೆಯ ತಾಮ್ರಶಾಸನ.[3]— ಐಪ್ಪೂರ ವಂಶದ ಸತ್ಯಾಶ್ರಯ ಧ್ರುವರಾಜ ಇಂದ್ರವರ್ಮನು ತನ್ನ ಆಳಿಕೆಯ ೨೦ನೆಯ ವರ್ಷವಾದ

---

[1] ಕರ್ನೂಲ ಶಾಸನವು ವಿಕ್ರಮಾದಿತ್ಯನ ಹೆಸರನ್ನು ಎತ್ತುವುದಿಲ್ಲ. ಆದಿತ್ಯವರ್ಮನು ಪುಲಿಕೇಶಿಯ ಪ್ರಿಯತನಯನೆಂದು ಮಾತ್ರ ಹೇಳಿದೆ ಇದರಿಂದ ಫ್ಲೀಟರು ಆದಿತ್ಯವರ್ಮನು ತನ್ನ ತಮ್ಮನಾದ ವಿಕ್ರಮಾದಿತ್ಯನು ಪಲ್ಲವರಿಂದ ರಾಜ್ಯವನ್ನು ಕಿತ್ತುಕೊಂಡಮೇಲೆ ಅವನಿಂದ ಅದನ್ನು ಕಸಿದುಕೊಳ್ಳಲು ಪ್ರಯತ್ನ ಮಾಡಿದನೆಂದೂ ಆದಕ್ಕಾಗಿಯೇ ಮುಂದೆ ಆದಿತ್ಯವರ್ಮನ ಹೆಸರು ವಿಕ್ರಮಾದಿತ್ಯನ ವಂಶಜರ ಶಾಸನಗಳಲ್ಲಿ ನಿರ್ದಿಷ್ಟವಾಗಿಲ್ಲವೆಂದೂ ಬರೆದಿದ್ದಾರೆ (*Dyn. Kan. Dist.* p. 367).

[2] *Kielhorn's Southern list,* No. 9. *Ep. Ind.* Vol. IX. p. 102, Post script.

[3] *Jour. Bom. Br. R.A.Soc.* Vol. X, p. 348.



(Plate 6) ಬಾದಾಮಿಯ ೧ನೆಯ ಗವಿಯಲ್ಲಿ ಕೊರೆಯಲ್ಪಟ್ಟ
ನಟರಾಜನ ಮೂರ್ತಿ

ಶಕ ೫೩೨ (ಕ್ರಿ. ಶ. ೬೧೦–೧೧) ರಲ್ಲಿ ಮಹಾರಾಜ ಪೃಥಿವೀವಲ್ಲಭನ (ಪುಲಿಕೇಶಿಯ) ಆಜ್ಞೆಯ ಮೇರೆಗೆ ರೇವತೀದ್ವೀಪದಲ್ಲಿದ್ದು ನಾಲ್ಕು ವಿಷಯಗಳನ್ನೂ ಅನೇಕ ಮಂಡಳಗಳನ್ನೂ ಆಳುತ್ತಿದ್ದಾಗ ಖೇಟಾಹಾರ ದೇಶದಲ್ಲಿದ್ದ ಕಾರೆಲ್ಲಿಕಾ ಗ್ರಾಮವನ್ನು ಬ್ರಾಹ್ಮಣನಿಗೆ ದಾನಮಾಡಿದನು. ಖೇಟಾಹಾರ ದೇಶವು ರತ್ನಾಗಿರಿ ಜಿಲ್ಹೆಯ ಖೇಡ ತಾಲೂಕು. ಕಾರೆಲ್ಲಿಕಾ ರಾಜಾಪುರ ತಾಲೂಕಿನಲ್ಲಿದ್ದ ಕರ್ಲೆ ಗ್ರಾಮವಾಗಿರಬಹುದು.

೨. ಹೈದರಾಬಾದ ತಾಮ್ರಶಾಸನ.[1]— ರಾಜನು ಅನೇಕ ಶತ್ರುಗಳನ್ನು ಗೆದ್ದು ಪರಮೇಶ್ವರನೆಂಬ ಬಿರುದನ್ನು ಪಡೆದು ವಾತಾಪಿನಗರಿಯಲ್ಲಿದ್ದಾಗ ತನ್ನ ಆಳಿಕೆಯ ೩ನೆಯ ವರ್ಷವಾದ ಶಕ ೫೩೪ ರ ಭಾದ್ರಪದ ಅಮಾವಾಸ್ಯೆ ಸೂರ್ಯಗ್ರಹಣದಂದು ತಗರನಿವಾಸಿಯಾದ ಜ್ಯೇಷ್ಠನೆಂಬ ಬ್ರಾಹ್ಮಣನಿಗೆ ಮಾಕರಪ್ಪಿ ಗ್ರಾಮವನ್ನು ದಾನಮಾಡಿದನೆಂದು ಹೇಳಿದೆ. ಈ ಶಾಸನದ ತಿಥಿ ಕ್ರಿ. ಶ. ೨–೮–೬೧೨ ಆಗುತ್ತದೆ. ಆದರೆ ಆ ದಿನ ಸೂರ್ಯಗ್ರಹಣವು ಹಿಂದುಸ್ಥಾನದಲ್ಲಿ ದೃಶ್ಯವಿರಲಿಲ್ಲ. ೨೩-೭-೬೧೩ನೆಯ ದಿನ ಬಾದಾಮಿಯಲ್ಲಿ ಸೂರ್ಯಗ್ರಹಣವು ಪೂರ್ಣ ದೃಶ್ಯವಿತ್ತು.[2] ಆದರೆ ಈ ದಿನವು ಶಕ ೫೩೫ (ನಂದ) ನೆಯ ಸಂವತ್ಸರದಲ್ಲಿ ಬೀಳುತ್ತದೆ. ಪುಲಿಕೇಶಿ ೧೧–೧೦–೬೧೦ ರ ನಂತರ ಪಟ್ಟಕ್ಕೆ ಬಂದನೆಂದು ಮೇಲೆ ಹೇಳಿದ್ದೇವೆ. ಅವನ ೩ನೆಯ ವರ್ಷವು ಕ್ರಿ. ಶ. ೬೧೩ರಲ್ಲಿ ಆಗುವುದರಿಂದ ೨೩–೭–೬೧೩ರೇ ಈ ಶಾಸನದ ತಿಥಿಯಾಗಿರಬೇಕು.

೩. ಕಾಂದಲಗಾಂವ ತಾಮ್ರಶಾಸನ.[3] — ರಾಜನು ರೇವತೀದ್ವೀಪದಲ್ಲಿ ಮಹಾನದಿಯ ಉತ್ತರತಟದಲ್ಲಿದ್ದ ಪಿರಿಗಿಪ್ಪ ಗ್ರಾಮವನ್ನು ಒಬ್ಬ ದ್ರವಿಡ ಬ್ರಾಹ್ಮಣನಿಗೆ ದಾನಮಾಡಿದನೆಂದು ಹೇಳುತ್ತದೆ. ಈ ಶಾಸನವು ಕೃತಕವೆಂದು ನಿರ್ಧಾರಿತವಾಗಿದೆ.

೪. ಸಾತಾರೆ ತಾಮ್ರಶಾಸನ.[4]— ಪುಲಿಕೇಶಿಯ ತಮ್ಮನಾದ ಯುವರಾಜ ವಿಷ್ಣುವರ್ಧನನು ಕುರುಮರಥಿಯಲ್ಲಿದ್ದಾಗ ಶ್ರೀನಿಲಯ ಭೋಗದಲ್ಲಿ

---

1 *Ind. Ant.* Vol. VI, p. 72.

2 ಸಾಧಾರಣವಾಗಿ ಶಾಸನಗಳ ಕಾಲವನ್ನು ಹೇಳುವಾಗ ನಿರ್ದೇಶಿಸಲ್ಪಡುವ ಗ್ರಹಣಗಳು ದೃಶ್ಯವಾಗಿರಬೇಕೆಂದು ಕೀಲಹಾರ್ನರು ಅಭಿಪ್ರಾಯಪಟ್ಟಿದ್ದಾರೆ. *Ep. Ind.* Vol. IX, p. 102.

3 *Ind. Ant.* Vol. XII, p. 330. *Dyn. Kan. Dist.* p. 358, Notes.

4 *Ind. Ant.* Vol. XIX, p. 303.

ಭೀಮಾನದಿಯ ದಕ್ಷಿಣತಟದಲ್ಲಿದ್ದ ಅಲಿಂದತೀರ್ಥವೆಂಬ ಗ್ರಾಮವನ್ನು ಬ್ರಾಹ್ಮಣರಿಗೆ ದಾನಮಾಡಿದನು. ದತ್ತಿಯು ಪುಲಿಕೇಶಿಯ ಆಳಿಕೆಯ ೮ನೆಯ ವರ್ಷದಲ್ಲಿ ಕಾರ್ತಿಕ ಪೌರ್ಣಿಮೆಯಂದು ( ಕ್ರಿ. ಶ. ೬೧೭, ಅಕ್ಟೋಬರ ೨೧ ) ಕೊಡಲ್ಪಟ್ಟಿತು. ಅಲಂದತೀರ್ಥವು ಸಾತಾರೆಯ ಉತ್ತರಕ್ಕೆ ೩೫ ಮೈಲುಗಳ ಮೇಲೆ ಇದ್ದ ' ಆಲಂಧ್ ' ಎಂದು ಫ್ಲೀಟರು ಹೇಳುತ್ತಾರೆ. [1]

೫. ಕೊಪ್ಪರಂ ತಾಮ್ರಶಾಸನವು.[2]— ಪೃಥ್ವೀದುವರಾಜನು ( ಯುವರಾಜ ವಿಷ್ಣುವರ್ಧನನು ) ರಾಜನ ಆಳಿಕೆಯ ೨೧ನೆಯ ವರ್ಷದ ಕಾರ್ತಿಕ ಮಹಾನವಮಿಯ ದಿನದಲ್ಲಿ ಅನೇಕ ಮಂಡಳಗಳನ್ನಾಳುತ್ತಿರುವಾಗ ಕರ್ಮರಾಷ್ಟ್ರದಲ್ಲಿಯ ಇರ್ಬುಲಿಗ್ರಾಮದಲ್ಲಿ ೮೦೦ ( ಚೌರಸ ) ಭೂಮಿಯನ್ನು ವೇದಶರ್ಮನೆಂಬ ಬ್ರಾಹ್ಮಣನಿಗೆ ಕೊಟ್ಟನು. ಈ ಭೂಮಿ ಕೊಂಡವೆಜುಪೂರದ ದಕ್ಷಿಣಕ್ಕೆ ವಿರಪಜುವಿನ ಉತ್ತರಕ್ಕೆ ಇತ್ತು. ಇವೆರಡೂ ಗ್ರಾಮಗಳು ನರಸರಾವಪೇಟ ( ಗುಂಟೂರು ಜಿಲ್ಲೆ ) ತಾಲೂಕಿನಲ್ಲಿರುವ ಕೊಂಡವೀಡು ವಿಪ್ಪರ್ಲಗಳೆಂದು ಕೆ. ವ್ಹಿ. ಲಕ್ಷ್ಮಣ ರಾಯರು ಹೇಳಿದ್ದಾರೆ.

೬. ಐಹೊಳೆಯ ಮೇಗುಟಿಶಾಸನ.—ಭಾರತಯುದ್ಧಾನಂತರ ೩೭೩೫ ಮತ್ತು ಶಕ ೫೫೬ ರಲ್ಲಿ ಕಾಳಿದಾಸ, ಭಾರವಿ ಕವಿಗಳಂತೆ ಹೆಸರುಗೊಂಡ ಆಸ್ಥಾನ ಕವಿಯಾದ ರವಿಕೀರ್ತಿ ಜೈನೇಂದ್ರ ಗೃಹವನ್ನು ಕಟ್ಟಿಸಿ ಕೆಲ ಗ್ರಾಮಗಳನ್ನು ದೇವದೇಯವಾಗಿ ಕೊಟ್ಟನು. ಈ ಶಾಸನದಲ್ಲಿ ಬರೆದ ಪುಲಿಕೇಶಿಯ ದಿಗ್ವಿಜಯಾದಿ ಮಹತ್ವದ ವಿಷಯಗಳು ಮೇಲೆ ವಿವರಿಸಲ್ಪಟ್ಟಿವೆ.

೭. ಯಕ್ಕೇರಿ ಬಂಡೆಗಲ್ಲುಶಾಸನ.[3]— ಇದರ ಕಾಲವು ಕಾರ್ತಿಕ ಪೌರ್ಣಿಮಾಸೆ. ಸಂವತ್ಸರವನ್ನು ಕೊಡುವ ಭಾಗವು ನಷ್ಟವಾಗಿದೆ. ಇದರಲ್ಲಿ ಬೆಸೀರ, ಧುಲೀಪುರ ಮೊದಲಾದ ಗ್ರಾಮಗಳಲ್ಲಿ ಕೆಲ ಭೂಮಿಗಳು ಶ್ರೀಮಹಾದೇವರ ದೇವಸ್ವಗಳೆಂದು ಬರೆದಿದೆ. ಇದರಲ್ಲಿ ೪, ೫, ೬ (?) ೯, ೫೦ ಅಂಕಗಳು ಕೊರೆಯಲ್ಪಟ್ಟಿವೆ.

---

[1] *Dyn. Kan. Dist.* p. 357.

[2] *Ep. Ind.* Vol. XVIII, p. 257. See also ***Annals of the Bhandarkar O. Research Institute,*** Vol. IV. p. 43.

[3] ***Ep. Ind.*** Vol. V, p. 7.

೮. ನೇರೂರು ತಾಮ್ರಶಾಸನ.[1]— ಇದರ ಒರೆಹವು ಸ್ಪಷ್ಟವಿಲ್ಲ. 'ವಾತಾಪಿ'ಯ ಹೆಸರು ತಿಳಿಯುತ್ತದೆ.

೯. ಚಿಪಳೂಣ ತಾಮ್ರಶಾಸನ.[2]— ಇದರಲ್ಲಿ ತಿಥಿನಿರ್ದೇಶವಿಲ್ಲ. ಪುಲಿಕೇಶಿಯ ಸೋದರಮಾವನಾದ ಸೇಂದ್ರಕವಂಶದ ಶ್ರೀವಲ್ಲಭ ಸೇನಾನಂದ ರಾಜನು ಅಮ್ರವಟವಕ ಗ್ರಾಮವನ್ನು ಅವರೇಟಿಕಾ ವಿಷಯದಲ್ಲಿಯ ಚಾ (ವಾ) ರು ಬೆನ್ನಾನದಿಯ ದಂಡೆಯಲ್ಲಿದ್ದ ಅವಂಚಿಪೋಲಿ ಗ್ರಾಮದ ಕೆಲ ಭೂಮಿಯನ್ನು ಒಬ್ಬ ಬ್ರಾಹ್ಮಣನಿಗೆ ದಾನಮಾಡಿದನೆಂದು ಹೇಳುತ್ತದೆ.

೧೦. ಹೊಸೂರು ತಾಮ್ರಶಾಸನ.[3]— ಪುಲಿಕೇಶಿ ತನ್ನ ಮಗ ಅಥವಾ ಮಗಳಾದ (?) ಅಂಬೇರ ಅಥವಾ ಅಂಬೇರಾ ಎಂಬವಳ ವಿಜ್ಞಾಪನೆಯ ಮೇರೆಗೆ ದಾನಮಾಡಿದನೆಂದು ಹೇಳಿದೆ. ಇದು ಕೃತಕಶಾಸನವಾದುದ ರಿಂದ ನಂಬಿಕೆಗರ್ಹವಲ್ಲ.

೧೧. ಲಕ್ಷ್ಮೇಶ್ವರ ಶಿಲಾಶಾಸನ.[4]— ಎಜ಼ಿಯ ಸತ್ಯಾಶ್ರಯ ಪುಲಿಕೇಶಿಯ ಮಾಂಡಲಿಕನಾದ ಭುಜಗೇಂದ್ರವಂಶದ ಸೇಂದ್ರಕ ದುರ್ಗಶಕ್ತಿಯು ಶಂಖಜಿನೇಂದ್ರಾಲಯಕ್ಕೆ ಭೂದಾನವನ್ನು ಮಾಡಿದನು. ಎಜ಼ಿಯನು ಮಹಾರಾಜ ರಣಪರಾಕ್ರಮಾಂಕನ ಮಗನೆಂದು ಬರೆದಿದೆ. ದುರ್ಗ ಶಕ್ತಿಯು ವಿಜಯಶಕ್ತಿಯ ಮೊಮ್ಮಗನೂ ಕುಂದಶಕ್ತಿಯ ಮಗನೂ ಆಗಿದ್ದನು. ಈ ಶಾಸನದ ಅಕ್ಷರಗಳು ೧೧ನೆಯ ಶತಮಾನದ ವಿರುತ್ತವೆ.

೧೨. ನಿರ್ಪಾನ ತಾಮ್ರಶಾಸನ.[5]— ೨ನೆಯ ಪುಲಿಕೇಶಿಯ ತಮ್ಮನಾದ ಧಾರಾಶ್ರಯ ಜಯಸಿಂಹವರ್ಮನ ಮಗ ಜಯಾಶ್ರಯ ತ್ರಿಭುವನಾಶ್ರಯ ನಾಗವರ್ಧನನು, ಕಪಾಲೇಶ್ವರನ ಪೂಜಾದಿಗಳನ್ನು ನಡೆಯಿಸುವುದಕ್ಕೆ ಗೋಪರಾಷ್ಟ್ರ ವಿಷಯದಲ್ಲಿದ್ದ ಬಲೇಗ್ರಾಮವನ್ನು ದಾನಮಾಡಿದನು.

---

[1] *Ind. Ant.* Vol. VIII, p. 43.
[2] *Ep. Ind.* Vol. III, p. 30.
[3] *Ind. Ant.* Vol. VIII, p. 96.
[4] *Ibid.* Vol. VII, p. 106, lines 51-61.
[5] *Ibid* Vol. IX, p. 123.

ಈ ಗ್ರಾಮವು ನಾಸಿಕ ಜಿಲ್ಲೆಯಲ್ಲಿದ್ದ ಈಗಿನ ಬೆಲ್ಗಾಂ ತರಾಲ್ಹಾ. ಈ ಶಾಸನದ ಮೊಹರಿನ ಮೇಲೆ 'ಜಯಾಶ್ರಯಾ'ವೆಂಬ ಅಂಕಿತವಿರುತ್ತದೆ.

೧೩. ಪೆದ್ದವಡಗೂರು (ಅನಂತಪುರ ಜಿಲ್ಲೆ) ಶಿಲಾಶಾಸನ.—[1] ಎಜಿತೆಯಿತಿ ಅಡಿಗಳು ರಣವಿಕ್ರಮನನ್ನು ಜಯಿಸಿದಾಗ ನಾಡನೂರನ್ನು ಸರ್ವಮಾನ್ಯವಾಗಿ ದಾನಮಾಡಿದಂತೆಯೂ ಬಾಣರಾಜನ ರಾಜ್ಯದಲ್ಲಿ ಸುಂಕಗಳನ್ನು ಬಿಟ್ಟಂತೆಯೂ ಬರೆದಿದೆ. ಈ ಶಾಸನವನ್ನು ಬರೆದವನು ಮಹೇಂದ್ರಪಲ್ಲವಾಚಾರಿ.

ಕ್ರಿ. ಶ. ೬೪೨–೪೩ ರಲ್ಲಿ ಪುಲಿಕೇಶಿಯ ರಾಜ್ಯವು ಪಲ್ಲವರ ಕೈವಶವಾಯಿತೆಂದು ಮೇಲೆ ಹೇಳಿದ್ದೇವೆ. ಕ್ರಿ. ಶ. ೬೫೫ ರಲ್ಲಿ ವಿಕ್ರಮಾದಿತ್ಯನು ಪಟ್ಟಕ್ಕೆ ಬರುವ ಮೊದಲು 'ಅವನಿಪತಿ ತ್ರಿತಯಾಂತರಿತ'ವಾದ ತನ್ನ ತಂದೆಯ ರಾಜ್ಯವನ್ನು ತಿರುಗಿ ಸಂಪಾದಿಸಿದನೆಂದು ಶಾಸನಗಳಿಂದ ತಿಳಿಯುತ್ತದೆ. ಇದರಿಂದ ವಿಕ್ರಮಾದಿತ್ಯನು ಸಿಂಹಾಸನವನ್ನೇರುವವರೆಗೆ ಚಾಳುಕ್ಯರಾಜ್ಯವು ಪರರಾಜರ ಕೈಯಲ್ಲಿತ್ತೆಂದು ಸ್ಪಷ್ಟವಾಗುತ್ತದೆ. ಈ ಪರರಾಜರಾರೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿರುತ್ತವೆ. ಹುಲ್ಷ್[2] ಮತ್ತು ಪಾಠಕರು,[3] ಈ ರಾಜರು ಚೋಳ, ಕೇರಳ, ಪಾಂಡ್ಯರೆಂದು ಅಭಿಪ್ರಾಯ ಪಟ್ಟಿದ್ದಾರೆ. ಫ್ಲೀಟರು,[4] ಇವರು ಪಲ್ಲವರೇ ಎಂದು ಸಿದ್ಧಮಾಡಿದ್ದಾರೆ. ಆದರೆ ಡುಬ್ರಾಯಿಲರು ಮೂರನೆಯದೊಂದು ಹಾದಿಯನ್ನು ಹುಡುಕಿದ್ದಾರೆ. ಈ ರಾಜರು, ಪಲ್ಲವ, ಸಿಂಹಲ, ಪಾಂಡ್ಯರಿರಬೇಕೆಂದು ಇವರ ಅಭಿಪ್ರಾಯ.[5] ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದರೆ ಮೊದಲನೆಯ ಅಭಿಪ್ರಾಯದಲ್ಲಿ ತಥ್ಯಾಂಶವುಂಟೆಂದು ತೋರುತ್ತದೆ. ವಿಕ್ರಮಾದಿತ್ಯನು 'ರಾಜ್ಯತ್ರಯ'ದಲ್ಲಿ (ತಸ್ಮಿನ್ ರಾಜ್ಯತ್ರಯೇ) ಕಳೆದುಹೋಗಿದ್ದ ದೇವಸ್ವ ಬ್ರಹ್ಮದೇಯಗಳನ್ನು ಉದ್ಧಾರಮಾಡಿದನೆಂದು ಅವನ ಶಾಸನಗಳಲ್ಲಿ ಹೇಳಿದೆ.[6] ವಿನಯಾದಿತ್ಯ, ವಿಜಯಾದಿತ್ಯ, ಕೀರ್ತಿವರ್ಮರ ಶಾಸನಗಳಲ್ಲಿ ವಿಕ್ರಮಾದಿತ್ಯನ ಆಜ್ಞೆಯಮೇರೆಗೆ ವಿನಯಾದಿತ್ಯನು ತ್ರೈರಾಜ್ಯ

---

[1] *Madras Epigraphical Report,* No. 343 of 1920.

[2] *S. I. I. Vol.* I, p.

[3] *p. Ind.* Vol. IX, p. 205.

[4] *Dyn. Kan. Dist.* p. 362.

[5] *Pallavas* by Dubrieul, p, 44.

[6] ತಲಮಂಚಿ ಗದ್ವಾಲ ಮುಂತಾದ ತಾಮ್ರಶಾಸನಗಳು.

ಪಲ್ಲವಪತಿ ಅಥವಾ ತ್ರೈರಾಜ್ಯ ಕಾಂಚೀಪತಿ ಸೈನ್ಯವನ್ನು ನಾಶಮಾಡಿದನೆಂದು ಹೇಳಿರುತ್ತದೆ.[1]

ಇಲ್ಲಿ ಉಕ್ತವಾದ ತ್ರೈರಾಜ್ಯಪದದ ಅರ್ಥವನ್ನು ವಿವೇಚಿಸುವ. ಚೋಟರಾಜನಾದ ಪುಣ್ಯಕುಮಾರನ ಮಲೇಪಾಡು ತಾಮ್ರಶಾಸನ (ಸು. ೮ನೆಯ ಶತಮಾನ) ದಲ್ಲಿ[2] ಕರಿಕಾಲನು 'ತ್ರೈರಾಜ್ಯಸ್ಥಿತಿ' ಯನ್ನು ಸ್ವಾಧೀನಪಡಿಸಿಕೊಂಡನೆಂದು ಹೇಳಿದೆ. ಕರಿಕಾಲನು ಪಲ್ಲವರನ್ನು ಸೋಲಿಸಿ ಕಾಂಚೀ ಪಟ್ಟಣವನ್ನು ಕೈವಶಮಾಡಿಕೊಂಡಿದ್ದನೆಂದು ಶಾಸನಗಳಿಂದ ತಿಳಿಯುತ್ತದೆ.[3] ಇವನು ವೆಣ್ಣಿಲ್ ಯುದ್ಧಭೂಮಿಯಲ್ಲಿ ಚೇರ ಪಾಂಡ್ಯರನ್ನು ಸೋಲಿಸಿದನೆಂದು ತಮಿಳ ಪ್ರಾಚೀನ ಗ್ರಂಥಗಳಲ್ಲಿ ಉಕ್ತವಾಗಿದೆ.[4] ಇವನು ತ್ರೈರಾಜ್ಯಸ್ಥಿತಿಯನ್ನು ಪಡೆದನೆಂದರೆ, ಪಾಂಡ್ಯ, ಚೋಳ, ಕೇರಳರ ರಾಜ್ಯಗಳಿಗೆ (ಅಂದರೆ ಇಡೀ ದಕ್ಷಿಣ ಹಿಂದುಸ್ತಾನಕ್ಕೆ) ಅಧಿಪತಿಗಳಾಗಿದ್ದ ಪಲ್ಲವರ ಸ್ಥಿತಿಯನ್ನು (ಅಂದರೆ ರಾಜ್ಯವನ್ನು) ಆಕ್ರಮಿಸಿದನೆಂದು ಅರ್ಥಮಾಡಬೇಕು. ಏತಕ್ಕೆಂದರೆ, ಕರಿಕಾಲನ ಪ್ರತಿಕಕ್ಷಿಯಾಗಿದ್ದ ತ್ರಿಲೋಚನ ಪಲ್ಲವನು ದಕ್ಷಿಣಾಪಥದ ರಾಜನಾಗಿದ್ದನೆಂದು ವಿಮಲಾದಿತ್ಯನ ಒಂದು ಶಾಸನದಲ್ಲಿ ಬರೆದಿದೆ.[5] ಇದರಿಂದ ಪಲ್ಲವರು ದಕ್ಷಿಣ ಹಿಂದುಸ್ತಾನದ ರಾಜರನ್ನೆಲ್ಲ ಸೋಲಿಸಿ ಅಪ್ರತಿಹತ ಪ್ರಭುಗಳಾಗಿದ್ದರೆಂದೂ ಅವರನ್ನು ಕಲಿಕಾಲನು ಸೋಲಿಸಿ 'ತ್ರೈರಾಜ್ಯ' ಸ್ಥಿತಿಯನ್ನು ಪಡೆದನೆಂದೂ ಊಹಿಸಬಹುದು. ಕರಿಕಾಲನ ವಂಶಜನಾದ ಚೋಟಮಹಾರಾಜನೆಂದು ಹೆಸರುಗೊಂಡ ಮಹೇಂದ್ರವಿಕ್ರಮನು ಪಾಂಡ್ಯ, ಚೋಳ, ಕೇರಳ ರಾಜ್ಯಗಳಿಗೆ ಅಧಿಪತಿಯಾಗಿದ್ದನೆಂದು ಅದೇ ಮಲೇಪಾಡು ಶಾಸನದಲ್ಲಿ ಬರೆದಿದೆ. ಇದರಿಂದ 'ತ್ರೈರಾಜ್ಯವೆಂದರೆ ಪಾಂಡ್ಯ, ಚೋಳ, ಕೇರಳ, ರಾಜ್ಯಗಳೆಂಬ ಅರ್ಥವು ಸೂಚಿತವಾಗುತ್ತದೆ. ಜಿನಸೇನನ ಆದಿಪುರಾಣದಲ್ಲಿಯು

**ಪ್ರಸಾಧ್ಯ ದಕ್ಷಿಣಾಮಾಶಾಂ ವಿಭುಸ್ತ್ರೈರಾಜ್ಯಪಾಲಕಾನ್ ।**
**ಸಮಂ ಪ್ರಣಾಮಯಾಮಾಸ ವಿಜಿತ್ಯ ಜಯ ಸಾಧನೈಃ ॥**

ಎಂಬ ಶ್ಲೋಕದ ಅರ್ಥವನ್ನು ಹೇಳುವಾಗ ವ್ಯಾಖ್ಯಾನಕಾರರು ತ್ರೈರಾಜ್ಯ

---

[1] ಜೆಜೂರಿ, ರಾಯಗಡ, ಕೆಂದೂರು, ವಕ್ಕಲೇರಿ, ಮೊದಲಾದ ತಾಮ್ರಶಾಸನಗಳು.

[2] *Ep. Ind.* Vol. XI, pp. 337 ff.

[3] ತಿರುವಾಲಂ ಗಾಡು ತಾಮ್ರಶಾಸನ, S.I.I. Vol.

[4] *Ind. Ant.* Vol. XLI, p. 146.

[5] *Ep. Ind.* Vol. VI, p. 348 f.

ವೆಂದರೆ ಚೋಳ, ಕೇರಳ, ಪಾಂಡ್ಯರೆಂದು ಹೇಳಿದ್ದಾರೆ.[1] ತ್ರಿಭುವನಾಶ್ರಯ ನಾಗವರ್ಧನನ ನಿರ್ಪಾನತಾಮ್ರಶಾಸನದಲ್ಲಿ ಪುಲಿಕೇಶಿಯು 'ಮನೋಜವೈಕ ಕಣ. ಚಿತ್ರಾಖ್ಯ ಪ್ರವರತುರಂಗ ಮೇಣೋಪಾರ್ಜಿತ ಸ್ವರಾಜ್ಯವಿಜಿತ ಚೇರ, ಚೋಳ, ಪಾಂಡ್ಯ ಕ್ರಮಾಗತ ರಾಜ್ಯತ್ರಯಃ' ಎಂದು ವರ್ಣಿಸಲ್ಪಟ್ಟಿದ್ದಾನೆ.[2] ಇದರಲ್ಲಿಯೂ ರಾಜ್ಯತ್ರಯವೆಂದರೆ ಚೇರ, ಚೋಳ ಪಾಂಡ್ಯರ ರಾಜ್ಯಗಳೆಂಬ ಅರ್ಥವಾಗುತ್ತದೆ. ವಿಕ್ರಮಾದಿತ್ಯನು ಸೋಲಿಸಿದ ತ್ರೈರಾಜ್ಯಪಲ್ಲವ ಅಥವಾ ತ್ರೈರಾಜ್ಯ ಕಾಂಚೀಪತಿಯೆಂದರೆ ದಕ್ಷಿಣಹಿಂದುಸ್ಥಾನದ ಆಧಿಪತ್ಯವನ್ನು ಪಡೆದಿದ್ದ ಪಲ್ಲವರೆಂದು ಸ್ಪಷ್ಟವಾಗುತ್ತದೆ. ಪಲ್ಲವ ೧ನೆಯ ಮಹೇಂದ್ರ ವಿಕ್ರಮನ ತಂದೆಯಾದ ಸಿಂಹವಿಷ್ಣು ಪಾಂಡ್ಯ, ಚೋಳ, ಕೇರಳ ರಾಜ್ಯರನ್ನು ಸೋಲಿಸಿ ಅವರನ್ನು ತನ್ನ ವಶದಲ್ಲಿ ಇಟ್ಟುಕೊಂಡಿದ್ದನೆಂದು ಪಲ್ಲವರ ಕಾಶಾ ಕುಡಿ ಶಾಸನದಿಂದ ತಿಳಿಯುತ್ತದೆ.[3] ಐಹೊಳೆಯ ಶಿಲಾಲಿಪಿಯಲ್ಲಿ ಪುಲಿಕೇಶಿ ಈ ಮೂವರು ರಾಜರನ್ನು ಪಲ್ಲವರಿಂದ ಬಿಡುಗಡೆ ಮಾಡಿದನೆಂದು ಹೇಳಿರುವುದ ರಿಂದಲೂ ಇವರು ಪಲ್ಲವರ ಅಧೀನರಾಗಿದ್ದರೆಂದು ತಿಳಿಯಬಹುದು.[4] ನರಸಿಂಹ ವರ್ಮನು ಮತ್ತೆ ಪಾಂಡ್ಯ, ಚೋಳ, ಕೇರಳರನ್ನು ಸೋಲಿಸಿ[5] ಅವರೊಡನೆ ಒಳಸಂಚಿನಿಂದ ಐಕಮತ್ಯವನ್ನು ಬೆಳೆಯಿಸಿ ಅವರ ಸಹಾಯದಿಂದ ಪುಲಿಕೇಶಿ ಯನ್ನು ಸೋಲಿಸಿ ವಾತಾಪಿನಗರಿಯಲ್ಲಿ ತ್ರೈರಾಜ್ಯಪಲ್ಲವ ಪ್ರಭುತ್ವವನ್ನು

---

[1] ಕೆಂದೂರು ಶಾಸನವನ್ನು ಪ್ರಸಿದ್ಧಿಸುವಾಗ ಪಾಠಕರು ಈ ವಿಷಯವನ್ನು ಬರೆ ದಿದ್ದಾರೆ. (*Ep. Ind*. Vol. IX, p. 205, note. 4)

[2] *Ind. Ant*. Vol. IX, p. 123.

[3] *S. I. I*. Vol. II, Part III, p. 346.

[4] *Ep. Ind*. Vol. VI, p. 4.

[5] ಕೂರಂ ತಾಮ್ರಶಾಸನ : ಮಲೇಪಾಡು ತಾಮ್ರಶಾಸನದ ಚೋಟ ಮಹಾರಾಜ ಮಹೇಂದ್ರವಿಕ್ರಮನು ಪಾಂಡ್ಯ, ಚೋಳ, ಕೇರಳ ರಾಜರನ್ನು ಸೋಲಿಸಿದನೆಂದು ಹೇಳಿ ದ್ದೇವೆ. ಹೆಸರು ಬಿರುದುಗಳ ಸಾಮ್ಯದಿಂದ ಕಡಪಾ ಚೋಟರು ಕಂಚಿಯ ಪಲ್ಲವರ ಸಾಮಂತರಾಗಿದ್ದರೆಂದು ಊಹಿಸಬಹುದು (*Ep. Ind*. Vol. XI, p. 344). ಇವರ ರಾಜ್ಯವು ಚಾಳುಕ್ಯ, ಪಲ್ಲವ ರಾಜ್ಯಗಳ ನಡುವೆ ಇದ್ದುದರಿಂದ ಪಲ್ಲವರು ಇವರೊಡನೆ ಸ್ನೇಹದಿಂದಿದ್ದು ಚಾಳುಕ್ಯರನ್ನು ಜಯಿಸಲು ಪ್ರಯತ್ನಮಾಡಿರಬಹುದು. ಇವರ ಸಹಾಯ ದಿಂದ ನರಸಿಂಹವಿಕ್ರಮನು ಪಾಂಡ್ಯ, ಚೋಳ, ಕೇರಳರನ್ನು ಸೋಲಿಸಿದನೆಂದು ತಿಳಿಯು ವುದು ಸಮಂಜಸವಾಗುತ್ತದೆ. ಅದಕ್ಕಾಗಿಯೇ ನರಸಿಂಹವಿಕ್ರಮನ ಸಮಕಾಲೀನನಾದ ಮಹೇಂದ್ರವಿಕ್ರಮನು ಆ ರಾಜರನ್ನು ಸೋಲಿಸಿದಂತೆ ಹೇಳಿದೆ. ಇದು ಬಡಿವಾರದ ಮಾತೆಂದು ವೆಂಕಟರಮಣಯ್ಯನವರು ಬರೆದುದು ಸರಿಯಲ್ಲ (The Madras Christain College Magzine, 1929, 'Trairajya Pallava').

ಪ್ರತಿಷ್ಠಾಪಿಸಿದನೆಂದು ಊಹಿಸಬಹುದು.[1] ವಿಕ್ರಮಾದಿತ್ಯನು ಈ ಪಾಂಡ್ಯ, ಚೋಳ, ಕೇರಳ ರಾಜರ ಅಧಿಪತಿಯಾದ ಪಲ್ಲವರಾಜನನ್ನು ಸೋಲಿಸಿ ಪರಹಸ್ತಗತವಾಗಿದ್ದ ತನ್ನ ಪಿತೃರಾಜ್ಯವನ್ನು ಉದ್ಧಾರಮಾಡಿ 'ರಾಜ್ಯತ್ರಯ'ದಲ್ಲಿ ಕಳೆದುಹೋಗಿದ್ದ ದೇವಸ್ವ ಬ್ರಹ್ಮದೇಯಗಳನ್ನು ಮತ್ತೆ ಹಾಕಿಕೊಟ್ಟನು.

ಹೀಗೆ ಚಲುಕ್ಯ ರಾಜ್ಯಲಕ್ಷ್ಮಿಯು ಪಲ್ಲವರಿಂದ ಪದಾಕ್ರಾಂತವಾದ ಮೇಲೆ ವಿಕ್ರಮಾದಿತ್ಯನು ಹೇಗಾದರೂ ತನ್ನ ವಂಶದ ಕೀರ್ತಿಯನ್ನು ಕಾಪಾಡಬೇಕೆಂಬುದೊಂದೇ ಉದ್ದೇಶದಿಂದ ಈ ಮಹತ್ಕಾರ್ಯಕ್ಕೆ ತಕ್ಕ ಸನ್ನಾಹವನ್ನು ಒದಗಿಸಿಕೊಳ್ಳುವುದರಲ್ಲಿ ೧೨-೧೩ ವರ್ಷಗಳ ಕಾಲ ಅವಿಶ್ರಾಂತ ಪ್ರಯತ್ನಪಟ್ಟನು. ನಿಸರ್ಗ ಶತ್ರುಗಳಾದ ಪಲ್ಲವರನ್ನು ಹೊಡೆದೋಡಿಸಲಿಕ್ಕೆ ತನ್ನ ಮಗನನ್ನೂ ಮೊಮ್ಮಗನನ್ನೂ ಯುದ್ಧ ಕಲೆಯಲ್ಲಿ ಪ್ರವೀಣರನ್ನಾಗಿ ಮಾಡಿದನು. ಈ ಮೂವರೂ ಪಲ್ಲವರ ರಾಜ್ಯದ ಮೇಲೆ ದಾಳಿಯಿಕ್ಕಿ ಅವರ ರಾಜಧಾನಿಯಾದ ಕಾಂಚೀ ಪಟ್ಟಣವನ್ನು ತೆಗೆದುಕೊಂಡರು. ಈ ರೀತಿಯಾಗಿ ಕಳೆದು ಹೋದ ಕರ್ಣಾಟಕವನ್ನು ವಿಕ್ರಮಾದಿತ್ಯನು ಧೃಡಪ್ರತಿಜ್ಞೆಯಿಂದ ಸಾಧಿಸಿ ಪೂರ್ವದ ವೈಭವವನ್ನು ಉಜ್ಜೀವಗೊಳಿಸಿದನು.[2] ಈ ಕಾರ್ಯದಲ್ಲಿ ವಿಕ್ರಮಾದಿತ್ಯನು

---

[1] ಪಲ್ಲವರ ಅಂಕಿತದಲ್ಲಿ ಪಾಂಡ್ಯ, ಚೋಳ, ಕೇರಳ ರಾಜರ ಸಂಘವು ವಾತಾಪಿಯಲ್ಲಿ ಸು. ೬೪೨-೬೫೫ ರಲ್ಲಿ ರಾಜ್ಯಭಾರ ಮಾಡಿದಂತೆ ತೋರುತ್ತದೆ. ತ್ರೈರಾಜ್ಯವೆಂದರೆ ಮೂವರು ರಾಜರ ಸಮೂಹ ಅಥವಾ ಸಂಘವು. 'ಅವನಿಪತಿತ್ರಿತಯ'ವೂ ಇದೇ ಅರ್ಥವನ್ನು ಸೂಚಿಸುತ್ತದೆ. ಈ ಮೂರು ರಾಜರು ಪಾಂಡ್ಯ, ಚೋಳ, ಕೇರಳ ರಾಜರೇ ಆಗಿರಬೇಕಾದುದರಿಂದ ಪಲ್ಲವ ಪ್ರಭುತ್ವದಲ್ಲಿ ಅವರು ಆಳುತ್ತಿದ್ದರೆಂದು ಗ್ರಹಿಸಿದ್ದೇವೆ. ಅವನಿಪತಿತ್ರಿತಯ, ರಾಜ್ಯತ್ರಯ, ತ್ರೈರಾಜ್ಯಗಳು ಸಮಾನಾರ್ಥಕವಾಗಿರುವುದರಿಂದಲೂ ವಿಕ್ರಮಾದಿತ್ಯನ ಪರಾಕ್ರಮವನ್ನು ವರ್ಣಿಸುವ ಸಂದರ್ಭದಲ್ಲಿ ವಿನಯಾದಿತ್ಯನ ಶಾಸನಗಳು ಅವನಿಪತಿತ್ರಿತಯವನ್ನು ಬಿಟ್ಟು ಆ ಸ್ಥಳದಲ್ಲಿ ಪಾಂಡ್ಯ, ಚೋಳ, ಕೇರಳರನ್ನು ಹೇಳುವುದರಿಂದಲೂ, ಈ ಮೂವರು ರಾಜರು ಪಾಂಡ್ಯ, ಚೋಳ, ಕೇರಳರೇ (ಪಲ್ಲವರಲ್ಲ) ಆಗಿರಬೇಕೆಂದು ಶ್ರೀ. ಪಂಚಮುಖಿಯವರು ಸಪ್ರಮಾಣವಾಗಿ ಹೇಳಿದ್ದಾರೆ. ಹೆಚ್ಚಿನ ಆಧಾರಗಳಿಗೆ ಅವರ ಲೇಖವನ್ನು ನೋಡಿರಿ. (*Ep. Ind.* Vol. XXII, pp. 24 ff. ಮತ್ತು Journal of Oriental Research, Vol. XI, pp. 165–174).

[2] ವೆಂಕಟರಮಣಯ್ಯನವರು, ಗಂಗದುರ್ವಿನೀತನ ಮಗಳ ಮಗನು ೧ನೆಯ-ವಿಕ್ರಮಾದಿತ್ಯನೆಂದೂ, ದುರ್ವಿನೀತನು ಪಲ್ಲವರನ್ನು ಸೋಲಿಸಿ ಅವನನ್ನು ಸು. ೬೫೫ ರಲ್ಲಿ ಚಾಳುಕ್ಯ ಸಿಂಹಾಸನದ ಮೇಲೆ ಕುಳ್ಳಿರಿಸಿದನೆಂದೂ ಬರೆದಿದ್ದಾರೆ. (Durvinita and Vikramaditya, *Triveni*, pp. 112–120). ಆದರೆ ದುರ್ವಿನೀತನು ವಿಕ್ರಮಾದಿತ್ಯನ ಸಮಕಾಲೀನನಾಗಲಾರನು. ಈ ವಿಷಯವನ್ನು ಗಂಗಪ್ರಕರಣದಲ್ಲಿ ನೋಡಿರಿ.

ಮಾಡಿದ ಸಾಹಸವನ್ನು ಅವನ ಶಾಸನಗಳು ಹೀಗೆ ಬಣ್ಣಿಸುತ್ತವೆ. ಚಿತ್ರಕಂಠ ವೆಂಬ ಶ್ರೇಷ್ಠ ತುರಂಗವನ್ನೇರಿ ಅನೇಕ ಸಮರಗಳಲ್ಲಿ ಶತ್ರುರಾಜರ ರಕ್ತವನ್ನು ಪಾನಮಾಡಿ ಹದನವಾದ ತನ್ನ ಖಡ್ಗದ ಸಹಾಯದಿಂದಲೇ ರಿಪುಗಳನ್ನು ಸಂಹಾರ ಮಾಡಿ 'ಅವನಿಪತಿತ್ರಿತಯಾಂತರಿತ'ವಾದ ತನ್ನ ತಂದೆಯ ರಾಜ್ಯವೈಭವವನ್ನು ಸಂಪಾದಿಸಿ ಸಕಲ ಚಳುಕ್ಯ ಸಾಮ್ರಾಜ್ಯಕ್ಕೆ ಅಧಿಪತಿಯಾದನು. ರಾಜ್ಯ ಸೂತ್ರಗಳನ್ನು ವಹಿಸಿದ ಕೂಡಲೇ ಆ 'ರಾಜ್ಯತ್ರಯ'ದಲ್ಲಿ ವಿನಷ್ಟವಾದ ದೇವಸ್ವ ಬ್ರಹ್ಮದೇಯಗಳನ್ನು ಧರ್ಮಯಶೋಭಿವೃದ್ಧಿಗಾಗಿ ತನ್ನ ಮುಖ ದಿಂದಲೇ ಉದ್ಧಾರ ಮಾಡಿದನು. ಇವನ ಪರಾಕ್ರಮದಿಂದಲೇ ಚಳುಕ್ಯ ರಾಜ್ಯವು ಮುಂದೆ ಒಂದು ಶತಮಾನದವರೆಗೆ ಬಾಳಲು ಸಾಧ್ಯವಾಯಿತು.

ವಿಕ್ರಮಾದಿತ್ಯನ ತಲಮಂಚಿ ಶಾಸನದ ಕಾಲವು ಅವನ ಆಳಿಕೆಯ ೬ನೆಯ ವರ್ಷದಲ್ಲಿ ಬಂದ ಶ್ರಾವಣಮಾಸದ ಸೂರ್ಯಗ್ರಹಣವು ಕ್ರಿ. ಶ. ೬೬೦, ಜುಲೈ ೧೩, ಸೋಮವಾರದಂದು ಬಾದಾಮಿಯಲ್ಲಿ ದೃಶ್ಯವಿತ್ತು. ವಿಜಯ ಭಟ್ಟಾರಿಕೆಯ ನೇರೂರ ತಾಮ್ರಶಾಸನದಿಂದ ಇವನ ೫ ನೆಯ ವರ್ಷವು ಕ್ರಿ. ಶ. ೬೫೯, ಸಪ್ಟೆಂಬರ ೨೩ ಆಗಿತ್ತೆಂದು ತಿಳಿಯುತ್ತದೆ.

ಇವುಗಳಿಂದ ವಿಕ್ರಮಾದಿತ್ಯನು ಕ್ರಿ. ಶ. ೬೫೪, ಸಪ್ಟೆಂಬರ, ೬೫೫ ಜುಲೈ ಗಳ ಮಧ್ಯದಲ್ಲಿ ಸಿಂಹಾಸನವನ್ನೇರಿರಬೇಕೆಂದು ಗೊತ್ತಾಗುತ್ತದೆ. ಗದ್ವಾಲ ಶಾಸನವು, ಇವನ ೨೦ನೆಯ ವರ್ಷವಾದ ಶಕ ೫೯೬ ವೈಶಾಖ ಪೌರ್ಣಿಮಾಸೆ ಮಂಗಳವಾರ (ಕ್ರಿ. ಶ. ೬೭೪, ಎಪ್ರಿಲ, ೨೫ ಮಂಗಳವಾರ) ದಂದು ಹುಟ್ಟಿದೆ.[1] ಆದುದರಿಂದ ವಿಕ್ರಮಾದಿತ್ಯನ ಸಿಂಹಾಸನಾರೋಹಣ ಕಾಲವು ಕ್ರಿ. ಶ. ೬೫೫, ಎಪ್ರಿಲ ೨೫ಕ್ಕಿಂತ ಮೊದಲು ಇರಬೇಕು. ಇಷ್ಟರಲ್ಲಿ ಪಲ್ಲವ ರಾಜನಾದ ನರಸಿಂಹವರ್ಮನನ್ನು ಸೋಲಿಸಿ ತನ್ನ ರಾಜ್ಯವನ್ನು ಸಂಪಾದಿಸಿರಬೇಕು. ಫ್ಲೀಟರು ಕ್ರಿ. ಶ. ೬೫೫ ರ ಒಳಗಾಗಿಯೇ ವಿಕ್ರಮಾದಿತ್ಯನು, ನರಸಿಂಹವರ್ಮ, ಮಹೇಂದ್ರವಿಕ್ರಮ ಮತ್ತು ಪರಮೇಶ್ವರವರ್ಮರನ್ನು ಸೋಲಿಸಿ ತನ್ನ ಪಿತೃ ರಾಜ್ಯ ಕಿತ್ತುಕೊಂಡನೆಂದು ಹೇಳುತ್ತಾರೆ.[2] ಆದರೆ ಅವನಿಪತಿತ್ರಿತಯ, ಎಂದರೆ ಪಲ್ಲವ ವಂಶದ ಒಬ್ಬರಹಿಂದೊಬ್ಬರಾಳಿದ ಮೂರು ರಾಜರೆಂದು ಅರ್ಥ ಮಾಡು ವದು ಸರಿಯಲ್ಲ. ಹೀಗೆ ಮಾಡುವುದರಿಂದ ಕ್ರಿ. ಶ. ೬೫೫ ರೊಳಗಾಗಿಯೇ

---

[1] *Ep. Ind.* Vol. X, p. 101.

[2] *Dyn. Kan. Dist.* p. 362.



(Plate 7) ಬಾದಾಮಿಯ ಗುಡ್ಡದ ಮೇಲಿನ ಪ್ರಾಚೀನ ಶಿವಾಲಯ

ನರಸಿಂಹವರ್ಮ, ಮಹೇಂದ್ರವರ್ಮ ಮಹಾರಾಜರ ಆಳಿಕೆಗಳು ಮುಗಿದು ಪರಮೇಶ್ವರವರ್ಮನ ರಾಜ್ಯಭಾರವು ಕೆಲಕಾಲ ನಡೆದಿರಬೇಕೆಂದು ಹೇಳಿದಂತಾಗುವುದು. ನರಸಿಂಹವರ್ಮನು ಬಹುಕಾಲ ಅಂದರೆ ಸು. ೪೦ ವರ್ಷಗಳು ಆಳಿದನೆಂದು ಮಹಾವಂಸದಿಂದ ಗೊತ್ತಾಗುವುದರಿಂದಲೂ,[1] ೨ನೆಯ ಪುಲಿಕೇಶಿಯು ಪಟ್ಟಕ್ಕೆ ಬಂದು ಕೆಲವು ವರ್ಷಗಳಾದ ಮೇಲೆ ಅವನು ಸಿಂಹಾಸನವನ್ನೇರಿರಬೇಕೆಂದು ಊಹಿಸಬಹುದಾದುದರಿಂದಲೂ,[2] ೬೫೫ ಕ್ಕಿಂತ ಪೂರ್ವದಲ್ಲಿ ಅವನೂ, ಅವನ ಮಗನಾದ ೨ನೆಯ ಮಹೇಂದ್ರವಿಕ್ರಮನೂ ಆಳಿ ಸತ್ತು ಹೋಗಿರಬೇಕೆಂದು ಹೇಳುವುದು ಸಮಂಜಸವಾಗಿ ತೋರುವುದಿಲ್ಲ. ಮತ್ತು 'ಅವನಿಪತಿತ್ರಿತಯ', 'ತ್ರೈರಾಜ್ಯ,' 'ರಾಜ್ಯತ್ರಯ' ಗಳು ಭಿನ್ನ ಭಿನ್ನ ಕಾಲದಲ್ಲಿ ಸಂಭವಿಸಿದ್ದರೂ ಒಂದೇ ಸಂಗತಿಯನ್ನು ಸೂಚಿಸುವುದರಿಂದ 'ಅವನಿಪತಿ ತ್ರಿತಯಾಂತರಿತ' ವೆಂದರೆ ಪಾಂಡ್ಯ, ಚೋಳ, ಕೇರಳ ರಾಜರಿಂದ ಅಂತರಿತವೆಂದು ಅರ್ಥ ಮಾಡಬೇಕಲ್ಲದೆ ಪಲ್ಲವರ ಮೂರು ಬೇರೆ ಬೇರೆ ರಾಜರೆಂದು ತಿಳಿಯುವುದು ಯುಕ್ತವಲ್ಲ. ಡುಬ್ರಾಯಿಲರ ಅಭಿಪ್ರಾಯವೂ ತಪ್ಪು. ನರಸಿಂಹವರ್ಮನ ಸೇವೆಯಲ್ಲಿದ್ದ ಸಿಂಹಳರಾಜನು ತ್ರೈರಾಜ್ಯದಲ್ಲಿ ಸೇರುವಷ್ಟು ಬಲವುಳ್ಳವನಾಗಿದ್ದಿಲ್ಲ.

---

[1] *Mahāvansa*, Chapt. XIVII. ಮುಂದೆ ಪಲ್ಲವರ ಕಾಲಮಾನವನ್ನು ಕುರಿತು ಬರೆದ ಟಿಪ್ಪಣಿಯನ್ನು ನೋಡಿರಿ.

[2] ಪುಲಿಕೇಶಿಯ ದಿಗ್ವಿಜಯಕಾಲದಲ್ಲಿ ೧ನೆಯ ಮಹೇಂದ್ರವಿಕ್ರಮನು ಪಲ್ಲವ ರಾಜನಾಗಿದ್ದನು.

[3] ಕ್ರಿ. ಶ. ೬೭೪ ರಲ್ಲಿ ಚೋಳಿಕ ವಿಷಯದಲ್ಲಿ ಬೀಡುಬಿಟ್ಟಿದ್ದ ವಿಕ್ರಮಾದಿತ್ಯನನ್ನು (ಗದ್ವಾಲಶಾಸನ) ಎದುರಿಸಲಿಕ್ಕೆ, ಪಾಂಡ್ಯ, ಚೋಳ, ಕೇರಳ, ಕಳಭ್ರ, ಕವೇರ, ಪಾರಸಿಕ, ಸಿಂಹಳರಾಜರು ಸೇರಿದ್ದರೆಂದು ಕೆಂದೂರು ಶಾಸನದಲ್ಲಿ ಹೇಳಿದ 'ತ್ರೈರಾಜ್ಯ' ವೆಂದರೆ ಪಲ್ಲವ, ಪಾಂಡ್ಯ, ಸಿಂಹಳರಾಜರ ಸಂಘವೆಂದೂ ಡುಬ್ರಾಯಿಲರು ಬರೆದಿದ್ದಾರೆ. (*Pallavas*, by Dubrieul, p. 44) ಸಿಂಹಳರಾಜನಾದ ಮಾಣವರ್ಮನು ಕ್ರಿ. ಶ. ಸುಮಾರು ೬೬೦ ರಲ್ಲಿ ಪಟ್ಟಬದ್ಧನಾದುದರಿಂದ ಅವನು ಪಲ್ಲವರಿಗೆ ಬಂದ ಗಂಡಾಂತರವನ್ನು ದೂರಮಾಡಲಿಕ್ಕೆ ಸೈನ್ಯದೊಂದಿಗೆ ಬಂದಿರಬೇಕೆಂದು ಹೇಳಿದ್ದಾರೆ. ಆದರೆ ವಿಕ್ರಮಾದಿತ್ಯನು 'ಅವನಿಪತಿತ್ರಿತಯ' (ತ್ರೈರಾಜ್ಯ)ವನ್ನು ಸೋಲಿಸಿ ತನ್ನ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನೆಂದು ಶಾಸನಗಳಲ್ಲಿ ಹೇಳಿರುವುದರಿಂದ ಕ್ರಿ. ಶ. ೬೫೫ ಕ್ಕಿಂತ ಪೂರ್ವದಲ್ಲಿಯೇ ಈ 'ತ್ರೈರಾಜ್ಯ' ವು ಉಂಟಾಗಿರಬೇಕು. ಆಗ ಮಾಣವರ್ಮನು, ಡುಬ್ರಾಯಿಲರ ಲೆಕ್ಕದಂತೆಯಾದರೂ ಇನ್ನೂ ರಾಜನಾಗಿರಲಿಲ್ಲ.

ವೆಂಕಟರಮಣಯ್ಯನವರು 'Trairajya-Pallava' ಎಂಬ ಲೇಖದಲ್ಲಿ ಪಲ್ಲವ ಬಲವೆಂದರೆ ಪಲ್ಲವರ ಮೂರು ಶಾಖೆಗಳೆಂದೂ ಅವುಗಳಲ್ಲಿ ಒಂದು ಗುಂಟೂರು, ನೆಲ್ಲೂರು

ಅಂತೂ ವಿಕ್ರಮಾದಿತ್ಯನು ಪಟ್ಟಕ್ಕೆ ಬರುವ ಮೊದಲು ನರಸಿಂಹವರ್ಮನನ್ನು ಸೋಲಿಸಿರಬೇಕು. ಇವನ ೩, ೬, ೧೦ನೆಯ ವರ್ಷಗಳ ಶಾಸನಗಳಲ್ಲಿ ಮಹೇಂದ್ರವರ್ಮ, ಪರಮೇಶ್ವರವರ್ಮರ ಸೋಲು ಉಲ್ಲೇಖಿಸಲ್ಪಟ್ಟಿಲ್ಲವಾ

---

ಜಿಲ್ಲೆಗಳಲ್ಲಿಯೂ, ಇನ್ನೊಂದು ಬಳ್ಳಾರಿ, ಕರ್ನೂಲ, ಅನಂತಪುರ ಜಿಲ್ಲೆಗಳಲ್ಲಿಯೂ, ಮೂರನೆಯದು ಕಂಚಿ ಪ್ರಾಂತದಲ್ಲಿಯೂ ಆಳುತ್ತಿದ್ದರೆಂದು ಬರೆದಿದ್ದಾರೆ. 'ತ್ರೈರಾಜ್ಯ' ಪದದಿಂದ ಸಂಘದಲ್ಲಿ ಮೂರೇ ರಾಜ್ಯಗಳಿದ್ದಿರಬೇಕು. ಪಾಂಡ್ಯ, ಚೋಳ, ಕೇರಳ ರಾಜರಲ್ಲದೆ ಪಲ್ಲವರನ್ನೂ ಸೇರಿಸಿದರೆ ಅದು ತ್ರೈರಾಜ್ಯವಾಗಲಾರದು. ಇದಲ್ಲದೆ ಪಾಂಡ್ಯರು ಈ ಕಾಲದಲ್ಲಿ ಪಲ್ಲವರಿಗೆ ಮಿತ್ರರಾಗಿರಲಿಲ್ಲ. ಚೋಳರಂತೂ ಸ್ವತಂತ್ರ ರಾಜರಾಗಿರಲಿಲ್ಲ; ಕೇರಳದ ಹೆಸರೇ ಗೊತ್ತಿದ್ದಿಲ್ಲ. ಆದುದರಿಂದ ತ್ರೈರಾಜ್ಯಪದದಿಂದ ಈ ಮೂವರು ರಾಜರ ಸಂಘವೆಂದು ಅರ್ಥಮಾಡದೆ ಪಲ್ಲವರ ಮೂರು ರಾಜರೆಂದು ಅರ್ಥಮಾಡಬೇಕು. ಫ್ಲೀಟರ ಅಭಿಪ್ರಾಯವು ಇದೇ ಅರ್ಥಕ್ಕೆ ಪುಷ್ಟಿಯನ್ನು ಕೊಡುತ್ತದೆ ಎಂಬುದಾಗಿ ಪ್ರತಿಪಾದಿಸಿದ್ದಾರೆ. ಆದರೆ ಈ ಅಭಿಪ್ರಾಯವು ಪ್ರಾಮಾಣಿಕವಲ್ಲ. 'ತ್ರೈರಾಜ್ಯಪಲ್ಲವಬಲ' ವು ಸಮಸ್ತಪದವಾದುದರಿಂದ ಸಂಘದಲ್ಲಿ ಮೂರು ರಾಜರೂ ಪಲ್ಲವರೂ ಸೇರಿದ್ದರೆಂದು ತಿಳಿಯಬಹುದು. ಪಾಂಡ್ಯ, ಚೋಳ, ಕೇರಳರನ್ನು ನರಸಿಂಹವರ್ಮನು ಸೋಲಿಸಿದನೆಂದು ಶಾಸನದಲ್ಲಿಯೇ ಹೇಳಿರುವುದರಿಂದ ಆ ಹೆಸರಿನ ರಾಜರು ಆಗ ಇದ್ದರೆಂದೂ ಅವರೊಡನೆ ಪಲ್ಲವರಾಜನು ಸಂಘವನ್ನು ಏರ್ಪಡಿಸಿದ್ದನೆಂದೂ ಗೊತ್ತಾಗುತ್ತದೆ. ಇದಲ್ಲದೆ ಗುಂಟೂರು, ನೆಲ್ಲೂರು ಜಿಲ್ಲೆಗಳಲ್ಲಿ ಪಲ್ಲವರು ಈಕಾಲದಲ್ಲಿ ರಾಜ್ಯಭಾರಮಾಡುತ್ತಿದ್ದರೆಂದು ತಿಳಿಯುವುದು ಕೇವಲ ಕಲ್ಪನೆ. ನೆಲ್ಲೂರು ಜಿಲ್ಲೆಯ ದರ್ಶಿಯಲ್ಲಿ ೧ನೆಯ ವಿಕ್ರಮಾದಿತ್ಯನ ಶಾಸನವು ಇದೆ. ( *Nellore Inscr. Darsi,* Nos. 2 and 7 ). ಈ ಭಾಗವು ಪುಲಿಕೇಶಿಯ ಕಾಲದಲ್ಲಿಯೇ ಚಳುಕ್ಯರ ಕೈಸೇರಿರಬೇಕು. ಗುಂಟೂರು ಜಿಲ್ಲೆಯ ನರಸರಾವಪೇಟೆ ತಾಲೂಕು ಪುಲಿಕೇಶಿಯ ವಶದಲ್ಲಿತ್ತೆಂದು ಕೊಪ್ಪರಂ ಶಾಸನದಿಂದ ಗೊತ್ತಾಗುತ್ತದೆ. ಅದೇ ಜಿಲ್ಲೆಯ ಭಾಗವು ಈಗ ಪೂರ್ವಚಳುಕ್ಯರ ವಶದಲ್ಲಿ ಇತ್ತೆಂದು ೧ನೆಯ ಜಯಸಿಂಹನ ನಿಡಪರು ಶಾಸನದಿಂದ ಹೇಳಬಹುದು. ಬಳ್ಳಾರಿ, ಕರ್ನೂಲ ಜಿಲ್ಲೆಗಳೂ ( ನಳವಾಡಿ ವಿಷಯವು ) ಬಾದಾಮಿ ಚಳುಕ್ಯರ ಕೈಯಲ್ಲಿದ್ದವೆಂದು ಐಹೊಳೆ ಶಾಸನದಿಂದಲೂ ಆದಿತ್ಯ-ವರ್ಮನ ೧ನೆಯ ವರ್ಷದ ಕರ್ನೂಲ ತಾಮ್ರಶಾಸನದಿಂದಲೂ ಊಹಿಸಬಹುದು. ಅನಂತಪುರ ಜಿಲ್ಲೆಯಲ್ಲಿ ಪುಲಿಕೇಶಿಯ ಶಿಲಾಶಾಸನವು ದೊರೆತಿದೆ. ಇವೆಲ್ಲ ಕಾರಣಗಳಿಂದ ಬಳ್ಳಾರಿ, ಕರ್ನೂಲ, ಅನಂತಪುರ, ಗುಂಟೂರು ಜಿಲ್ಲೆಗಳು ಚಲುಕ್ಯರ ಪ್ರಭುತ್ವದಲ್ಲಿದ್ದವೆಂದೂ ಅವುಗಳಿಗೆ ಹೊಂದಿ ಇದ್ದ ಕಡಪಾಜಿಲ್ಲೆಯು ಚೋಳರ ಕೈಯಲ್ಲಿತ್ತೆಂದೂ ಹೇಳಬಹುದು. ಅಲ್ಲಲ್ಲಿ ಗಂಗೂಲ ಪಲ್ಲವ ಅರಸನ ಶಾಸನಗಳು ಸಿಕ್ಕಿದರೂ ಅವುಗಳಿಂದ ಅವನ ಪ್ರಭುತ್ವವು ಸಿದ್ಧವಾಗುವುದಿಲ್ಲ. ಅವನು ಚಲುಕ್ಯರ ಸಾಮಂತ ರಾಜನಾಗಿದ್ದಿರಬಹುದು. ಫ್ಲೀಟರು ತಮ್ಮ ಮೊದಲಿನ ಅಭಿಪ್ರಾಯವನ್ನು ಬಿಟ್ಟು ತ್ರೈರಾಜ್ಯವೆಂದರೆ ಪಾಂಡ್ಯ, ಚೋಳ, ಕೇರಳರಾಗಿರಬೇಕೆಂದು ತಮ್ಮ ಪುಸ್ತಕದಲ್ಲಿ ತಿದ್ದಿ ಬರೆದಿದ್ದಾರೆ. ( *Dyn. Kan. Dist.* p. 362 n. 6. )

ದುದರಿಂದ ತನ್ನ ಆಳಿಕೆಯ ೧೦ನೆಯ ವರ್ಷಗಳಿಂದ ಮೇಲೆಯೇ ಇವರಿಬ್ಬರೊಡನೆ ಯುದ್ಧಗಳು ಜರುಗಿರಬೇಕು.

ಈ ಮೇಲಿನ ಶಾಸನಗಳಲ್ಲಿ ನರಸಿಂಹವರ್ಮನ ಹೆಸರೂ ಇಲ್ಲವಾದರೂ ಚಲುಕ್ಯ ರಾಜ್ಯವು ಪಲ್ಲವರ ಸ್ವಾಧೀನವಿದ್ದುದರಿಂದ ವಿಕ್ರಮಾದಿತ್ಯನು ಆ ಕಾಲದಲ್ಲಿ ಪಲ್ಲವರಾಜನಾಗಿದ್ದ ನರಸಿಂಹವರ್ಮನನ್ನೇ ಸೋಲಿಸಿ ತನ್ನ ರಾಜ್ಯವನ್ನು ಕಿತ್ತುಕೊಂಡಿರಬೇಕು.[1] ಹೈದರಾಬಾದ ಗದ್ವಾಲ ಶಾಸನಗಳಲ್ಲಿ ವಿಕ್ರಮಾದಿತ್ಯನು ನರಸಿಂಹವರ್ಮನ ಯಶಸ್ಸನ್ನು ಹೋಗಲಾಡಿಸಿ, ಮಹೇಂದ್ರನ ಪ್ರತಾಪವನ್ನು ಅಡಗಿಸಿ ರಾಜನೀತಿಯಿಂದ ಈಶ್ವರಪೋತನನ್ನು ( ಈಶ್ವರ ಪೋತರಾಜ ಅಥವಾ ಪರಮೇಶ್ವರವರ್ಮ ) ಸೋಲಿಸಿ ಹೆಸರುಗೊಂಡನೆಂದು ಹೇಳಿರುವುದು. ಗದ್ವಾಲ ಶಾಸನವು ಅವನ ಆಳಿಕೆಯ ೨೦ನೆಯ ವರ್ಷದ್ದಾದುದರಿಂದ ವಿಕ್ರಮಾದಿತ್ಯನು ೧೦ನೆಯ ಮತ್ತು ೨೦ನೆಯ ವರ್ಷಗಳ ಮಧ್ಯದಲ್ಲಿ ಮಹೇಂದ್ರವಿಕ್ರಮ ಪರಮೇಶ್ವರರನ್ನು ಸೋಲಿಸಿರಬೇಕು.

ವಿಕ್ರಮಾದಿತ್ಯನು ಪಲ್ಲವರೊಡನೆ ಅನೇಕಸಲ ಕಾದಿದನು. ಒಮ್ಮೆ ಈಶ್ವರಪೋತರಾಜನನ್ನು ಸೋಲಿಸಿ ದಕ್ಷಿಣ ದಿಗ್ಯುವತಿಯ ವಡ್ಯಾಣದಂತಿದ್ದ ಕಾಂಚೀಪಟ್ಟಣವನ್ನು ಕೈವಶಮಾಡಿಕೊಂಡನು. ಈಶ್ವರಪೋತನು 'ರಣರಸಿಕ'ನ ಪಟ್ಟಣವನ್ನು ( ಅಂದರೆ ಬಾದಾಮಿಯನ್ನು ) ಮುತ್ತಿ ಹಿಡಿದುಕೊಂಡನೆಂದು ಕೂರಂ, ಉದಿಯೇಂದಿರಂ, ಶಾಸನಗಳಲ್ಲಿ[2] ಹೇಳಿರುವುದರಿಂದ ಅವನು ವಿಕ್ರಮಾದಿತ್ಯನ ಮೇಲೆ ಸೇಡುತೀರಿಸಿಕೊಳ್ಳುವುದಕ್ಕಾಗಿ ಬಾದಾಮಿಗೆ ಮುತ್ತಿಗೆ ಹಾಕಿರಬೇಕು. ಕ್ರಿ. ಶ. ೬೭೪ ರಲ್ಲಿ ವಿಕ್ರಮಾದಿತ್ಯನು ಪುನಃ ಪಲ್ಲವರ ಮೇಲೆ ದಂಡೆತ್ತಿಹೋಗಿ ಕಾಂಚಿಯನ್ನು ದಾಟಿ ಚೋಳಿಕವಿಷಯದಲ್ಲಿ ಕಾವೇರಿನದಿಯ ದಕ್ಷಿಣತೀರದಲ್ಲಿದ್ದ ಉರಗಪುರ[3] ( ಉರೈಯೂರ )ದಲ್ಲಿ ಬೀಡನ್ನು

---

[1] ಫ್ಲೀಟರು ೧ನೆಯ ಪರಮೇಶ್ವರನಿಂದ ವಿಕ್ರಮಾದಿತ್ಯನು ರಾಜ್ಯವನ್ನು ಕಿತ್ತುಕೊಂಡನೆಂದು ಹೇಳಿದುದು ( *Dyn. Kan. Dist*. p. 362 ) ತಪ್ಪು.

[2] *S. I. I.* Vol I, p. 144 , *S. I. I.* Vol. II, Part III, p. 376.

[3] ಇದು ಪ್ರಾಚೀನ ಚೋಳರ ರಾಜಧಾನಿಯಾಗಿದ್ದ ಉಱೈಯೂರೆಂದು ( ತ್ರಿಚನಾಪಳ್ಳಿಯ ಹತ್ತರದಲ್ಲಿ ) ವೆಂಕಯ್ಯನವರು ಹೇಳಿದ್ದಾರೆ. ಹುಲ್ಷರು ಇದು ತಂಜಾವೂರು ಜಿಲ್ಲೆಯಲ್ಲಿದ್ದ ನಾಗಪಟ್ಟಣವೆಂದು ಬರೆದಿದ್ದಾರೆ. ( *Ep. Ind*. Vol. X, p. 102 ) ಪೆರುವಳ ನಲ್ಲೂರು- ತ್ರಿಚನಾಪಳ್ಳಿಯಿಂದ ಸು. ೧೨ ಮೈಲುಗಳು ದೂರವಿರುವುದರಿಂದ

ಬಿಟ್ಟಿದ್ದನೆಂದು ಗದ್ವಾಲಶಾಸನದಿಂದ ಗೊತ್ತಾಗುತ್ತದೆ. ಪಲ್ಲವರ ಶಾಸನಗಳು ಪರಮೇಶ್ವರನು ವಿಕ್ರಮಾದಿತ್ಯನನ್ನು ಪೆರುವಳ ನಲ್ಲೂರಲ್ಲಿ ಸೋಲಿಸಿದನೆಂದೂ ಚಳುಕ್ಯರಾಜನು ತನ್ನ ಸರ್ವಸ್ವವನ್ನು ಕಳೆದುಕೊಂಡು ಹಿಂತಿರುಗಿದನೆಂದೂ ಹೇಳುತ್ತವೆ. ಅಂತು ಪಲ್ಲವರಾಜ್ಯದಲ್ಲಿ ವಿಕ್ರಮಾದಿತ್ಯನಿಗೂ ಪರಮೇಶ್ವರನಿಗೂ ಘೋರವಾದ ಯುದ್ಧಗಳಾಗಿರಬೇಕೆಂದು ನಿಶ್ಚಿತವಾಗಿ ಹೇಳಬಹುದು.

ವಿಕ್ರಮಾದಿತ್ಯನು ಕಾಂಚೀಪತಿ ಪಲ್ಲವರನ್ನಲ್ಲದೆ ಪಾಂಡ್ಯ, ಚೋಳ, ಕೇರಳ, ಮತ್ತು ಕಳಭ್ರರನ್ನೂ ಸೋಲಿಸಿದನೆಂದು ವಿನಯಾದಿತ್ಯ, ವಿಜಯಾದಿತ್ಯ, ಕೀರ್ತಿವರ್ಮರ ಶಾಸನಗಳಲ್ಲಿ ಹೇಳಿದೆ.[1] ಇವನ ಆಜ್ಞೆಯ ಮೇರೆಗೆ ವಿನಯಾದಿತ್ಯನು ಸೈನ್ಯಾಧಿಪತ್ಯವನ್ನು ವಹಿಸಿ, ಕುಮಾರ (ಷಣ್ಮುಖ)ನು ದೈತ್ಯ ಬಲವನ್ನು ನಾಶಗೊಳಿಸಿದಂತೆ ಪಲ್ಲವರನ್ನು ಸೋಲಿಸಿ ಕವೇರ, ಪಾರಸಿಕ, ಸಿಂಹಳ ರಾಜರಿಂದ ಕಪ್ಪವನ್ನು ಎತ್ತಿದನೆಂದೂ ಉತ್ತರಾಪಥದ ರಾಜರಿಂದ ಗಂಗಾಯಮುನಾ ಪಾಳಿಧ್ವಜಾದಿ ಚಿಹ್ನಗಳನ್ನು ಸಂಪಾದಿಸಿದನೆಂದೂ ಗೊತ್ತಾಗುತ್ತದೆ. ಈ ಉತ್ತರಾಪಥದ ದಿಗ್ವಿಜಯದಲ್ಲಿ ವಿಜಯಾದಿತ್ಯನು ತನ್ನ ತಂದೆಯಾದ ವಿನಯಾದಿತ್ಯನಿಗೆ ಸಹಾಯನಾಗಿದ್ದನು.

ವಿಕ್ರಮಾದಿತ್ಯನಿಗೆ ಶ್ರೀವಲ್ಲಭ, ಅನಿವಾರಿತ, ರಣರಸಿಕ, ರಾಜಮಲ್ಲ ಎಂದು ಬಿರುದುಗಳಿದ್ದುವು. ಗದ್ವಾಲಶಾಸನದಿಂದ ಇವನಿಗೆ ಗಂಗಮಹಾದೇವಿಯೆಂಬ ರಾಣಿ ಇದ್ದಂತೆ ತೋರುತ್ತದೆ.[2] ಇವನಿಗೆ ಸೇಂದ್ರಕರೂ

---

ವೆಂಕಯ್ಯನವರ ಅಭಿಪ್ರಾಯವೇ ಸಮಂಜಸವಾಗಿ ತೋರುತ್ತದೆ. (*Pallavas* by R. Gopalan, p. 104, note) ಡುಬ್ರಾಯಿಲರು ಈ ಉರಗಪುರವೇ 'ರಣರಸಿಕ'ನ ಪಟ್ಟಣವೆಂದು ಬರೆದಿದ್ದಾರೆ. (*Pallavas*, p. 43). ಕೃಷ್ಣಸ್ವಾಮಿ ಅಯ್ಯಂಗಾರರೂ ಇದೇ ಅಭಿಪ್ರಾಯವುಳ್ಳವರಾಗಿದ್ದಾರೆ. (Journal of Indian History, Vol. XI, Part I, p. 75 f. n.). ಆದರೆ ಶತ್ರುರಾಜ್ಯದಲ್ಲಿ ಚೋಳಿಕವಿಷಯವನ್ನು ಹೊಕ್ಕಾಗ ಚಳುಕ್ಯರಾಜನು ಉರಗಪುರದಲ್ಲಿ ಬೀಡುಬಿಟ್ಟುದರಿಂದ ಅದು 'ರಣರಸಿಕ'ನ ಪಟ್ಟಣವೆಂದು ಪ್ರಸಿದ್ಧಿಯನ್ನು ಹೊಂದಲಾರದು. ಚೋಳಿಕವಿಷಯವಾದರೂ ಚಳುಕ್ಯರ ಕೈಯಲ್ಲಿ ಬಹುಕಾಲವಿದ್ದಿಲ್ಲವೆಂದು ಮೇಲಿನ ವಿವೇಚನೆಯಿಂದ ಗೊತ್ತಾಗುತ್ತದೆ.

[1] ಜೆಜೂರಿ, ರಾಯಗಡ, ಕೆಂದೂರು ಮೊದಲಾದ ತಾಮ್ರಶಾಸನಗಳು.

[2] ಇವಳು ವಿಕ್ರಮಾದಿತ್ಯನ ತಾಯಿಯೂ, ದುರ್ವಿನೀತನ ಮಗಳೂ ಆಗಿರಬಹುದೆಂದು ವೆಂಕಟರಮಣಯ್ಯನವರು ಬರೆದಿದ್ದಾರೆ. (Durvinita and Vikramaditya *Triveni*, p. 120) ಇದು ಅಸಂಭಾವ್ಯವು. ಪುಲಿಕೇಶಿ ಸಾಯುವಾಗ ಅಂದರೆ ಸುಮಾರು ೬೪೨ ರಲ್ಲಿ ವಿಕ್ರಮಾದಿತ್ಯನು ಪ್ರೌಢವಯಸ್ಕನಾಗಿರಬೇಕು. ಕ್ರಿ.ಶ. ೬೭೪ರ ಪೂರ್ವದಲ್ಲಿಯೇ

ಗುಜರಾತದ ಚಳುಕ್ಯರೂ ಮಾಂಡಲಿಕರಾಗಿದ್ದರು. ಇವನ ೨೭ನೆಯ ವರ್ಷದ ಶಿಲಾಶಾಸನವು ಗುತ್ತಿ ತಾಲೂಕಿನ ದಿವ್ಮ್ಯಗುಡಿಯಲ್ಲಿ ಸಿಕ್ಕಿದುದರಿಂದ ವಿಕ್ರಮಾದಿತ್ಯನು ಕ್ರಿ. ಶ. ೬೮೨ರ ವರೆಗೆ ಆಳಿದನೆಂದು ಹೇಳಬೇಕಾಗುತ್ತದೆ.

**ಇವನ ಕಾಲದ ಶಾಸನಗಳು:—**

೧. ಕರ್ನೂಲ ತಾಮ್ರಶಾಸನ.[1]— ರಾಜನ ಆಳಿಕೆಯ ೩ನೆಯ ವರ್ಷದಲ್ಲಿ ಸಂಗಮ ಮಹಾಯಾತ್ರೆಯ ಕಾಲದಲ್ಲಿ ನಳವಾಡಿ ವಿಷಯದಲ್ಲಿದ್ದ ರತ್ನಗಿರಿಯಲ್ಲಿ ಭೂಮಿಯನ್ನು ದಾನಮಾಡಿದಂತೆ ಬರೆದಿದೆ. ಬಳ್ಳಾರಿ ಜಿಲ್ಹೆಯ ಮಡಕಶಿರಾದಿಂದ ೧೩ ಮೈಲುಗಳ ಅಂತರದಲ್ಲಿರುವ ರತ್ನಾ-ಗಿರಿಯೇ ಇದಾಗಿರಬಹುದು.

೨. ನೇರೂರು ( ಸಾವಂತವಾಡಿ ಸಂಸ್ಥಾನ ) ತಾಮ್ರಶಾಸನ.[2]— ವಿಕ್ರಮಾದಿತ್ಯನ ಅಣ್ಣನಾದ ಚಂದ್ರಾದಿತ್ಯನ ಹೆಂಡತಿ ವಿಜಯಭಟ್ಟಾರಿಕೆ 'ಸ್ವರಾಜ್ಯ' ೫ನೆಯ ವರ್ಷದ ಆಶ್ವಯುಜ, ಶುದ್ಧ ಬಿದಿಗೆ ವಿಷುವದಲ್ಲಿ ( ಕ್ರಿ. ಶ. ೬೫೯, ಸಪ್ಟೆಂಬರ ೨೩ ) ಒಬ್ಬ ಬ್ರಾಹ್ಮಣನಿಗೆ ತರಕಾಗಾಹಾರ ಗ್ರಾಮದಲ್ಲಿ ಭೂಮಿಯನ್ನು ಕೊಟ್ಟಂತೆ ಹೇಳಿದೆ.

೩. ತಲಮಂಚಿ ತಾಮ್ರಶಾಸನ.[3]— ರಾಜನು ತನ್ನ ಆರನೆಯ ವರ್ಷದಲ್ಲಿ ಶ್ರಾವಣಮಾಸ ಸೂರ್ಯಗ್ರಹಣದ ಮುಹೂರ್ತದಲ್ಲಿ ( ಸೋಮವಾರ, ಜುಲೈ ೧೩, ಕ್ರಿ. ಶ. ೬೬೦ ) ಕೊಟಿ ಚುಂಕುನಜಿದ ಉತ್ತರಕ್ಕಿರುವ ಎಳಸತ್ತಿ ಗ್ರಾಮವನ್ನು ತನ್ನ ಗುರುಗಳೂ ಸಾಂಗೋಪಾಂಗ ವೇದ ವಿಶಾರದರೂ ಆದ ಶ್ರೀ ಮೇಘಾಚಾರ್ಯರಿಗೆ ತನಗೂ ತನ್ನ ಪಿತೃಗಳಿಗೂ ಪುಣ್ಯವಾಗಬೇಕೆಂದು ದಾನಮಾಡಿದನು.

---

ಅವನಿಗೆ ಪ್ರತಾಪಶಾಲಿಯಾದ ಮೊಮ್ಮಗನಿರಬೇಕೆಂದು ಶಾಸನಗಳಿಂದ ಗೊತ್ತಾಗುತ್ತದೆ. ಇದರಿಂದ ವಿಕ್ರಮಾದಿತ್ಯನ ತಾಯಿ ಗದ್ವಾಲಶಾಸನದ ಕಾಲದಲ್ಲಿ ಸು. ೭೦-೭೫ ವರ್ಷಗಳ ವಯಸ್ಸಿನವಳಿರಬೇಕಾಗುತ್ತದೆ. ಇಂಥ ಮುಪ್ಪಿನ ಮುದುಕಿಯನ್ನು ಚೋಳಿಕ ವಿಷಯದ ವರೆಗೆ ಕರೆದುಕೊಂಡು ಹೋಗಿದ್ದನೆಂದೂ ಅವಳು ತನ್ನ ಮಗನಾದ ವಿಕ್ರಮಾದಿತ್ಯನಿಗೆ 'ವಿಜ್ಞಾಪನೆ' ಮಾಡಿದಳೆಂದೂ ತಿಳಿಯುವುದು ಅಸಮಂಜಸ.

[1] *Jour. Bom. Br. R. A. Soc.* Vol. XVI, pp. 225, 235.

[2] *Ind. Ant.* Vol. VII. p. 163.

[3] *Ep. Ind.* Vol. IX, pp. 98 ff.

೪. ಕೊಚ್ರೇ ತಾಮ್ರಶಾಸನ.[1]— ವಿಜಯಮಹಾದೇವಿ, ವೈಶಾಖ ಶುದ್ಧ ದ್ವಾದಶಿಯ ದಿನದಲ್ಲಿ ಕೊಚ್ಚೂರಕ (ಕೋಚ್ರೇ–ರತ್ನಾಗಿರಿ ಜಿಲ್ಹೆ) ಗ್ರಾಮದಲ್ಲ ಬ್ರಾಹ್ಮಣನಿಗೆ ಭೂಮಿಯನ್ನು ಕೊಟ್ಟಳೆಂದು ಹೇಳಿದೆ. ವಿಕ್ರಮಾದಿತ್ಯನ ಶೌರ್ಯ ಸಾಹಸಗಳನ್ನು ಹೇಳಿದ ಮೇಲೆ ಅವನ ಅಣ್ಣನಾದ 'ಮಹಾರಾಜಾಧಿರಾಜ' ಚಂದ್ರಾದಿತ್ಯನ ಹೆಂಡತಿ ವಿಜಯಮಹಾದೇವಿಯೆಂದು ಬರೆದಿದೆ.

೫. ಕರ್ನೂಲು ತಾಮ್ರಶಾಸನ.[2]— ರಾಜನು ತನ್ನ ಆಳಿಕೆಯ ೧೦ನೆಯ ವರ್ಷದ ಆಷಾಢ ಪೌರ್ಣಿಮೆಯೆಂದು (ಕ್ರಿ. ಶ. ೬೬೪, ಜ್ಯೂನ, ೧೫) ಸೇಂದ್ರಕ ರಾಜನಾದ ದೇವಶಕ್ತಿಯ ವಿಜ್ಞಾಪನೆಯ ಮೇರೆಗೆ ಅಂದಿರಿಕಾ ನದಿಯ ಪಶ್ಚಿಮತೀರದಲ್ಲಿದ್ದ ರಟ್ಟಗಿರಿ ಎಂಬ ಗ್ರಾಮದಲ್ಲಿ ಭೂಮಿಯನ್ನು ಬ್ರಹ್ಮದೇಯವಾಗಿ ಕೊಟ್ಟನೆಂದು ಬರೆದಿದೆ. ಇದರಲ್ಲಿ ಚಿಂಚಪಲ್ಲ ಗ್ರಾಮವು ಉಕ್ತವಾಗಿದೆ. ಕಲಬುರ್ಗಿಯ ಉತ್ತರಕ್ಕೆ ೪೦ ಮೈಲುಗಳ ಮೇಲಿರುವ ಚಿಂಚೊಳ್ಳಿ ಇದಾಗಿರಬಹುದು.

೬. ನವಸಾರಿ (ಬಡೋದೆ ಸಂಸ್ಥಾನ) ತಾಮ್ರಶಾಸನ.[3]— (ಕಲಚೂರಿ ವರ್ಷ) ೪೨೧, ಮಾಘ ಶುದ್ಧ ೧೩ ನೆಯ ದಿನದಲ್ಲಿ (ಕ್ರಿ. ಶ. ೬೭೧, ಜಾನುಆರಿ, ೩೦) ವಿಕ್ರಮಾದಿತ್ಯನ ತಮ್ಮನಾದ ಧಾರಾಶ್ರಯ ಜಯಸಿಂಹ ವರ್ಮನ ಮಗ ಯುವರಾಜ ಶ್ರ್ಯಾಶ್ರಯ ಶೀಲಾದಿತ್ಯನು ನವಸಾರಿಕಾ ಗ್ರಾಮದಲ್ಲಿದ್ದಾಗ ಕೆಲ ಬ್ರಾಹ್ಮಣರಿಗೆ ದಾಹಿರಿಕಾ ವಿಷಯಾಂತರ್ಗತ ಕಂಡವಲಾಹಾರ ವಿಷಯದಲ್ಲಿಯ ಆಸಟ್ಟಿ ಗ್ರಾಮವನ್ನು ಕೊಟ್ಟನೆಂದು ಹೇಳಿದೆ. ಆಸಟ್ಟಿ ಗ್ರಾಮವು ನವಸಾರಿಯ ಸಮೀಪದಲ್ಲಿದ್ದ ಅಷ್ಟಗಾಂ. ಇದರಲ್ಲಿಯೂ ಕ್ರಿ. ಶ. ೬೯೨ ರ ಸುರತ ಶಾಸನದಲ್ಲಿಯೂ ಶ್ರ್ಯಾಶ್ರಯ ಶೀಲಾದಿತ್ಯನು ಯುವರಾಜನೆಂದು ಹೇಳಿಕೊಂಡಿದ್ದಾನೆ. ಇದರಿಂದ ಅವನ ತಂದೆಯಾದ ಧಾರಾಶ್ರಯ ಜಯಸಿಂಹವರ್ಮನು ಕ್ರಿ. ಶ. ೬೯೨ರಲ್ಲಿ ಬದುಕಿದ್ದನೆಂದು ಹೇಳಬಹುದು. ಈ ಶಾಸನದಲ್ಲಿ ವಿಕ್ರಮಾದಿತ್ಯನು ಪಲ್ಲವರನ್ನು ನಿರ್ಮೂಲ ನಾಶಮಾಡಿದ್ದನೆಂದೂ ಅವನ ಪ್ರಸಾದದಿಂದ ಜಯಸಿಂಹವರ್ಮನಿಗೆ ರಾಜ್ಯವು ಸಿಕ್ಕಿತೆಂದೂ ಬರೆದಿದೆ.

---

1 *Ind. Ant.* Vol. VIII, p. 44.

2 *Jour. Bom Br. R. A. Soc.* Vol. XVI, pp. 227, 238.

3 *Ibid.* Vol. ΧVI, p. 1., *Ep. Ind.* Vol. VIII. pp. 229, ff.

೭. ಸಂಜಾನ ತಾಮ್ರಶಾಸನ.[1]— ಕೊಕ್ಕುಲ ವಿಕ್ರಮಾದಿತ್ಯನ ಚಿಕ್ಕಪ್ಪನೂ ಸತ್ಯಾಶ್ರಯ ಪುಲಕೇಶಿಯ ತಮ್ಮನೂ ಆದ ಬುದ್ಧವರಸನು ಪಿಸುಕ ಗ್ರಾಮದಲ್ಲಿದ್ದಾಗ ಪೃಥ್ವೀವಲ್ಲಭ ವಿಕ್ರಮಾದಿತ್ಯನ ಆಳಿಕೆಯಲ್ಲಿ ಪೌಷ-ಅಮಾವಾಸ್ಯೆ ಸೂರ್ಯಗ್ರಹಣದಂದು ಅಪರಾಂತದಲ್ಲಿದ್ದ ದ್ವಾದಶ—ಗ್ರಾಮಿಯಲ್ಲಿ ಮಾತೃದಿನ್ನ ಗ್ರಾಮಕ್ಕೆ ಸೇರಿದ್ದ ಕ್ಷೇತ್ರಗಳನ್ನು ಕಲ್ಪೀವನದಲ್ಲಿದ್ದ ಒಬ್ಬ ಬ್ರಾಹ್ಮಣನಿಗೆ ದಾನಮಾಡಿದನು. ಪಿಸುಕವು ಕುಲಾಬಾ ಜಿಲ್ಹೆಯಲ್ಲಿದ್ದ ಪೇಸ. ಕಲ್ಪೀವನವು ಮಹೀಂ ಸಮೀಪದಲ್ಲಿದ್ದ ಕೆಲ್ವೆ. ಅರಾಂತರವೇ ಅಪರಾಂತರವು (ಉತ್ತರ ಕೊಂಕಣ). ಮಾತೃದಿನ್ನವು ಈಗಿನ ಮಾಧ್ವವೆಂಬ ಹಳ್ಳಿಯಾಗಿರಬಹುದು. ಈ ಶಾಸನದ ಕಾಲವು ಕ್ರಿ. ಶ. ೬೭೧, ಡಿಸೆಂಬರ ೭ ಎಂದು ಸ್ಟೆನ್‌ಕೋನೋ ಬರೆದಿದ್ದಾರೆ.[2] ಇದೇ ಕಾಲದಲ್ಲಿ ಜಯಸಿಂಹವರ್ಮನು ಸುರತ ಪ್ರಾಂತದಲ್ಲ ಆಳುತ್ತಿದ್ದುದರಿಂದ ಬುದ್ಧವರಸನು ಉತ್ತರ ಕೊಂಕಣದಲ್ಲಿ ರಾಜ್ಯಭಾರ ಮಾಡುತ್ತಿದ್ದನೆಂದು ತಿಳಿಯಬಹುದು.

೮. ಗದ್ವಾಲ ತಾಮ್ರಶಾಸನ.[3]— ರಾಜನ ೨೦ನೆಯ ವರ್ಷವಾದ ಶಕ ೫೯೬, ವೈಶಾಖ ಪೌರ್ಣಿಮೆ, ಮಂಗಳವಾರದಂದು— (ಕ್ರಿ. ಶ. ೬೭೪, ಎಪ್ರಿಲ ೨೫) ಚೋಳಿಕ ವಿಷಯದಲ್ಲಿ ಕಾವೇರೀ ನದಿಯ ದಕ್ಷಿಣತೀರದಲ್ಲಿದ್ದ ಉರಗಪುರಗದಲ್ಲ ಬೀಡುಬಿಟ್ಟಿದ್ದಾಗ ಒಬ್ಬ ಬ್ರಾಹ್ಮಣನಿಗೆ ಭೂಮಿಯನ್ನು ದಾನಮಾಡಿದಂತೆ ಹೇಳಿದೆ. ಈ ಉರಗಪುರವು ಚೋಳರ ಪ್ರಾಚೀನ ರಾಜಧಾನಿಯಾದ ಉಜ್ಜಯೂರೇ. ಈ ಶಾಸನದಲ್ಲಿ ಕಾಂಚೀ ಗ್ರಹಣವೇ ಮೊದಲಾದ ವಿಕ್ರಮಾದಿತ್ಯನ ಸಾಹಸಗಳು ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ.

೯. ಸೇಂದ್ರಕ ತಾಮ್ರಶಾಸನ.[4]— ಸತ್ಯಾಶ್ರಯ ಪೃಥ್ವೀವಲ್ಲಭ ವಿಕ್ರಮಾದಿತ್ಯನಿಕುಂಭ ಶ್ರೀಜಯಶಕ್ತಿ ಶಕ ೬೦೨, ಫಾಲ್ಗುಣ ಬಹುಳ ದಶಮೀ, ಮೀನ ಸಂಕ್ರಾಂತಿಯ ಪುಣ್ಯಮುಹೂರ್ತದಲ್ಲಿ ಕುಂದಲಿಕಾಮಲ

---

[1] *Ep. Ind.* Vol. XIV pp. 144 ff.

[2] *Ibid.* p. 146.

[3] *Ep. Ind.* Vol. X, pp. 100 ff.

[4] ಭಾರತ ಇತಿಹಾಸ ಸಂಶೋಧಕಮಂಡಲ, ತ್ರೈಮಾಸಿಕ, ಶಕ, ೧೮೪೪, ಪುಟ ೧೬೯.

ವಿಷಯದಲ್ಲಿದ್ದ ಸೇಣಾಣಕವೆಂಬ ಗ್ರಾಮವನ್ನು ಬೊಪ್ಪಸ್ವಾಮಿ ಎಂಬ ಬ್ರಾಹ್ಮಣನಿಗೆ ದಾನಮಾಡಿದನು. ಜಯಶಕ್ತಿ ಪ್ರಸಭದಿಂದ ಪರರಾಜರ ಲಕ್ಷ್ಮಿಯನ್ನು ಸೆಳೆದುಕೊಂಡನೆಂದೂ ಪಂಚಮಹಾಶಬ್ದಗಳ ಗೌರವವುಳ್ಳವನೆಂದೂ ವರ್ಣಿಸಲ್ಪಟ್ಟಿದ್ದಾನೆ. ಇವನ ವಂಶಾವಳಿ ಹೀಗೆ ಕೊಟ್ಟಿದೆ. ಸಾಮಂತರಾಜರಿಂದ ಪೂಜಿತನಾದ ಶ್ರೀವಲ್ಲಭ ಭಾನುಶಕ್ತಿಯ ಮಗ ಚಕ್ರವರ್ತಿ ಲಕ್ಷಣೋಪೇತನಾದ ಆದಿತ್ಯಶಕ್ತಿಯ ಮಗ ಸತ್ಯಾಶ್ರಯ ಶ್ರೀಪೃಥ್ವೀವಲ್ಲಭ ನಿಕುಂಭಲ್ಲ ಶಕ್ತಿಯ ಮಗ ಸತ್ಯಾಶ್ರಯ ಪೃಥ್ವೀ-ವಲ್ಲಭ ವಿಕ್ರಮಾದಿತ್ಯನಿಕುಂಭ ಶ್ರೀಜಯಶಕ್ತಿ ಕದಂಬಹರಿವರ್ಮನ ಆನೆಯ ವರ್ಷದಲ್ಲಿ ಭಾನುಶಕ್ತಿ ಎಂಬ ಒಬ್ಬ ಸೇಂದ್ರಕರಾಜನಿದ್ದನೆಂದು ಹಿಂದೆ ಹೇಳಿದ್ದೇವೆ.[1] ಆದಿತ್ಯಶಕ್ತಿಗೆ ಕೊಟ್ಟ 'ಚಕ್ರವರ್ತಿ ಲಕ್ಷಣೋಪೇತ'ವೆಂಬ ವಿಶೇಷಣದಿಂದ ಅವನು ಚಳುಕ್ಯ ಛತ್ರಭಂಗದ ಕಾಲದಲ್ಲಿ ಸ್ವತಂತ್ರನಾಗಲು ಪ್ರಯತ್ನಿಸಿದನೆಂದು ಊಹಿಸಬಹುದು. ಪ್ರಬಲರಾಗುತ್ತಿದ್ದ ಚಳುಕ್ಯರ ಆಧಿಪತ್ಯವನ್ನು ತಪ್ಪಿಸಿಕೊಳ್ಳಲು ಸೇಂದ್ರಕರಿಗೆ ಶಕ್ಯವಾಗಲಿಲ್ಲ. ನಿಕುಂಭಲ್ಲಶಕ್ತಿ ಪುಲಕೇಶಿಯ ಮಾಂಡಲೀಕನಾಗಿಯೂ, ಜಯಶಕ್ತಿ ವಿಕ್ರಮಾದಿತ್ಯನ ಸಾಮಂತನಾಗಿಯೂ ಇದ್ದರೆಂದು ಈ ಶಾಸನದಿಂದ ತಿಳಿಯಬಹುದು.

೧೦. ದಿವ್ಯಗುಡಿ ಶಿಲಾಶಾಸನ.[2]— ವಿಕ್ರಮಾದಿತ್ಯನ ಆಳಿಕೆಯ ೨೭ನೆಯ ವರ್ಷದಲ್ಲಿ (ಕ್ರಿ. ಶ. ೬೮೨) ಮುತ್ತ್ಯಳೂರಲ್ಲಿ ೨೦ ಮರುತರ ಭೂಮಿಯನ್ನು ದಾನಮಾಡಿದಂತೆ ಹೇಳಿದೆ. ವಿಕ್ರಮಾದಿತ್ಯನ ಕಡೆಯ ವರ್ಷದ ಶಾಸನವಿದು.

ಮೇಲಿನ ಶಾಸನಗಳಲ್ಲದೆ ಕೆಳಗೆ ಕಾಣಿಸಿದ ಮೂರು ಕೃತಕ ಶಾಸನಗಳು ವಿಕ್ರಮಾದಿತ್ಯನ ಕಾಲದವು ಇರುತ್ತವೆ.

---

1 ಇವನು ಮೈಸೂರಿನ ಹತ್ತರ ಸೇಂದ್ರಕ ವಿಷಯದಲ್ಲಿದ್ದಿರಬಹುದಾದುದರಿಂದ ಈ ಭಾನುಶಕ್ತಿ ಅವನಿಂದ ಭಿನ್ನನಾಗಿರಬೇಕು. ಶಕ್ತಿ ಎಂಬ ಅಂತಪದದ ಸಾಮ್ಯದಿಂದ ಗುಜರಾಥದ ಸೇಂದ್ರಕರು ಮೈಸೂರಿನ ಸೇಂದ್ರಕರಿಗೆ ಸಂಬಂಧವುಳ್ಳವರಾಗಿರಬೇಕು. ಮತ್ತು ಮೊದಲು ದಕ್ಷಿಣ ದೇಶದಿಂದಲೇ ಅಲ್ಲಿಗೆ ಹೋಗಿರಬೇಕು.

2 H. E. R. 1920, No. 364. ಲಿಪಿದೃಷ್ಟಿಯಿಂದ ಈ ಶಾಸನವು ೧ನೆಯ ವಿಕ್ರಮಾದಿತ್ಯನದಿರಬೇಕು.



(Plate 8) ಬಾದಾಮಿಯ ೩ನೆಯ ವೈಷ್ಣವಗವಿಯ ಮುಂಭಾಗ

೧೧. ಹೈದರಾಬಾದ ತಾಮ್ರಶಾಸನ.[1] — ಇದರಲ್ಲಿ ತಿಥಿನಿರ್ದೇಶವಿಲ್ಲ. ಇದರಲ್ಲಿಯ ವಿಷಯಗಳು ಗದ್ವಾಲ ಶಾಸನದಲ್ಲಿದ್ದಂತೆ ಇರುತ್ತವೆ. ಇದರ ಭಾಷೆ ಲಿಪಿಗಳಿಂದ ಇದನ್ನು ಕೃತಕವೆಂದು ಪಂಡಿತರು ಹೇಳಿದ್ದಾರೆ. ಆದರೂ ಇಲ್ಲಿ ಕೊಟ್ಟ ಸಂಗತಿಗಳು ಇತಿಹಾಸಕ್ಕೆ ಪ್ರತಿಕೂಲವಿಲ್ಲ. ಕಣ್ಣಾವಿಷಯದಲ್ಲಿ ಕಂದುಗಲ್ಲಿನ ಪೂರ್ವ ದಿಕ್ಕಿನಲ್ಲಿದ್ದ ಚಿಂತಕುಂಠವೆಂಬ ಗ್ರಾಮವನ್ನು ರಾಜನು ಬ್ರಾಹ್ಮಣರಿಗೆ ದಾನಮಾಡಿದನೆಂದು ಬರೆದಿದೆ. ಕಂದುಗಲ್ಲು ವಿಜಾಪೂರ ಜಿಲ್ಹೆಯ ಹುನಗುಂದ ತಾಲೂಕಿನಲ್ಲಿದ್ದ ಕಂದಗಲ್ಲಾಗಿರಬಹುದು.

೧೨. ಕುರ್ತಕೋಟಿ ತಾಮ್ರಶಾಸನ.[2] — ವಿಕ್ರಮಾದಿತ್ಯನು ತನ್ನ ೧೬ನೆಯ ವರ್ಷವಾದ ಶಕ ೫೩೨, ವೈಶಾಖ-ಜ್ಯೇಷ್ಠಮಾಸಗಳ ಮಧ್ಯದ ಅಮಾವಾಸ್ಯೆ, ಆದಿತ್ಯವಾರ, ಸೂರ್ಯಗ್ರಹಣದಂದು (ಕ್ರಿ. ಶ. ೬೧೦, ಎಪ್ರಿಲ್ ೨೦, ಮಂಗಳವಾರ[3]) ಬೆಳ್ವಲ ವಿಷಯದಲ್ಲಿಯ ಕುಱಿತಕುಂಟಿ ಗ್ರಾಮವನ್ನು ಬ್ರಾಹ್ಮಣರಿಗೆ ದಾನಮಾಡಿದನು. ಈ ಶಾಸನದ ಲಿಪಿಯು ೧೦ ನೆಯ ಶತಮಾನದ್ದಿರುತ್ತದೆ.

೧೩. ಕರ್ನೂಲ ತಾಮ್ರಶಾಸನ.[4] — ವಿಕ್ರಮಾದಿತ್ಯನು ಕೆಲ ಬ್ರಾಹ್ಮಣರಿಗೆ ಅಗುಂಟಿ ಮತ್ತು ಚೆಬುಂಳಾಪೂರಗಳಲ್ಲಿ ಭೂಮಿಯನ್ನು ಕೊಟ್ಟಂತೆ ಹೇಳಿದೆ. ಇದರಲ್ಲಿ ತಿಥಿನಿರ್ದೇಶವಿಲ್ಲ.

ವಿಕ್ರಮಾದಿತ್ಯನ ತರುವಾಯದಲ್ಲಿ ಅವನ ಮಗನಾದ ವಿನಯಾದಿತ್ಯನು ಸಿಂಹಾಸನವನ್ನೇರಿದನು. ಇವನ ೫ನೆಯ ವರ್ಷವು, ಫೆಬ್ರುವರಿ ೩, ೬೮೭ ಎಂದು ಲಕ್ಷ್ಮೇಶ್ವರ ಶಿಲಾಶಾಸನದಲ್ಲಿ[5] ಹೇಳಿದೆ. ೬೯೨ನೆಯ ಜಾನ್ಯುಅರಿ ೧೦, ಇವನ ೧೧ನೆಯ ವರ್ಷವಾಗುತ್ತದೆ. ೬೯೨ನೆಯ ವರ್ಷದ ಜೂನ ೨೨ನೆಯ ದಿವಸವೂ ೧೧ ನೆಯ ವರ್ಷದಲ್ಲಿ ಬೀಳುತ್ತದೆ.[6] ೪-೬ (ಅಥವಾ ೭)

---

[1] *Ind. Ant.* Vol. VI, P. 75.

[2] *Ind. Ant.* Vol. VII, p. 217.

[3] ಅಂದು ಸೂರ್ಯಗ್ರಹಣವಿರಲಿಲ್ಲ. *Dyn. Kan. Dist.* p. 365, note. 1

[4] *Jour. Bom. Br. R. A. Soc.* Vol. XVI, pp. 229, 240.

[5] *Ind. Ant.* Vol. VII, p. 112.. *Dyn. Kan. Dist.*, p. 368 note. 8

[6] ಸೊರಬ ತಾಮ್ರಶಾಸನ: (*Ind. Ant.* Vol. XIX, p. 146.)

೬೯೩ನೆಯ ತಿಥಿಯು ಅವನ ೧೨ನೆಯ ವರ್ಷದಲ್ಲಿ ಬರುತ್ತದೆ. ಇವುಗಳಿಂದ ವಿನಯಾದಿತ್ಯನ ೧ನೆಯ ವರ್ಷವು, ೯ನೆಯ ಜಾನ್ಯುಅರಿ ಕ್ರಿ. ಶ. ೬೮೨ಕ್ಕಿಂತ ಮುಂಚೆ ಇರಬೇಕೆಂದು ತಿಳಿಯುತ್ತದೆ. ವಿಕ್ರಮಾದಿತ್ಯನು ೨೭ ವರ್ಷಗಳ ಕಾಲ ರಾಜ್ಯವಾಳಿದುದರಿಂದ ಅವನ ಕಡೆಯ ವರ್ಷವು ಏಪ್ರಿಲ ೬೮೧, ಏಪ್ರಿಲ ೬೮೨ ರ ನಡುವೆ ಇರಬೇಕು. ಆದುದರಿಂದ ವಿನಯಾದಿತ್ಯನು ಎಪ್ರಿಲ ೬೮೧, ಜಾನ್ಯುಅರಿ ೬೮೨ ರ ಮಧ್ಯದಲ್ಲಿ ರಾಜನಾಗಿರಬೇಕೆಂದು ಹೇಳಬಹುದು.[1]

ವಿಕ್ರಮಾದಿತ್ಯನು ಕ್ರಿ. ಶ. ೬೮೧ ರಲ್ಲಿ ರಾಜ್ಯವಾಳುತ್ತಿದ್ದನೆಂದು ತಿಳಿದುದರಿಂದ ಮೇಲೆ ಹೇಳಿದಂತೆ ೬೭೮–೬೭೯ ರಲ್ಲಿಯೇ ಅವನು ತನ್ನ ಮಗನಾದ ವಿನಯಾದಿತ್ಯನನ್ನು ಯುವರಾಜನನ್ನಾಗಿ ಮಾಡಿರಬೇಕು.[2] ಯೌವರಾಜ್ಯಾಭಿಷೇಕದ ಕಾಲದಿಂದ ಅವನು ತನ್ನ ಆಳಿಕೆಯನ್ನು ಗಣಿಸಿದನೆಂದು ಮೇಲಿನ ವಿವೇಚನೆಯಿಂದ ಸ್ಪಷ್ಟವಾಗುತ್ತದೆ. ಯೌವರಾಜ್ಯಾಭಿಷೇಕದ ಕಾಲದಿಂದ ಆಳಿಕೆಯ ಗಣನೆಯನ್ನು ಮಾಡುವ ಪದ್ಧತಿಯು ಪ್ರಾಚೀನ ರಾಜರಲ್ಲಿ ಇದ್ದಿತು.

ವಿನಯಾದಿತ್ಯನು ಪಲ್ಲವರನ್ನು ಸೋಲಿಸುವುದರಲ್ಲಿ ತನ್ನ ತಂದೆಗೆ ಸಾಹಾಯ್ಯವನ್ನು ಮಾಡಿದನು. ಇವನ ಶಾಸನಗಳಲ್ಲಿ,[3] ಇವನು ಕಳಭ್ರ, ಕೇರಳ, ಹೈಹಯ, ವಿಳ, ಮಾಳವ, ಚೋಳ, ಪಾಂಡ್ಯ ರಾಜರನ್ನು ಸೋಲಿಸಿ ಅವರನ್ನು ಆಳುಪ ಗಂಗರೊಂದಿಗೆ ಸೇವೆಯಲ್ಲಿ ನೇಮಿಸಿದನೆಂದು ಹೇಳಿದೆ. ೨ನೆಯ ಕೀರ್ತಿವರ್ಮ್ಮನ ವಕ್ಕಲೇರಿ ಶಾಸನದಲ್ಲಿ[4] ಇವನು ಕವೇರ, ಪಾರಸಿಕ, ಸಿಂಹಳಾದಿ ರಾಜರಿಂದ ಕಪ್ಪವನ್ನೆತ್ತಿ ಉತ್ತರಾಪಥದ ರಾಜರನ್ನು ಗೆದ್ದು ಅವರಿಂದ ಪಾಳಿಧ್ವಜಾದಿ ಪಾರಮೈಶ್ವರ್ಯ ಸೂಚಕ ಚಿಹ್ನಗಳನ್ನು ತೆಗೆದು

---

[1] ದಯ್ಯಮದಿನ್ನಿ ತಾಮ್ರಶಾಸನ, 7 of Appendix A — M. E. R. 1915—16. ವಿನಯಾದಿತ್ಯನ ೧ನೆಯ ವರ್ಷವು ಕ್ರಿ. ಶ. ೬೮೧ನೆಯ ವರ್ಷದಲ್ಲಿ ಜೂನ ೨೨, ಜುಲೈ ೪, ರ ಮಧ್ಯದಲ್ಲಿ ಪ್ರಾರಂಭಿಸಿರಬೇಕೆಂದು ಶ್ರೀಮಾನ್ ಪಂಚಮುಖಿಯವರು ಸಪ್ರಮಾಣವಾಗಿ ತೋರಿಸಿದ್ದಾರೆ. (*Ep. Ind.* Vol. XXII, p. 25), ಮತ್ತು ಕ್ರಿ. ಶ. ೬೭೮-೬೭೯ ರ ಮಧ್ಯದಲ್ಲಿ ವಿಕ್ರಮಾದಿತ್ಯನು ವಿನಯಾದಿತ್ಯನನ್ನು ಯುವರಾಜನನ್ನಾಗಿ ನೇಮಿಸಿರಬೇಕೆಂದು ವಿನಯಾದಿತ್ಯನ ಎಲ್ಲ ಶಾಸನಗಳ ಕಾಲಗಳ ಪರಿಶೀಲನೆಯಿಂದ ನಿರ್ಧಾರಿಸಿದ್ದಾರೆ.

[2] ಇದು 'ತ್ರೈರಾಜ್ಯಪಲ್ಲವಬಲ' ಪರಾಜಯದ ಕಾಲದಲ್ಲಿ ಆಗಿರಬೇಕು. (*Ep. Ind.* Vol. XXII, p. 28. f.)

[3] *Ind. Ant.* Vol. VII, pp. 87, 88, 303.

[4] *Ind. Ant.* Vol. VIII, p. 23.

ಕೊಂಡನೆಂದು ಬರೆದಿದೆ. ಈ ಉತ್ತರಾಪಥದ ರಾಜರಲ್ಲಿ ವಜ್ರಟನೊಬ್ಬನಿರ ಬೇಕೆಂದು ಫ್ಲೀಟರು ಅಭಿಪ್ರಾಯಪಟ್ಟಿದ್ದಾರೆ.[1]

ವಿನಯಾದಿತ್ಯನಿಗೆ ರಾಜಾಶ್ರಯನೆಂಬ ಬಿರುದು ಇತ್ತೆಂದು ಬಳಗಾಂವೆ ಶಿಲಾಶಾಸನದಲ್ಲಿ ಬರೆದಿದೆ. ೫ನೆಯ ವಿಕ್ರಮಾದಿತ್ಯನ ಕೌಠೇಂ ತಾಮ್ರಶಾಸನ ದಿಂದ[2] ಅವನಿಗೆ ಯುದ್ಧಮಲ್ಲ ಎಂಬ ಬಿರುದೂ ಇತ್ತೆಂದು ಗೊತ್ತಾಗುತ್ತದೆ. ಇವನಿಗೆ ವಿಜಯಾದಿತ್ಯನೆಂಬ ಮಗನಲ್ಲದೆ ಕುಂಕುಮಮಹಾದೇವಿ ಎಂಬ ಮಗಳಿದ್ದಂತೆ ೧೧ನೆಯ ಶತಮಾನದ ಗುಡಿಗೇರಿ ಶಾಸನದಲ್ಲಿ ಹೇಳಿದೆ. ಇವಳು ಆನೆಸೆಜ್ಜೆ ಬಸದಿಯನ್ನು ಕಟ್ಟಿಸಿದಳೆಂದು ಈ ಶಾಸನದಿಂದ ತಿಳಿಯುತ್ತದೆ.

**ವಿನಯಾದಿತ್ಯನ ಶಾಸನಗಳು :**

೧. ಲಕ್ಷ್ಮೇಶ್ವರ ಶಿಲಾಶಾಸನ.[3]— ರಾಜನು ರಕ್ತಪುರದ ನೆಲೆವೀಡಿನಲ್ಲಿದ್ದಾಗ ತನ್ನ ಆಳಿಕೆಯ ೫ನೆಯ ವರ್ಷವಾದ ಶಕ ೬೦೮ರ ಮಾಘ ಪೌರ್ಣೆಮೆಯ ದಿನದಲ್ಲಿ ( ಸು. ಕ್ರಿ. ಶ. ೬೮೬, ಜಾನ್ಯುಅರಿ ೨೦ ) ಮೂಲ ಸಂಘ ದೇವಗಣದ ಒಬ್ಬ ಆಚಾರ್ಯನಿಗೆ ಭೂದಾನಮಾಡಿದನು. ಲಕ್ಷ್ಮೇಶ್ವರವೇ ಈ ರಕ್ತಪುರವೆಂದು ಫ್ಲೀಟರು ಹೇಳುವುದು ಸರಿಯಾಗಿ ತೋರುವುದಿಲ್ಲ. ರಕ್ತಪುರವು ಕಿಸುವೊಳಲ (=ಪಟ್ಟದಕಲ್ಲು ) ಸಂಸ್ಕೃತರೂಪವೆಂದು ತೋರುತ್ತದೆ. ಈ ಶಾಸನದ ಲಿಪಿಯು ೧೦–೧೧ನೆಯ ಶತಮಾನದ್ದಾದುದರಿಂದ ಹಳೆಯ ತಾಮ್ರಶಾಸನದ ಆಧಾರದಿಂದ ಇದನ್ನು ಕಲ್ಲಮೇಲೆ ಬರೆದಿರಬಹುದು.

೨. ಜೆಜೂರಿ ತಾಮ್ರಶಾಸನ.[4]— ವಿನಯಾದಿತ್ಯನು ತನ್ನ ಆಳಿಕೆಯ ೯ನೆಯ ವರ್ಷವಾದ ಶಕ ೬೦೯ ( ಸಂದ ) ರಲ್ಲಿ ಆಷಾಢ ಪೌರ್ಣಿಮೆಯಂದು ( ಕ್ರಿ. ಶ. ೬೮೭ ) ಪಳೆಯಟ್ಟಾಣದ ಸಮೀಪದಲ್ಲಿದ್ದ ಭಾಡಲಿ ಗ್ರಾಮದಲ್ಲಿದ್ದಾಗ ಭಮ್ಮಣರಾಜನ ವಿಜ್ಞಾಪನೆಯಿಂದ ಅಲ್ಲಶರ್ಮನೆಂಬ

[1] ಕ್ರಿ. ಶ. ೬೨೫ರಲ್ಲಿ ವರ್ಮಲಾತರಾಜನಿಗೆ ವಜ್ರಭಟ ಸತ್ಯಾಶ್ರಯನೆಂಬ ಒಬ್ಬ ಮಾಂಡಲಿಕನಿದ್ದನು. ಇವನು ಅಬೂಪರ್ವತದಲ್ಲಿ ಆಳುತ್ತಿದ್ದನು. ( *Ep. Ind.* Vol. IX. p. 189 ).

[2] *Ind. Ant.* Vol. XVI, p. 15.

[3] *Ind. Ant.* Vol. VII. p. 112.

[4] *Ep. Ind.* Vol. XIX, p. 62.

ಬ್ರಾಹ್ಮಣನಿಗೆ ಪಳಯಟ್ಠಾಣ ವಿಷಯದ ಸಾ (?) ತಿವಾಳ ಭೋಗದಲ್ಲಿ ನೀರಾನದಿಯ ಉತ್ತರತಟದಲ್ಲಿದ್ದ ನೀರನಾಮಗ್ರಾಮವನ್ನು ದಾನಮಾಡಿದನು. ಈ ಶಾಸನದಲ್ಲಿ ವಿನಯಾದಿತ್ಯನು ಪಲ್ಲವ ಕಳಭ್ರಾದಿ ರಾಜರನ್ನು ಸೋಲಿಸಿದ್ದನೆಂದು ಬರೆದಿದೆ. ಪಳಯಟ್ಠಾಣವು ಪುಣೆಯ ಸಮೀಪದಲ್ಲಿದ್ದ ಈಗಿನ ಫಲ್ಟನ್. ಇದರ ಸಮೀಪದಲ್ಲಿದ್ದ ಬುದ್ಧೀಬುದ್ರುಕವೇ ಭಾಡಲಿಗ್ರಾಮವು. ವೀರಗ್ರಾಮವೂ, ನೀರಾನದಿಯೂ ಅವೇ ಹೆಸರುಗಳಿಂದ ಈಗಲೂ ಪ್ರಸಿದ್ಧವಾಗಿವೆ.

೩. ತೊಗರ್ಚೇಡು (ಕರ್ನೂಲ ಜಿಲ್ಲೆ) ತಾಮ್ರಶಾಸನ.[1]— ರಾಜನು ತನ್ನ ೧೦ನೆಯ ವರ್ಷವಾದ ಶಕ ೬೧೧ ರ ಕಾರ್ತಿಕ ಪೌರ್ಣಿಮೆಯ ದಿನ ಪಂಪಾತೀರ್ಥದ (ಹಂಪೆಯ) ನೆಲೆವೀಡಿನಲ್ಲಿದ್ದಾಗ ಪೆಡೆಕಲ್ಲಿ ವಿಷಯದ ತೊಗೊಚ್ಚೇಡು ಗ್ರಾಮದಲ್ಲಿ ಭೂಮಿಯನ್ನೂ ಗಳ್ಳವೆಳಂಡವು, ಎರೆಯೂರ್, ಬಟ್ಟೆಯೂರುಗಳಲ್ಲಿ ಭೂಮಿಯನ್ನೂ ಬ್ರಾಹ್ಮಣನಿಗೆ ದಾನಮಾಡಿದನು.

೪. ಕರ್ನೂಲ ತಾಮ್ರಶಾಸನ.[2]— ರಾಜನು ತನ್ನ ೧೧ನೆಯ ವರ್ಷವಾದ ಶಕ ೬೧೩ ರ ಮಾಘ ಪೌರ್ಣಿಮೆಯ ದಿನದಲ್ಲಿ ಎಟ್ಟುಂಪುದಲೆ ನೆಲೆವೀಡಿನಲ್ಲಿದ್ದು ಯುವರಾಜ ವಿಜಯಾದಿತ್ಯನ ವಿಜ್ಞಾಪನೆಯ ಮೇರೆಗೆ ಕೃಷ್ಣವೇಣ್ಣಾನದಿಯ ಉತ್ತರ ದಂಡೆಯಲ್ಲಿ ವೆಲಹಿಣಜು ಭಾಗದಲ್ಲಿ ಮುಸುಣಿಪರು ಗ್ರಾಮವನ್ನೂ, ಕದುವಪವೆಪು, ಸಿಹುಕೂರ, ಸತ್ತಿಕ್ಕರವೆಂಬ ಗ್ರಾಮಗಳಲ್ಲಿ ಕೆಲಭೂಮಿಯನ್ನೂ ಬ್ರಾಹ್ಮಣರಿಗೆ ಕೊಟ್ಟನು.

೫. ಸೊರಬ ತಾಮ್ರಶಾಸನ.[3]— ರಾಜನು ತನ್ನ ೧೧ನೆಯ ವರ್ಷವಾದ ಶಕ ೬೧೪ ರ ದಕ್ಷಿಣಾಯನ ಸಂಕ್ರಾಂತಿ, ಶನಿವಾರ ಪುಣ್ಯತಿಥಿಯಲ್ಲಿ ತೋರಮಾರ ವಿಷಯದಲ್ಲಿಯ ಚಿತ್ರಸೇಡು ಗ್ರಾಮದಲ್ಲಿ ಬೀಡುಬಿಟ್ಟಾಗ ಆಳುಪರಾಜನಾದ ಗುಣಸಾಗರನ ಮಗ ಚಿತ್ರವಾಹನನ ವಿಜ್ಞಾಪನೆಯ ಮೇರೆಗೆ ವೈಜಯಂತಿಯ ಈಶಾನ್ಯ ದಿಕ್ಕಿನಲ್ಲಿದ್ದ ಎಡೆವೊಳಲ್ ವಿಷಯದ ಸಾಲಿವೊಗೆ ಗ್ರಾಮವನ್ನು ಒಬ್ಬ ಬ್ರಾಹ್ಮಣನಿಗೆ ಕೊಟ್ಟನು.

---

[1] *Jour. Bom. Br. R. A. Soc.* Vol. XVI, pp. 231, 242.
[2] *Ind. Ant.* Vol. VI, p. 88.
[3] *Int. Ant.* Vol. XIX, p. 146.

೬. ಸುರತ ತಾಮ್ರಶಾಸನ.[1]— ( ಕಲಚುರಿ ವರ್ಷದ ) ೪೪೩ ( ಸಂದ ), ಶ್ರಾವಣ ಪೌರ್ಣಿಮೆಯ ದಿನದಲ್ಲಿ ( ಕ್ರಿ. ಶ. ೬೯೨, ಅಗಸ್ಟ ೩ ) ವಿಕ್ರಮಾದಿತ್ಯನ ತಮ್ಮನ ಮಗನಾದ ಯುವರಾಜ ಸತ್ಯಾಶ್ರಯ ಶೀಲಾದಿತ್ಯನು ಕಾರ್ಮಣೇಯದ ಸಮೀಪದಲ್ಲಿದ್ದ ಕುಸುಮೇಶ್ವರದಲ್ಲಿ ಬೀಡು ಬಿಟ್ಟಾಗ ಕಾರ್ಮಣೇಯಾಹಾರ ವಿಷಯದಲ್ಲಿದ್ದ ಅಲ್ಲೂರಕದ ಪಶ್ಚಿಮಕ್ಕೆ ಓಸಂಭಲಾ ಗ್ರಾಮದಲ್ಲಿ ಬ್ರಾಹ್ಮಣನಿಗೆ ಭೂಮಿಯನ್ನು ದಾನಮಾಡಿದನು. ಕಾರ್ಮಣೇಯವು ಬಡೋದಾ ಸಂಸ್ಥಾನದಲ್ಲಿ ಸುರತ ಸಮೀಪದಲ್ಲಿದ್ದ ಕಾಮ್ರೇಜ, ಓಸುಂಭಲಾ ಉಂಭೇಲವು. ಅಲ್ಲಿಯೇ ಪಕ್ಕದಲ್ಲಿದ್ದ ಅಲುರಾ, ಅಲ್ಲೂರಕವು.

೭. ದಯ್ಯಮದಿನ್ನಿ ತಾಮ್ರಶಾಸನ.[2]— ರಾಜನು ತನ್ನ ೧೨ನೆಯ ವರ್ಷವಾದ ಶಕ ೬೧೪ ರ ಆಷಾಢ ಪೌರ್ಣಿಮೆಯ ದಿನದಲ್ಲಿ ( ಕ್ರಿ. ಶ. ೬೯೨, ಜುಲೈ ೪ ) ತಗರ ನದಿಯ ಉತ್ತರ ತಟದಲ್ಲಿ ತಳಯಖೇಟ ಗ್ರಾಮದಲ್ಲಿ ಬೀಡು ಬಿಟ್ಟಾಗ ನಾಲ್ವರು ಬ್ರಾಹ್ಮಣರಿಗೆ ನಳವಾಡಿ ವಿಷಯದಲ್ಲಿದ್ದ ವುಳ್ಚಿಡ ಗ್ರಾಮದಲ್ಲಿ ೨೦೦ ನಿವರ್ತನ ಭೂಮಿಯನ್ನು ದಾನಮಾಡಿದನು. ತಗರನದಿ ನಿಜಾಂ ಪ್ರಾಂತದಲ್ಲಿಯ ಈಗಿನ ತೇರನದಿ. ಇದರ ಉತ್ತರ ದಂಡೆಯ ಮೇಲಿದ್ದ ತೈರಖೇಡವೇ ತಳಯಖೇಟವಾಗಿರಬಹುದು.

೮. ಹರಿಹರ ತಾಮ್ರಶಾಸನ.[3]— ರಾಜನು ತನ್ನ ೧೪ನೆಯ ವರ್ಷವಾದ ಶಕ ೬೧೬, ಕಾರ್ತ್ತಿಕ ಪೌರ್ಣಿಮೆಯ ದಿನದಲ್ಲಿ ಹರೇ ( ರಿ ) ಷಪುರದ ಸಮೀಪದಲ್ಲಿದ್ದ ಕರಂಜ ಪತ್ರದಲ್ಲಿ ಬೀಡುಬಿಟ್ಟಾಗ ಆಳುವ ರಾಜನ ವಿಜ್ಞಾಪನೆಯ ಮೇರೆಗೆ ವನವಾಸಿ ಮಂಡಲದ ಎಡೆವೊಳಲ್ ಭೋಗದಲ್ಲಿದ್ದ ಕಿಱುಕಾಗಾಮಾಸಿ ಎಂಬ ಗ್ರಾಮವನ್ನೂ ಪೆರ್ಗಾಗಾಮಾಸಿ ಗ್ರಾಮದಲ್ಲಿ ಭೂಮಿಯನ್ನೂ ಬ್ರಾಹ್ಮಣನಿಗೆ ದಾನಮಾಡಿದನು. ಹರೇ ( ರಿ ) ಷ ಪುರವು ಈಗಿನ ಹರಿಹರವು. ಅದರ ಸಮೀಪದಲ್ಲಿದ್ದ ಕರಂಜ ಪತ್ರವು ಹಾವೇರಿ ತಾಲೂಕಿಗೆ ಸೇರಿದ ಈಗಿನ ಕರ್ಜಗಿ.

---

[1] *Proceedings of the Aryan Section of the Seventh International Congress of Orientalists*, p. 225.

[2] M. E. R. 1915-16, No. 7 of A. ಇದನ್ನು ಶ್ರೀ. ಪಂಚಮುಖಿಯವರು *Ep. Ind.* Vol. XXII, p. 24 ರಲ್ಲಿ ಪ್ರಸಿದ್ಧಿಸಿದ್ದಾರೆ.

[3] *Ind. Ant.* Vol. VII, p. 300.

೯. ಬಳಗಾಂವೆ ಶಿಲಾಶಾಸನ.[1]— ಇದರಲ್ಲಿ ತಿಥಿ ನಿರ್ದೇಶವಿಲ್ಲ. ಸೇಂದ್ರಕ ಮಹಾರಾಜನಾದ ಪೊಗಿಲ್ಲ, ನಾಯರಖಂಡ, ಜೆಡುಗೂರುಗಳನ್ನಾಳು-ತ್ತಿದ್ದಾಗ ಕಾಂದರ್ಬನೆಂಬ ಅಧಿಕಾರಿ ತನಗೆ ಪಟ್ಟಗಟ್ಟಿದ ಸಮಯದಲ್ಲಿ ಕೆಲ ಸುಂಕಗಳನ್ನು ಬಿಟ್ಟನು. ಬನವಾಸಿ ೧೨೦೦೦ ಪ್ರಾಂತದಲ್ಲಿದ್ದ ನಾಗರಖಂಡ– ೭೦ತ್ತೇ ಈ ನಾಯರ ಖಂಡವು. ಸೊರಬ ತಾಲೂಕಿನಲ್ಲಿದ್ದ ಜೆಡ್ಡವು ಜೆಡಗೂರಾಗಿರಬಹುದು.

ವಿನಯಾದಿತ್ಯನ ಮಗನಾದ ವಿಜಯಾದಿತ್ಯನು ಕ್ರಿ. ಶ. ೬೯೬ರಲ್ಲಿ ರಾಜನಾದನು. ಇವನ ೧೩ನೆಯ ವರ್ಷದ ೩ನೆಯ ತಿಂಗಳು ೨೩ನೆಯ ಅಕ್ಟೋಬರ, ೭೦೮ ಆದುದರಿಂದ[2] ಪಟ್ಟಬಂಧವು ಕ್ರಿ. ಶ. ೬೯೬ ರ ಜುಲೈಯಲ್ಲಿ ಆಗಿರಬೇಕು.

ಇವನು ಬಾಲ್ಯದಲ್ಲಿಯೇ ಅಸ್ತ್ರಶಾಸ್ತ್ರದಲ್ಲಿ ನೈಪುಣ್ಯವನ್ನು ಪಡೆದಿದ್ದನು. ಇವನು ತನ್ನ ಅಜ್ಜನಾದ ೧ನೆಯ ವಿಕ್ರಮಾದಿತ್ಯನು ದಕ್ಷಿಣ ದಿಗ್ವಿಜಯಕ್ಕೆ ಹೋದಾಗ ತನ್ನ ದೇಶದಲ್ಲಿ ಎದ್ದ ದಂಗೆಗಳನ್ನು ಮುರಿಬಡಿದನು. ತನ್ನ ತಂದೆಯೊಂದಿಗೆ ಉತ್ತರ ದಿಗ್ವಿಜಯಕ್ಕೆ ಹೋದಾಗ ಅಲ್ಲಿ ತಂದೆಗಿಂತಲೂ ಮುಂದೆ ಒಳಸುಗ್ಗಿ ಶತ್ರುರಾಜರಿಂದ ಗಂಗಾ ಯಮುನಾ ಪಾಳಿಧ್ವಜ ಪಡಥಕ್ಕಾ ಮಹಾಶಬ್ದ ಚಿನ್ಹಗಳನ್ನು ಮಾಣಿಕ್ಯ ಮತಂಗಜಾದಿಗಳನ್ನೂ ಕಸಿದುಕೊಂಡನು. ಹೀಗೆ ಹೋರಾಡುತ್ತಿರುವಾಗ ಒಂದು ಪ್ರಸಂಗದಲ್ಲಿ ಇವನು ಶತ್ರುಗಳ ಕೈಸೆರೆ ಸಿಕ್ಕಿದ್ದರೂ ತನ್ನ ಪರಾಕ್ರಮದಿಂದಲೇ ಬಂಧವಿಮೋಚನೆಯನ್ನು ಮಾಡಿಕೊಂಡು ಆ ಅವಧಿಯಲ್ಲಿ ತನ್ನ ರಾಜ್ಯದಲ್ಲಿ ಎದ್ದ ಬಂಡುಗಾರರನ್ನು ಅಡಗಿಸಿ ದೇಶದಲ್ಲಿ ಶಾಂತತೆಯನ್ನು ನೆಲೆಗೊಳಿಸಿದನು. ವಿಜಯಾದಿತ್ಯನಿಗೆ 'ಸಾಹಸರಸಿಕ' ಎಂಬ ಬಿರುದು ಇತ್ತು. ಇವನು ರಾಜಧಾನಿಯಾದ ವಾತಾಪಿನಗರಿಯಲ್ಲಿ ಬ್ರಹ್ಮವಿಷ್ಣುಮಹೇಶ್ವರರನ್ನು ಪ್ರತಿಷ್ಠೆಮಾಡಿದನು. ಪಟ್ಟದಕಲ್ಲಿನಲ್ಲಿ ಅದ್ಭುತವಾದ ವಿಜಯೇಶ್ವರ ದೇವಾಲಯವನ್ನು ಕಟ್ಟಿಸಿದನು. ಇದಕ್ಕೆ ಈಗ ಸಂಗಮೇಶ್ವರ ದೇವಾಲಯವೆಂದು ಹೆಸರಿದೆ. ವಿಜಯಾದಿತ್ಯನು ತನ್ನ ತಂದೆಯ ಗುರುವಾದ ನಿರವದ್ಯ ಅಥವಾ ಉದಯದೇವ ಪಂಡಿತನಿಗೆ ಪುಲಿಕರ ನಗರದ ಸಮೀಪದಲ್ಲಿದ್ದ ಕರ್ದಮವೆಂಬ ಗ್ರಾಮವನ್ನು ಶಂಖಜಿನೇಂದ್ರಾಲಯದಲ್ಲಿ ಪೂಜಾರಿ

---

[1] *Jour. Bom. Br. R. A. Soc.* Vol. XIX, p. 142.

[2] ಐಹೊಳೆ ಶಾಸನ, ಮುಂದೆ ೮೮ನೆಯ ಪುಟದಲ್ಲಿ ನೋಡಿರಿ.

ಳಿಗೋಸ್ಕರ ಕೊಟ್ಟನೆಂದು ಅವನ ೩ಳನೆಯ ವರ್ಷದ ಲಕ್ಷ್ಮೇಶ್ವರ ಶಿಲಾ ಾಸನದಲ್ಲಿ ಹೇಳಿದೆ. ಉದಯದೇವ ಪಂಡಿತನು ಪೂಜ್ಯಪಾದನ ಶಿಷ್ಯನೆಂದು ರೆದಿದೆ. ಈ ಪೂಜ್ಯಪಾದನು ಜೈನೇಂದ್ರ ವ್ಯಾಕರಣ ಕರ್ತನಾದ ಪೂಜ್ಯಪಾದ ಾಗಿರಬಹುದು. ವಿಜಯಾದಿತ್ಯನಿಗೆ ನಿರವದ್ಯವೆಂಬ ಬಿರುದು ಇತ್ತು.

**ಜಯಾದಿತ್ಯನ ಶಾಸನಗಳು:**

೧. ಬಾದಾಮಿಯ ಶಿಲಾಶಾಸನ.[1]— ವಿಜಯಾದಿತ್ಯನ ೩ನೆಯ ವರ್ಷವಾದ ಶಕ ೬೨೧ ರ ಜ್ಯೇಷ್ಠ ಪೌರ್ಣಿಮೆಯ ದಿನದಲ್ಲಿ (೨೦ನೆಯ ಮೇ, ೬೯೯) ವಾತಾಪಿಯಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರನ್ನು ಪ್ರತಿಷ್ಠೆಮಾಡಿದನು. ಶಾಸನದಲ್ಲಿ ಸಂಸ್ಕೃತ ಭಾಗವು ಮುಗಿದ ಮೇಲೆ ಇದ್ದ ಕೆಲ ಕನ್ನಡ ಪದ್ಯಗಳು ಈಗ ಅಳಿಸಿಹೋಗಿವೆ. ಅದರಲ್ಲಿ ವಾತಾಪಿಯ ಪ್ರಾಕೃತ ರೂಪವಾದ ಬಾದಾವಿ ಎಂಬ ಶಬ್ದವು ಮಾತ್ರ ಕಾಣಿಸುತ್ತದೆ ಈ ಕನ್ನಡ ಪದ್ಯಗಳ ಭಾಷೆ ಪ್ರಾಕೃತವೆಂದು ಕರೆಯಲ್ಪಟ್ಟಿದೆ.

೨. ನೇರೂರು ತಾಮ್ರಶಾಸನ.[2]— ವಿಜಯಾದಿತ್ಯನು ತನ್ನ ೪ನೆಯ ವರ್ಷವಾದ ಶಕ ೬೨೨ ರ ಆಷಾಢ ಪೌರ್ಣಿಮೆಯಂದು ರಾಸೆನನಗರ ದಲ್ಲಿದ್ದಾಗ ನಂಡೆಚಿಯನ ವಿಜ್ಞಾಪನೆಯ ಮೇರೆಗೆ ಒಬ್ಬ ಬ್ರಾಹ್ಮಣನಿಗೆ ಇರಿದಿಗೆ ವಿಷಯದಲ್ಲಿ ಏಹಿಗೆನದಿಯ ದಂಡೆಯಲ್ಲಿದ್ದ ಬಳ್ಳಾವಳ್ಳಿ ಸಹಮ್ಯ ಪುರಗಳ ಮಧ್ಯದಲ್ಲಿದ್ದ ನೇರೂರು ಗ್ರಾಮವನ್ನು ದಾನಮಾಡಿದನು. ರಾಸೆನವು ಅಹಮ್ಮದನಗರ ಜಿಲ್ಹೆಯ ಕರ್ಜತ್ ತಾಲೂಕಿನಲ್ಲಿದ್ದ ರಾಸೀನ್. ಇರಿದಿಗೆ ವಿಷಯವು ಕೊಂಕಣದಲ್ಲಿದ್ದ ರತ್ನಾಗಿರಿ ಜಿಲ್ಹೆ, ಸಾವಂತವಾಡಿ ಸಂಸ್ಥಾನಗಳು. ನೆರೂರು ಈಗಲೂ ಆ ಹೆಸರಿನಿಂದಲೇ ಪ್ರಸಿದ್ಧವಿದೆ.

೩. ರಾಯಗಡ ತಾಮ್ರಶಾಸನ.[3]— ವಿಜಯಾದಿತ್ಯನು ತನ್ನ ೮ನೆಯ ವರ್ಷವಾದ ಶಕ ೬೨೫ ರ ಮಹಾಷ್ಟಮೀ ದಿನದಲ್ಲಿ ಕರಹಾಟನಗರದಲ್ಲಿ ಬೀಡುಬಿಟ್ಟಾಗ ಒಬ್ಬ ಬ್ರಾಹ್ಮಣನಿಗೆ ತಾಲಿತಟಾಹಾರ ವಿಷಯದಲ್ಲಿ ಜಲ್ಲ ಗ್ರಾಮವನ್ನೂ, ವಿನಿರೂಲಣ ಗ್ರಾಮವನ್ನೂ ದಾನಮಾಡಿದನು.

---

1 *Ind. Ant.* Vol. X, p. 60.

2 *Ind. Ant.* Vol. IX, p. 125.

3 *Ep. Ind.* Vol. X, pp. 146 f.

೪. ಏಲಾಪೂರ ತಾಮ್ರಶಾಸನ.[1]— ವಿಜಯಾದಿತ್ಯನು ತನ್ನ ೯ನೆಯ ವರ್ಷವಾದ ಶಕ ೬೨೬ ರ ಪೌಷ ಪೌರ್ಣಿಮೆಯ ದಿನದಲ್ಲಿ ಏಲಾಪೂರದ ನೆಲೆ-ಬೀಡಿನಲ್ಲಿದ್ದಾಗ ಕೊಲ್ಲಗಿರವಾಸ್ತವ್ಯನಾದ ಕೇಶವಸ್ವಾಮಿ ಎಂಬ ಬ್ರಾಹ್ಮಣನಿಗೆ ಅಲಕೂರ ವಿಷಯದಲ್ಲಿ ಬಹ್ಮಣವಾಟ ಗ್ರಾಮವನ್ನು ದಾನಮಾಡಿದನು. ಏಲಾಪುರವು ಔರಂಗಾಬಾದ ತಾಲೂಕಿನಲ್ಲಿದ್ದ ವೇರೂಳವು.

೫. ನೇರೂರ ತಾಮ್ರಶಾಸನ.[2]— ವಿಜಯಾದಿತ್ಯನು ತನ್ನ ೧೦ನೆಯ ವರ್ಷವಾದ ಶಕ ೬೨೭ ರ ಮಹಾಸಪ್ತಮೀ ದಿನದಲ್ಲಿ ಉಪೇಂದ್ರನ ವಿಜ್ಞಾಪನೆಯ ಮೇರೆಗೆ ಇರಿದಿಗೆ ವಿಷಯದಲ್ಲಿ ಹಿಕುಳಂಬ ಗ್ರಾಮವನ್ನು ಕೆಲ ಬ್ರಾಹ್ಮಣರಿಗೆ ದಾನಮಾಡಿದನು.

೬. ಐಹೊಳೆ ಶಿಲಾಶಾಸನ.[3]— ರಾಜನು ತನ್ನ ೧೩ನೆಯ ವರ್ಷದ ೩ನೆಯ ತಿಂಗಳಿನಲ್ಲಿ ಅಶ್ವಯುಜ ಶುಕ್ಲಪಕ್ಷ ವಿಷುವದಲ್ಲಿ ( ೨೩ನೆಯ ಸಪ್ಟೆಂಬರ, ೭೦೮ ) ದಾನಗಳನ್ನು ಮಾಡಿದನು.

೭. ಕೊಂಡಪಲ್ಲಿ ಶಿಲಾಶಾಸನ.[4]— ವಿಜಯಾದಿತ್ಯನ ೨೩ನೆಯ ವರ್ಷದಲ್ಲಿ ಬಲಿಕುಲತಿಲಕ ನರಸಿಂಹ ಬಾಣಾಧಿರಾಜನ ಮಗ ವಿಕ್ರಮಾದಿತ್ಯ ಬಲಿ ಇಂದ್ರ ಬಾಣರಾಜನ ಆಧಿಪತ್ಯಕ್ಕೆ ಸೇರಿದ ತುರಮಾರ ವಿಷಯದ ಮಾಂಡಲಿಕರಿಗೂ ಪುಲಗಿಚೆಱುವಿನಲ್ಲಿ ಭೂಮಿಯನ್ನು ಪಾದಿಶರ್ಮರಿಗೆ ಕೊಟ್ಟಂತೆಯೂ ಹೇಳಿದೆ. ತೊರಮಾರ ವಿಷಯವು ವಿನಯಾದಿತ್ಯನ ಸೊರಬಶಾಸನದಲ್ಲಿ ಬಂದಿದೆ.

೮. ಲಕ್ಷ್ಮೇಶ್ವರ ಶಿಲಾಶಾಸನ.[5]— ವಿಜಯಾದಿತ್ಯನು ತನ್ನ ೨೮ನೆಯ ವರ್ಷವಾದ ಶಕ ೬೪೫, ಭಾದ್ರಪದ ಪೌರ್ಣಿಮೆ ಸರ್ವಗ್ರಾಸ ಚಂದ್ರ ಗ್ರಹಣ ಸಮಯದಲ್ಲಿ (೨೦ನೆಯ ಅಗಸ್ಟ, ೭೨೩) ರಕ್ತಪುರದಲ್ಲಿದ್ದಾಗ

[1] *Indian Historical Quarterly*, Vol. IV, p. 425.

[2] *Ind. Ant.* Nol. IX. p. 130.

[3] *Ind. Ant.* Vol. VIII, p. 284.

[4] M. E. R. 1924, No. 364.

[5] *Ind. Ant.* Vol. VII, p. 112. *Dyn. Kan. Dist.* p. 373 Note 1.

ಪುಲಿಕರ ನಗರದ ದಕ್ಷಿಣಕ್ಕಿದ್ದ ಸೆಂಬೊಳರು ಗ್ರಾಮವನ್ನು ಮೂಲ ಸಂಘದ ರಾಮದೇವಾಚಾರ್ಯನ ಧರ್ಮತನಯನಾದ ಜಯದೇವ ಪಂಡಿತನಿಗೆ ಶಂಖಜಿನಾಲಯದಲ್ಲಿದ್ದ ಜಿನಭಟ್ಟಾರಕ ದೇವರ ಪೂಜಾರ್ಥ ವಾಗಿ ಕೊಟ್ಟನು. ಪುಲಿಕರವು ಪುಲಿ (ರಿ) ಗೆಜ್ಜೆ.

೯. ಲಕ್ಷ್ಮೇಶ್ವರ ಶಿಲಾಶಾಸನ.[1]— ವಿಜಯಾದಿತ್ಯನು ತನ್ನ ೩೪ನೆಯ ವರ್ಷ ವಾದ ಶಕ ೬೫೧ ಫಾಲ್ಗುಣ ಪೌರ್ಣಿಮೆಯ ದಿನದಲ್ಲಿ ತನ್ನ ಕುಲಗುರು ವಾದ ಉದಯದೇವಪಂಡಿತನಿಗೆ ಕರ್ದಮಗ್ರಾಮವನ್ನು ದಾನ ಮಾಡಿದನು.

೧೦. ಮಹಾಕೂಟ ಶಿಲಾಶಾಸನ.[2]— ವಿಜಯಾದಿತ್ಯನ 'ಪ್ರಾಣವಲ್ಲಭೆ' ಯಾದ ಸೂಳೆ ವಿನಾಪೋಟಿ, ದೇವರಿಗೆ ರತ್ನಪೀಠವನ್ನೂ ಬೆಳ್ಳಿಯ ಪೀಠವನ್ನೂ ಕೊಟ್ಟು ಪೂಜಾದಿಗಳಿಗೋಸ್ಕರ ಭೂಮಿಯನ್ನು ಕೊಟ್ಟಳು.

೧೧. ನೇರೂರ ತಾಮ್ರಶಾಸನ.[3]— ಮಹಾರಾಜಾಧಿರಾಜ ಪರಮೇಶ್ವರ ವಿಜಯಾದಿತ್ಯನ ಅಪ್ಪಣೆಯನ್ನು ಪಡೆದು ಮಹಾರಾಜಾಧಿರಾಜ ಪರಮೇಶ್ವರ ವಿಕ್ರಮಾದಿತ್ಯನು ಒಬ್ಬ ಬ್ರಾಹ್ಮಣನಿಗೆ ಮಟಿವ್ರುರ ಗ್ರಾಮ ವನ್ನು ಕೊಟ್ಟನೆಂದು ಹೇಳಿದೆ. ಭಾಷೆಲಿಪಿಗಳ ಅಸಂಬದ್ಧತೆಯಿಂದಲೂ, ವಿಜಯಾತ್ಯ ವಿಕ್ರಮಾದಿತ್ಯರಿಗೆ ಏಕಕಾಲದಲ್ಲಿ ಪರಮೇಶ್ವರರೆಂದು ಬಿರುದು ಕೊಟ್ಟುದರಿಂದಲೂ ಈ ಶಾಸನವು ಕೃತಕವೆಂದು ಆಕ್ಷೇಪಿಸಬಹುದು. ಇದರಲ್ಲಿ ತಿಥಿ ನಿರ್ದೇಶವಿಲ್ಲ.

೧೨. ಬಲ್ಸಾರ ತಾಮ್ರ ಶಾಸನ.[4]— ವಿನಯಾದಿತ್ಯ, ಯುದ್ಧಮಲ್ಲ ಜಯಾ ಶ್ರಯ ಎಂಬ ಬಿರುದುಗಳುಳ್ಳ ಮಂಗಲರಸರಾಜನು ವಿಕ್ರಮಾದಿತ್ಯನ ತಮ್ಮನಾದ ಧಾರಾಶ್ರಯ ಜಯಸಿಂಹವರ್ಮನ ಮಗನೆಂದೂ, ಮಂಗಲ ಪುರಿಯಲ್ಲಿದ್ದಾಗ ದಾನಮಾಡಿದನೆಂದೂ ಹೇಳಿದೆ. ಶಾಸನದ ಕಾಲವು ಶಕ ೬೫೩ (ಕ್ರಿ. ಶ. ೭೩೧–೩೨). ಆದುದರಿಂದ ಇದು ವಿಜಯಾದಿತ್ಯನ

---

[1] *Ind. Ant.* Vol. VII, p. 112.

[2] *Ibid.* Vol. X, p. 102.

[3] *Ibid* Vol. IX, p. 132.

[4] *Jour. Bom Br. R. A. Soc.* Vol. XVI, p. 5.
ಗುಜರಾತ ಚಾಳುಕ್ಯರ ಶಾಸನಗಳಲ್ಲಿ ಕಳಚುರಿ ಸಂವತ್ಸರದಲ್ಲಿ ವರ್ಷವು ನಿರ್ದೇಶಿ ಸಲ್ಪಡುತ್ತದೆ. ಈ ಶಾಸನದಲ್ಲಿ ಮಾತ್ರ ಶಕವರ್ಷವು ಕೊಟ್ಟದೆ.

ಕಾಲದ್ದು. ಜಯಸಿಂಹವರ್ಮನು ವಿಕ್ರಮಾದಿತ್ಯನ ಪ್ರಸಾದದಿಂದ ಸಂಪದಭಿವೃದ್ಧಿಯನ್ನು ಪಡೆದಿದ್ದನೆಂದು ಹೇಳಿದೆ.

ಕರ್ಣಾಟಕದ ಭಾಗಗಳಲ್ಲಿ ವಿಜಯಾದಿತ್ಯನ ಶಿಲಾಶಾಸನಗಳು ಇನ್ನೂ ಅನೇಕವಿದ್ದರೂ ಅವುಗಳಲ್ಲಿ ಮಹತ್ವದ ಸಂಗತಿಗಳಾವುವೂ ಇಲ್ಲದಿರುವುದರಿಂದ ಅವುಗಳನ್ನು ಇಲ್ಲಿ ಸೇರಿಸಿಲ್ಲ.

ವಿಜಯಾದಿತ್ಯನ ತರುವಾಯದಲ್ಲಿ ಅವನ ಮಗನಾದ ೨ನೆಯ ವಿಕ್ರಮಾದಿತ್ಯನು ಕ್ರಿ. ಶ. ೭೩೩–೩೪ರಲ್ಲಿ ಚಲುಕ್ಯ ರಾಜ್ಯಸೂತ್ರಗಳನ್ನು ವಹಿಸಿದನು. ಇವನು 'ಪ್ರಕೃತ್ಯಮಿತ್ರ' ರಾದ ಪಲ್ಲವರನ್ನು ನಿರ್ಮೂಲ ನಾಶ ಮಾಡಬೇಕೆಂದು ನಿಶ್ಚಯಿಸಿ ತುಂಡಾಕ ವಿಷಯವನ್ನು ಪ್ರವೇಶಿಸಿ ಅಲ್ಲಿ ಎದುರು ಬಂದ ನಂದಿಪೋತವರ್ಮನನ್ನು ಹೊಡೆದಟ್ಟಿ ಕಟುಮುಖವಾದಿತ್ರ, ಸಮುದ್ರ ಘೋಷ, ಮೊದಲಾದ ವಾದ್ಯ ವಿಶೇಷಗಳನ್ನೂ ಖಟ್ವಾಂಗಧ್ವಜವೆಂಬ ರಾಜ ಚಿಹ್ನವನ್ನೂ ಕಸಿದುಕೊಂಡುದಲ್ಲದೆ ಅನೇಕ ಆನೆಗಳನ್ನೂ, ಮಾಣಿಕ್ಯ ರಾಸಿಯನ್ನೂ ಸ್ವಾಧೀನಪಡಿಸಿಕೊಂಡನು. ಮತ್ತು ಕಾಂಚೀಪಟ್ಟಣವನ್ನು ಹೊಕ್ಕು ಅದನ್ನು ನಾಶಗೊಳಿಸದೆ ಅಲ್ಲಿ ೨ನೆಯ ನರಸಿಂಹಪೋತವರ್ಮನು ಕಟ್ಟಿಸಿದ ರಾಜಸಿಂಹೇಶ್ವರ ಮೊದಲಾದ ದೇವಾಲಯಗಳಿಗೆ ಸುವರ್ಣರಾಸಿಯನ್ನೂ ದೀನಾನಾಥದ್ವಿಜರಿಗೆ ಅನೇಕ ದಾನಗಳನ್ನೂ ಕೊಟ್ಟನು. ಪಾಂಡ್ಯ, ಚೋಳ, ಕೇರಳ, ಕಳಭ್ರ ಮೊದಲಾದ ರಾಜರನ್ನು ಸೋಲಿಸಿ ದಕ್ಷಿಣ ಸಮುದ್ರದ ತೀರದಲ್ಲಿ ಯಶೋರಾಶಿಮಯವಾದ ಜಯಸ್ತಂಭವನ್ನು ನಟ್ಟನು.[1] ವಿಕ್ರಮಾದಿತ್ಯನು ಕಾಂಚೀಪಟ್ಟಣವನ್ನು ಪ್ರವೇಶಿಸಿದುದು, ಅಲ್ಲಿಯ ರಾಜಸಿಂಹೇಶ್ವರ ದೇವಾಲಯದಲ್ಲಿ ಸಿಕ್ಕಿದ ಅವನ ಶಿಲಾಶಾಸನದಿಂದಲೂ ಸ್ಪಷ್ಟವಾಗುತ್ತದೆ.[2] ಇವನ ಕಾಲದಲ್ಲಿ ಮಾಂಡಲಿಕನಾಗಿ ಆಳುತ್ತಿದ್ದ ಗುಜರಾತದ ಚಲುಕ್ಯ ರಾಜನಾದ ಅವನಿಜನಾಶ್ರಯ ಪುಲಿಕೇಶಿ ಸೌರಾಷ್ಟ್ರ, ಗೂರ್ಜರ, ಮೌರ್ಯ, ಸೈಂಧವ, ಕಚ್ಛೆಲ್ಲ, ಚಾವೋಟಕ ರಾಜರನ್ನು ಸೋಲಿಸಿ ದಕ್ಷಿಣಾಪಥದ ವಿಜಯೇಚ್ಛೆಯಿಂದ ಲಾಟಮಂಡಲವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಬಂದಿದ್ದ ತಾಜಿಕ (ಅರಬ) ರನ್ನು ಬಗ್ಗುಬಡಿದು ಹಿಂದಕ್ಕಟ್ಟಿದನು.[3]

---

[1] ಕೀರ್ತಿವರ್ಮನ ವಕ್ಕಲೇರಿ ತಾಮ್ರಶಾಸನ.

[2] *S. I. I.* Vol I, , p. 147. *Ep. Ind.* Vol. III, p. 360

[3] *Proceedings of the Aryan Section of the Seventh International Congress of Orientalists, p.* 230.

ವಿಕ್ರಮಾದಿತ್ಯನಿಗೆ ಅನಿವಾರಿತ ಎಂಬ ಬಿರುದು ಇತ್ತು. ಇವನು ಹೈಹಯ ವಂಶದ ಲೋಕಮಹಾದೇವಿಯನ್ನೂ, ಆಕೆಯ ತಂಗಿಯಾದ ತ್ರೈಲೋಕ್ಯ ಮಹಾದೇವಿಯನ್ನೂ ಮದುವೆಯಾಗಿದ್ದನು.[1] ಈ ತ್ರೈಲೋಕ್ಯಮಹಾದೇವಿಯೇ ೨ನೆಯ ಕೀರ್ತಿವರ್ಮನ ತಾಯಿ. ಲೋಕಮಹಾದೇವಿ ಪಟ್ಟದಕಲ್ಲಿನಲ್ಲಿ ಅದ್ಭುತವಾದ ಲೋಕೇಶ್ವರ ( ಈಗಿನ ವಿರೂಪಾಕ್ಷ ) ದೇವಾಲಯವನ್ನೂ ಇದರ ಉತ್ತರಕ್ಕೆ ತ್ರೈಲೋಕ್ಯಮಹಾದೇವಿ ತ್ರೈಲೋಕ್ಯೇಶ್ವರ ದೇವಸ್ಥಾನವನ್ನೂ ಕಟ್ಟಿಸಿದರು. ಈ ತ್ರೈಲೋಕ್ಯೇಶ್ವರ ದೇವಸ್ಥಾನವು ಈಗ ಅಳಿದು ಹೋಗಿದೆ. ಲೋಕಮಹಾದೇವಿ, ಲೋಕೇಶ್ವರ ದೇಗುಲವನ್ನು ಕಟ್ಟಿಸಿದ ಗುಂಡಅನಿವಾರಿತಾಚಾರಿಯೆಂಬ ಶಿಲ್ಪಿಗೆ ತ್ರಿಭುವನಾಚಾರಿಯೆಂಬ ಬಿರುದನ್ನು ಕೊಟ್ಟಳು. ಮತ್ತು ಗಾಂಧರ್ವರಿಗೆ ಹಿಂದಕ್ಕೆ ವಿಜಯಾದಿತ್ಯನು ಹಾಕಿಕೊಟ್ಟ ಕೆಲ ಮರ್ಯಾದೆಗಳನ್ನು ದೃಢೀಕರಿಸಿದಳು.[2]

## ವಿಕ್ರಮಾದಿತ್ಯನ ಶಾಸನಗಳು :

೧. ಲಕ್ಷ್ಮೇಶ್ವರ ಶಿಲಾಶಾಸನ.[3]— ರಾಜನು ತನ್ನ ೨ನೆಯ ವರ್ಷವಾದ ಶಕ ೬೫೭ ರ ಮಾಘ ಪೌರ್ಣಿಮೆಯಂದು (೧೩ನೆಯ ಜಾನ್ಯುಅರಿ, ೭೫೫) ರಕ್ತಪುರದಲ್ಲಿದ್ದಾಗ ಜಿನೇಂದ್ರ ಪೂಜೆಗಾಗಿ ಭೂಮಿಯನ್ನು ದಾನಮಾಡಿದನು.

೨. ಐಹೊಳೆ ಶಿಲಾಶಾಸನ.[4]— ಇದರಲ್ಲಿ ತಿಥಿ ನಿರ್ದೇಶವಿಲ್ಲ. ಇಲ್ಲಿ ಹೇಳಿದ ರಾಜನು ೨ನೆಯ ವಿಕ್ರಮಾದಿತ್ಯನೆಂದು ಗ್ರಹಿಸಿದ್ದೇವೆ. ಆಟದ ಆಳೆ ಕೊಮರಸಿಂಗನೆಂಬವನು ಕಟ್ಟಿಸಿದ ಗುಡಿಯ ಆಚಾರ್ಯನಾದ ಆದಿತ್ಯನಿಗೆ ದಾನಹಾಕಿಕೊಟ್ಟ ಶಾಸನವಿದು.

೩. ಕಂಚಿಯ ಶಿಲಾಶಾಸನ.[5]— ಇದರಿಂದ ವಿಕ್ರಮಾದಿತ್ಯನು ಕಂಚಿಯನ್ನು ಹೊಕ್ಕು ಅದನ್ನು ನಾಶಗೊಳಿಸದೆ ದೇವಾಲಯಗಳಿಗೆ ಅನೇಕ ಕಾಣಿಕೆಗಳನ್ನು ಕೊಟ್ಟನೆಂದು ತಿಳಿಯಬಹುದು.

---

[1] Paṭṭadakal Inscriptions.

[2] *Ind. Ant.* Vol. X, p. 166.

[3] *Ind. Ant.* Vol. VII, p. 106. ಇದನ್ನು ೧೧ನೆಯ ಶತಮಾನದಲ್ಲಿ ಬರೆದಂತೆ ಲಿಪಿಶಾಸ್ತ್ರದ ದೃಷ್ಟಿಯಿಂದ ಹೇಳಬಹುದು.

[4] *Ind. Ant.* Vol. VIII, p. 286.

[5] *S. I. I.* Vol. I, p. 147., *Ep. Ind.* Vol. III, p. 360.

೪. ಪಟ್ಟದಕಲ್ಲು ಶಿಲಾಶಾಸನಗಳು.[1]—

(ಅ) ಲೋಕಮಹಾದೇವಿ, ಲೋಕೇಶ್ವರ ದೇಗುಲವನ್ನು ಕಟ್ಟಿದ ಗುಂಡಅನಿವಾರಿತಾಚಾರಿಗೆ ತ್ರಿಭುವನಾಚಾರಿಯೆಂಬ ಬಿರುದನ್ನು ಕೊಟ್ಟಳು.

(ಇ) ಇದರಲ್ಲಿ ವಿಕ್ರಮಾದಿತ್ಯನು ಕಾಂಚೀಪತಿಯನ್ನು ಸೋಲಿಸಿದನೆಂದು ಹೇಳಿದೆ.

(ಉ) ಲೋಕಮಹಾದೇವಿ, ಹಿಂದಕ್ಕೆ ವಿಜಯಾದಿತ್ಯನು ಗಾಂಧರ್ವರಿಗೆ ಹಾಕಿಕೊಟ್ಟಿದ್ದ ಮರ್ಯಾದೆಗಳನ್ನು ದೃಢೀಕರಿಸಿದಳು.

(ಎ) ಲೋಕಮಹಾದೇವಿ, ನರೆಯಂಗಲು ಪನ್ನಾಸವನ್ನು ಲೋಕೇಶ್ವರ ದೇವರಿಗೆ ಸರ್ವಬಾಧಾಪರಿಹಾರವಾಗಿ ಕೊಟ್ಟಳು.

(ಒ) ವಿಜಯಾದಿತ್ಯನ ಮಗ ವಿಕ್ರಮಾದಿತ್ಯನು ಲೋಕೇಶ್ವರ ದೇವಾಲಯಕ್ಕೆ ದಾನಗಳನ್ನು ಮಾಡಿದನು.

೫. ನವಸಾರಿ ತಾಮ್ರಶಾಸನ.[2]— ಧಾರಾಶ್ರಯ ಜಯಸಿಂಹವರ್ಮನ ಮಗನಾದ ಅವನಿಜನಾಶ್ರಯ ಪುಲಕೇಶಿ ಕಲಚುರಿವರ್ಷ ೪೯೦, ಕಾರ್ತಿಕ ಪೌರ್ಣಿಮೆ ( ೨೨ನೆಯ ಅಕ್ಟೋಬರ, ೭೩೯ ) ಯಂದು ಕಾರ್ಮಣೇಯಾಹಾರ ವಿಷಯದಲ್ಲಿ ಪದ್ರಕವೆಂಬ ಗ್ರಾಮವನ್ನು ಬ್ರಾಹ್ಮಣನಿಗೆ ದಾನ ಮಾಡಿದನು. ಕಾರ್ಮಣೇಯಾಹಾರ ವಿಷಯವು ಸುರತದ ಸಮೀಪದಲ್ಲಿದ್ದ ಕಾಮ್ರೇಜದ ಸುತ್ತಲಿನ ಪ್ರದೇಶವೆಂದು ಫ್ಲೀಟರು ಹೇಳುತ್ತಾರೆ.

೨ನೆಯ ವಿಕ್ರಮಾದಿತ್ಯನಾದ ಮೇಲೆ ಅವನ ಮಗನಾದ ೨ನೆಯ ಕೀರ್ತಿವರ್ಮನು ಶಕ ೬೬೬–೬೭ ( ಕ್ರಿ. ಶ. ೭೪೪–೪೫ )ರಲ್ಲಿ ರಾಜನಾದನು. ಇವನು ಚಿಕ್ಕಂದಿನಲ್ಲಿಯೇ ಶಸ್ತ್ರಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನು. ಇವನ ಗುಣಗಳಿಗೆ ಮೆಚ್ಚಿ ವಿಕ್ರಮಾದಿತ್ಯನು ಇವನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು. ಯುವರಾಜನಿದ್ದಾಗ ಕೀರ್ತಿವರ್ಮ್ಮನು, ಕುಲವೈರಿಯಾದ

---

[1] *Ind. Ant.* Vol. X, pp. 162, 164, 166, 167.

[2] *Proceedings of the Aryan Section, Seventh International Congress of Orientalists*, p. 230.

ಕಾಂಚೀಪತಿಯನ್ನು ನಿಗ್ರಹಿಸಲಿಕ್ಕೆ ಅಪ್ಪಣೆಕೊಡಬೇಕೆಂದು ತಂದೆಯನ್ನು ಪ್ರಾರ್ಥಿಸಿ ಅವನ ಆಜ್ಞೆಯಿಂದ ಕಂಚಿಗೆ ತೆರಳಿದನು. ಇವನನ್ನು ಎದುರಿಸಲಿಕ್ಕೆ ಬಂದ ಪಲ್ಲವರಾಜನು ಪ್ರಕಾಶಯುದ್ಧವನ್ನು ಮಾಡಲಾರದೆ ತನ್ನ ದುರ್ಗದಲ್ಲಿ ಅವಿತುಕೊಂಡಿರಲು ಕೀರ್ತಿವರ್ಮನು ಅವನ ಸೈನ್ಯವನ್ನು ಭಗ್ನಮಾಡಿ, ಮದಗಜ, ಸುವರ್ಣಮಾಣಿಕ್ಯಗಳನ್ನು ತಂದು ತಂದೆಗೆ ಒಪ್ಪಿಸಿದನು. ಐನೂಲ ತಾಮ್ರಶಾಸನದಲ್ಲಿ [1] ಯುವರಾಜ ಕೀರ್ತಿವರ್ಮನು ತುಂಡಾಕವಿಷಯದಲ್ಲಿ ಪ್ರವೇಶಮಾಡಿದಾಗ ಅಭಿಮುಖವಾಗಿ ಬಂದ ನಂದಿಪೋತವರ್ಮನೆಂಬ ಪಲ್ಲವ ರಾಜನನ್ನು ನಾಶಮಾಡಿದನೆಂದು ಬರೆದಿದೆ. ೬೫ ವರ್ಷಗಳು ರಾಜ್ಯಭಾರ ಮಾಡಿದ ನಂದಿವರ್ಮಪಲ್ಲವಮಲ್ಲನೇ (ಕ್ರಿ. ಶ. ೭೯೬–೭೬೧) ಕೀರ್ತಿವರ್ಮನ ಪ್ರತಿಕಕ್ಷಿಯಾದ ಪಲ್ಲವರಾಜನು. ಕೀರ್ತಿವರ್ಮನಿಗೆ ನೃಪಸಿಂಹ ಎಂಬ ಬಿರುದು ಇತ್ತು.

**ಇವನ ಕಾಲದ ಶಾಸನಗಳು:**

೧. ಆಡೂರ ಶಿಲಾಶಾಸನ.[2]— ಜಿನೇಂದ್ರ ದೇವಾಲಯಕ್ಕೆ ಭೂದಾನ ಮಾಡಿದ ಸಂಗತಿ ಇದರಲ್ಲಿ ಹೇಳಿದೆ.

೨. ಐನೂಲಿ ತಾಮ್ರಶಾಸನ.— ಕೀರ್ತಿವರ್ಮನು ಶಕ ೬೭೧ (ಸಂದ)ಕ್ಕೆ ಸರಿಯಾದ ತನ್ನ ಆಳಿಕೆಯ ೪ನೆಯ ವರ್ಷದಲ್ಲಿ ಆಷಾಢ ಶುದ್ಧ ಸಪ್ತಮಿ ದಿನದಂದು ಭೈಮರಥೀನದಿಯ ಪಶ್ಚಿಮ ದಂಡೆಯಲ್ಲಿದ್ದ ನೆಲವೊಡಿಗೆ ಗ್ರಾಮದಲ್ಲಿ ಬೀಡುಬಿಟ್ಟಾಗ ಸೇಂದ್ರಕ ನಾಗಶಕ್ತಿಯ ವಿಜ್ಞಾಪನೆಯ ಮೇರೆಗೆ ಕರಿವೊಡೆ ವಿಷಯದಲ್ಲಿದ್ದ ಕಾರವಂದರ ಗ್ರಾಮವನ್ನು ಒಬ್ಬ ಬ್ರಾಹ್ಮಣನಿಗೆ ದಾನಮಾಡಿದನು. ಈ ಶಾಸನದ ತಿಥಿಯಿಂದ ಲೆಕ್ಕ ಹಾಕಿದರೆ ಕೀರ್ತಿವರ್ಮನ ೬ನೆಯ ವರ್ಷವು ಶಕ ೬೭೩ (ಕೆಂದೂರು ತಾಮ್ರ ಶಾಸನ), ೧೧ನೆಯ ವರ್ಷವು ಶಕ ೬೭೮ (ವಕ್ಕಲೇರಿ ಶಾಸನ) ಆಗ ಬೇಕಾಗುತ್ತದೆ.

೩. ಕೆಂದೂರು (ಪುಣೆ ಜಿಲ್ಲೆ, ಖೇಡ ತಾಲೂಕು) ತಾಮ್ರಶಾಸನ.[3]— ಕೀರ್ತಿವರ್ಮನು ರಕ್ತಪುರದಲ್ಲಿ ಬೀಡುಬಿಟ್ಟಾಗ ತನ್ನ ೬ನೆಯ ವರ್ಷ ವಾದ ಶಕ ೬೭೨ ರ ವೈಶಾಖ ಶುದ್ಧ ಪೌರ್ಣಿಮೆ ಸೋಮಗ್ರಹಣ

[1] *M. A. R.* 1909.

[2] *Ind. Ant.* Vol. XI, p. 68.

[3] *Ep. Ind.* Vol. IX, p. 202. ಶಕ ೬೭೨ ವರ್ತಮಾನ ವರ್ಷವಾಗಿರಬೇಕು.

ಸಮಯದಲ್ಲಿ (ಕ್ರಿ. ಶ. ೭೪೯, ಎಪ್ರಿಲ ೭, ಸೋಮವಾರ) ವಾಜಪ್ಯ ಶರ್ಮನ ಪೌತ್ರನೂ, ಮಾಕಯವಾಜಪೇಯಯಾಜಿಯ ಪುತ್ರನೂ ಆದ ವೇದವೇದಾಂಗಪಾರಗ ರಾಮಶರ್ಮ ಬ್ರಾಹ್ಮಣನಿಗೆ ಮಹಾದೇವಿಯ ವಿಜ್ಞಾಪನೆಯ ಮೇರೆಗೆ ಬೆಳ್ವೊಲ ವಿಷಯದಲ್ಲಿ ಪೆಣ್ಬಸಲೂರು, ಕಿಸುಮಂಗಲಂ, ಸುಳ್ಳಂ, ಪೆರ್ಬ್ಬಳ್ಳಿ ಗ್ರಾಮಗಳ ಮಧ್ಯದಲ್ಲಿ ಇದ್ದ ಬೆಪ್ಪಟ್ಟಿ ಗ್ರಾಮವನ್ನು ಕೊಟ್ಟನು. ಈ ಗ್ರಾಮಗಳು ಈಗ ಅನುಕ್ರಮವಾಗಿ ಧಾರವಾಡ ಜಿಲ್ಹೆಯಲ್ಲಿದ್ದ ಹೆಬ್ಲೂರು, ಕುಸುಗಲ್, ಸುಳ್ಳ, ಹೆಬ್ಬಳ್ಳಿ, ಬೇಹಟ್ಟಿ ಎಂದು ಪ್ರಸಿದ್ಧವಿರುತ್ತವೆ. ಧನಂಜಯ ಪುಣ್ಯವಲ್ಲಭನು ಈ ಶಾಸನವನ್ನು ಬರೆದನು.

೪. ಪಟ್ಟದಕಲ್ಲು ಶಿಲಾಶಾಸನ.[1]— ಗಂಗಾನದಿಯ ಉತ್ತರತೀರದಲ್ಲಿದ್ದ ಮೃಗಥಣಿಕಾಹಾರ ವಿಷಯದಿಂದ ಬಂದು ವಿಜಯೇಶ್ವರ ದೇವಾಲಯದಲ್ಲಿ ವಾಸಮಾಡಿಕೊಂಡಿದ್ದ ಜ್ಞಾನಶಿವಾಚಾರ್ಯನೆಂಬ ಬ್ರಾಹ್ಮಣನು ವಿಜಯೇಶ್ವರ ಲೋಕೇಶ್ವರ, ತ್ರೈಲೋಕ್ಯೇಶ್ವರ ದೇವಾಲಯಗಳ ಮಧ್ಯದಲ್ಲಿ ತ್ರಿಶೂಲಾಂಕಿತವಾದ ಒಂದು ಶಿಲಾಸ್ತಂಭವನ್ನು ನಿಲ್ಲಿಸಿದನು. ಈತನು ಬ್ರಹ್ಮಮೂರ್ತಿ ಆರ್ಯಭಟ್ಟ ತ್ರಿವಿಕ್ರಮ ಚತುರ್ವೇದಿ ಎಂಬ ಬ್ರಾಹ್ಮಣನಿಗೆ ಆಚಾರ್ಯ ಪ್ರಸಂಗ ದೇವಪೂಜಾ ಸಂಸ್ಕಾರಗಳಿಗೋಸ್ಕರ ಭೂಮಿಯನ್ನು ದಾನಮಾಡಿದನು. ಈ ಜ್ಞಾನಶಿವಾಚಾರ್ಯನು ಶಾಂಡಿಲ್ಯಗೋತ್ರದ ಶಿವವರ್ಧಮಾನರೂಪನ ಮೊಮ್ಮಗನೂ, ಶಿವರೂಪನ ಮಗನೂ, ಎಂದು ಹೇಳಿದೆ. ಇವನ ಪೂರ್ವದ ಹೆಸರು ಶುಭದೇವರೂಪ. ಇವನು ಶಿವಶಾಸನಾಂಕ ಭಗವತ್ಪೂಜ್ಯ ಪಯೋಭಕ್ಷಿಪಾದ ಪ್ರಶಿಷ್ಯನ ಶಿಷ್ಯನೆಂದು ಬರೆದಿದೆ. ಗೌತಮಗೋತ್ರದ ಆರ್ಯಭಟ್ಟ ಗಯಾ (ಂಗಾ) ಧರನೆಂಬ ಬ್ರಾಹ್ಮಣನು ವಿಜಯಾದಿತ್ಯನ ಆಜ್ಞೆಯಂತೆ ಬೆಳ್ವಲ ವಿಷಯದಲ್ಲಿಯ ಅರವುಣಸೆಗ್ರಾಮದ ಪೂರ್ವಭಾಗದಲ್ಲಿದ್ದ ಒಂದು ಗ್ರಾಮವನ್ನು ಮೇಲೆ ಹೇಳಿದ ತ್ರಿವಿಕ್ರಮ ಚತುರ್ವೇದಿಗೆ ಕೊಟ್ಟನೆಂದು ಈ ಶಾಸನದಲ್ಲಿ ಹೇಳಿದೆ.

ಈ ಶಾಸನವು ಜ್ಞಾನಶಿವಾಚಾರ್ಯನು ನಟ್ಟ ಶಿಲಾಸ್ತಂಭದ ಮೇಲೆ ಹಳೆಗನ್ನಡ ಲಿಪಿಯಲ್ಲಿ ಕೊರೆಯಲ್ಪಟ್ಟಿದೆ. ಇದರ ಪ್ರತಿ ಇದೇ ಕಂಬದ

[1] *Ep. Ind.* Vol. III, p. 1.

ಇನ್ನೊಂದು ಭಾಗದಲ್ಲಿ ನಾಗರೀ ಲಿಪಿಯಲ್ಲಿ ಕೊರೆಯಲ್ಪಟ್ಟಿದೆ. ನರ್ಮದಾ ನದಿಯ ದಕ್ಷಿಣ ಭಾಗದಲ್ಲಿ ನಾಗರೀ ಲಿಪಿಯಲ್ಲಿ ಬರೆದ ಪ್ರಾಚೀನ ಶಾಸನಗಳಲ್ಲಿ ದಂತಿದುರ್ಗನಸಾಮನಗಡ ತಾಮ್ರಶಾಸನವೊಂದನ್ನು ಬಿಟ್ಟರೆ ಇದೇ ಮೊದಲನೆಯದು.[1]

೫. ವಕ್ಕಲೇರಿ ತಾಮ್ರಶಾಸನ.[2]— ಕೀರ್ತಿವರ್ಮನು ತನ್ನ ೧೧ನೆಯ ವರ್ಷವಾದ ಶಕ ೬೭೭ರ ಭಾದ್ರಪದ ಪೌರ್ಣಿಮೆಯ ದಿನದಲ್ಲಿ ಭೀಮರಥೀ ನದಿಯ ಉತ್ತರ ತಟದಲ್ಲಿದ್ದ ಭಂಡಾರಗವಿಟ್ಟಗೆಯಲ್ಲಿದ್ದಾಗ ದೋಸಿರಾಜನ ವಿಜ್ಞಾಪನೆಯ ಮೇರೆಗೆ ಒಬ್ಬ ಬ್ರಾಹ್ಮಣನಿಗೆ ಸುಳ್ಳಿಯೂರು ಗ್ರಾಮವನ್ನೂ, ತಾಮರಮುಗೆ, ಪಾನುಂಗಲ್, ಕಿಱುವಳ್ಳಿಗಳ ಮಧ್ಯದಲ್ಲಿದ್ದ ನೆಂಗಿಯೂರು, ನಂದಿವಳ್ಳಿಗ್ರಾಮಗಳನ್ನೂ ಪಾನುಂಗಲ್ ವಿಷಯದಲ್ಲಿ ಅಱಿದೊಱೆನದಿಯ ದಕ್ಷಿಣತಟದಲ್ಲಿದ್ದ ಬಾಳವೂರನ್ನೂ ಕೊಟ್ಟನು. ಹಾನುಗಲ್ ಸಮೀಪದಲ್ಲಿದ್ದ ಬಾಳೂರೇ ಈ ಬಾಳವೂರು. ಭಂಡಾರಗವಿಟ್ಟಗೆ ಸೊಲ್ಲಾಪುರ ಜಿಲ್ಹೆಯಲ್ಲಿ ಭೀಮಾನದಿಯ ದಂಡೆಯಲ್ಲಿದ್ದ ಭಂಡಾರಕೌಟಿ.

ಫ್ಲೀಟ, ಕೀಲಹಾರ್ನ, ರಾಯಸರು ಈ ಶಾಸನದ ಕಾಲವನ್ನು ಶಕ ೬೭೯ ತ್ತೆಂದು ಓದಿದ್ದಾರೆ. ಕೆಂದೂರ ಶಾಸನದಲ್ಲಿ ರಾಜನ ೬ನೆಯ ವರ್ಷವು ಶಕ ೬೭೨ ಎಂದು ಹೇಳಿರುವುದರಿಂದ ೧೧ನೆಯ ವರ್ಷವು ಶಕ ೬೭೭ ಆಗಬೇಕಾಗುತ್ತದೆ. ಮತ್ತು ಶಕ ನಿರ್ದೇಶಕ ಶಬ್ದಗಳಲ್ಲಿ 'ನವ' ಶಬ್ದವು ಶಾಸನದ ಪಟ್ಟಿಕೆಯಲ್ಲಿ ಸ್ಪಷ್ಟವಾಗಿಲ್ಲ.[3]

೨ನೆಯ ಕೀರ್ತಿವರ್ಮನ ಕಾಲದಲ್ಲಿ ಚಲುಕ್ಯರ ಆಳಿಕೆಯು ಮುಗಿಯಿತು. ರಾಷ್ಟ್ರಕೂಟ ವಂಶದ ದಂತಿದುರ್ಗನು ಇವನನ್ನು ಸೋಲಿಸಿ ಇವನ ರಾಜ್ಯದ ಉತ್ತರ ಭಾಗವನ್ನಾಕ್ರಮಿಸಿದನೆಂದು ಕ್ರಿ. ಶ. ೭೫೪, ಜಾನ್ಯೂಅರಿ ೫ನೆಯ

---

[1] ಭಾಂಡಕ ತಾಮ್ರಶಾಸನವನ್ನು ಪ್ರಸಿದ್ಧಿಸುವಾಗ ಈ ವಿಷಯದಲ್ಲಿ ಡಾ. ಸುಕ್ಥಂಕರರು ಬರೆದ ಟಿಪ್ಪಣಿಗಳನ್ನು ನೋಡಿರಿ (*Ep. Ind.* Vol. XIV, 121 ff.)

[2] *Ind. Ant.* Vol. VIII, pp. 23 ff. *Ep. Ind.* Vol. V, pp. 200 ff.

[3] *Ep. Ind.* Vol. V, p. 202.

ಸಾಮನಗಡ ತಾಮ್ರಶಾಸನದಿಂದ ಗೊತ್ತಾಗುತ್ತದೆ. ಇದರಲ್ಲಿ ದಂತಿದುರ್ಗನು, ಹರ್ಷವರ್ಧನ, ವಜ್ರಟ, ಪಲ್ಲವ, ಚೋಳ, ಪಾಂಡ್ಯ, ಕೇರಳ ರಾಜರನ್ನು ಸೋಲಿಸಿ ಹೆಸರುಗೊಂಡ ಕರ್ಣಾಟಕ ಬಲವನ್ನು ಅನಾಯಾಸವಾಗಿ ಜಯಿಸಿದನೆಂದು ಹೇಳಿದೆ. ಪಟ್ಟದಕಲ್ಲು ಶಿಲಾಶಾಸನ ( ಕ್ರಿ. ಶ. ೭೫೪, ೨೫ನೆಯ ಜನನ ), ವಕ್ಕಲೇರಿ ಶಾಸನ ( ಕ್ರಿ. ಶ. ೭೫೭, ೨ನೆಯ ಸಪ್ಟೆಂಟರ ) ಗಳಿಂದ ಕೀರ್ತಿವರ್ಮನು ಇನ್ನೂ ರಾಜ್ಯಭಾರ ಮಾಡುತ್ತಿದ್ದನೆಂದೂ ಅವುಗಳಲ್ಲಿ ನಿರ್ದೇಶಿಸಲ್ಪಟ್ಟ ಬೆಳ್ವಲ ವಿಷಯ ಪಾನುಂಗಲ್ ವಿಷಯಗಳು ಅವನ ರಾಜ್ಯಕ್ಕೊಳಪಟ್ಟಿದ್ದವೆಂದೂ ತಿಳಿಯುತ್ತದೆ. ಈ ಕಾಲದಲ್ಲಿ ಕೀರ್ತಿವರ್ಮನ ರಾಜ್ಯದ ಉತ್ತರ ಭಾಗವು ರಾಷ್ಟ್ರಕೂಟರ ಕೈಸೇರಿರಬಹುದು. ದಂತಿದುರ್ಗನ ಚಿಕ್ಕನಾದ ೧ನೆಯ ಕೃಷ್ಣರಾಜನ ಕಾಲದಲ್ಲಿ ಕೀರ್ತಿವರ್ಮನು ತನ್ನ ರಾಜ್ಯವನ್ನು ಕಿತ್ತುಕೊಳ್ಳಲಿಕ್ಕೆ ಪ್ರಯತ್ನ ಮಾಡಿದಂತೆ ತೋರುತ್ತದೆ. ಆದರೆ ಈ ಪ್ರಯತ್ನವು ಫಲಿಸಲಿಲ್ಲ. ರಾಷ್ಟ್ರಕೂಟರ ಶಾಸನಗಳಲ್ಲಿ[1] ೧ನೆಯ ಕೃಷ್ಣನು 'ಮಹಾವರ್ಗಹಂ ಹರಣೀ ಚಕಾರ' ಎಂದು ಹೇಳಿರುವುದರಿಂದ ಅವನ ಕಾಲದಲ್ಲಿ ಚಳುಕ್ಯರಾಜ್ಯವೆಲ್ಲ ರಾಷ್ಟ್ರಕೂಟರ ಕೈಸೇರಿತು. ಚಳುಕ್ಯರಾಜ್ಯವು ಕೀರ್ತಿವರ್ಮನ ಕಾಲದಲ್ಲಿಯೇ ( ಅಂದರೆ ಕ್ರಿ. ಶ. ೭೫೭, ೭೬೮[2], ರ ಮಧ್ಯದಲ್ಲಿ ) ಪರಹಸ್ತಗತವಾಯಿತೆಂದು ೫ನೆಯ ವಿಕ್ರಮಾದಿತ್ಯನ ಕೌಠೇಂ ತಾಮ್ರಶಾಸನದಲ್ಲಿ ಬರೆದಿದೆ. ಅಂತೂ ಚಳುಕ್ಯ ಸಾಮ್ರಾಜ್ಯವು ೬ನೆಯ ಶತಮಾನದ ಕೊನೆಯ ಭಾಗದಲ್ಲಿ ಪ್ರಾರಂಭವಾಗಿ ೮ನೆಯ ಶತಮಾನದ ಕೊನೆಯ ಭಾಗದವರೆಗೂ ಒಳ್ಳೆಯ ವೈಭವದಿಂದ ಮೆರೆದು ಮುಂದೆ ೨ನೆಯ ಶತಮಾನಗಳನಂತರ ಅಂದರೆ ಕ್ರಿ. ಶ. ೯೭೩ರಲ್ಲಿ ೨ನೆಯ ತೈಲನ ಕಾಲದಲ್ಲಿ ಮತ್ತೆ ತಲೆ ಎತ್ತಿತು.

೨ನೆಯ ಕೀರ್ತಿವರ್ಮನ ನಂತರ ಚಳುಕ್ಯರು ಎಲ್ಲಿ ಯಾವ ಅಧಿಕಾರದಿಂದ ಆಳುತ್ತಿದ್ದರೆಂಬುದು ಗೊತ್ತಿಲ್ಲ. ರಾಷ್ಟ್ರಕೂಟರ ಕಾಲದಲ್ಲಿ ಸಾಮಂತರಾಗಿ ಆಳುತ್ತಿದ್ದ ಕೆಲ ಚಳುಕ್ಯ ವಂಶಜರ ಹೆಸರುಗಳು ಶಾಸನಗಳಲ್ಲಿ ಬರುತ್ತವೆ. ಆದರೆ ಅವರಿಗೂ ಮೂಲಮನೆತನದವರಿಗೂ ಯಾವ ಸಂಬಂಧವಿತ್ತೆಂಬುದನ್ನು ಹೇಳಲಿಕ್ಕಾಗದು. ಕತ್ತಿಯರ[3] ಬಲವರ್ಮನ ಮೊಮ್ಮಗನೂ, ಯಶೋ

---

[1] ೧ನೆಯ ಕೃಷ್ಣನ ತಳೇಗಾಂವ, ಭಾಂಡಕ ಶಾಸನಗಳು.

[2] ತಳೇಗಾಂವ ಶಾಸನದ ಕಾಲ.

[3] ದಿಡಗೂರು ಶಿಲಾಶಾಸನ ( ( *Ep. Ind*. Vol. VI, p. 251. )



(Plate 9) ೨ನೆಯ ಪುಲಿಕೇಶಿಯ ದಿಗ್ವಿಜಯದ ಶಾಸನವುಳ್ಳ ಮೇಗುಟಿ

ವರ್ಮನ ಮಗನೂ ಆದ ವಿಕ್ರಮಾದಿತ್ಯ,[1] ನರಸಿಂಹ,[2] ಗೊಗ್ಗಿ,[3] ಬಿಜ್ಜ,[4] ನರಹಿತರಾಜ[5] ಎಂಬ ಚಳುಕ್ಯಸಾಮಂತರು ಬೇರೆಬೇರೆ ಕಾಲದ ಶಾಸನಗಳಲ್ಲಿ ನಿರ್ದೇಶಿಸಲ್ಪಟ್ಟಿದ್ದಾರೆ. ೧೦ನೆಯ ಶತಮಾನದ ಆದಿಯಲ್ಲಿ ತನ್ನ ಆಶ್ರಯದಾತನಾದ ಚಳುಕ್ಯವಂಶದ ೨ನೆಯ ಅರಿಕೇಸರಿಯ ವಂಶವೃಕ್ಷವನ್ನು ಆದಿಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ (ಕ್ರಿ.ಶ. ೯೪೧–೪೨) ಹೀಗೆ ಕೊಟ್ಟಿದ್ದಾನೆ.




ಕಲ್ಯಾಣದ ಚಾಳುಕ್ಯರು ತಾವು ಬಾದಾಮಿಯ ಅರಸರ ಮನೆತನದವರೆಂದು ೫ನೆಯ ವಿಕ್ರಮಾದಿತ್ಯನ ಕೌಥೇಂ ತಾಮ್ರಶಾಸನ, ೬ನೆಯ ವಿಕ್ರಮಾದಿತ್ಯನ ನೀಲಗುಂದ ತಾಮ್ರಶಾಸನಗಳಲ್ಲಿ ಹೇಳಿಕೊಂಡಿದ್ದಾರೆ. ಅವುಗಳಲ್ಲಿ

---

[1] ೩ನೆಯ ಗೋವಿಂದನ ಕಡಬ ತಾಮ್ರಶಾಸನ ( *Ep. Ind.* Vol. IV, pp. 332 ff ).

[2] ವರುಣ ಶಿಲಾಶಾಸನ. ( *Ep. Carn.* Vol.

[3] *Ep. Carn. Mysore* 37, M. A, R. 1909.

[4] ಹೈತಾಪೂರ ಶಿಲಾಶಾಸನ ( ಮುಂಡರಗಿಪೇಠ )

[5] ಕೋಟೂರ ಶಿಲಾಶಾಸನ. ( *Ind. Ant.* Vol. XX, p, 601. )

೨ನೆಯ ವಿಕ್ರಮಾದಿತ್ಯನಿಗೆ ಭೀಮನೆಂಬ ತಮ್ಮನಿದ್ದನೆಂದೂ, ಅವನ ವಂಶಜನೇ ೨ನೆಯ ತೈಲಪನೆಂದೂ ಬರೆದಿದೆ :




೨ನೆಯ ತೈಲಪನು, ರಾಷ್ಟ್ರಕೂಟ ಕೃಷ್ಣನ ಮಾಂಡಲಿಕನಾಗಿ ಆಳುತ್ತಿದ್ದನೆಂದು ನರಸಲಗಿ ಶಿಲಾಶಾಸನದಿಂದ ಗೊತ್ತಾಗಿದೆ. ಬಾದಾಮಿಯ ಮನೆತನದವರೇ ತಮ್ಮ ಕಳೆದ ವೈಭವವನ್ನು ಪುನರುಜ್ಜೀವಗೊಳಿಸಿದರೆಂದು ತಿಳಿಯಬಹುದು. ೧ನೆಯ ಭೀಮನಿಂದ ೨ನೆಯ ತೈಲನ ವರೆಗೆ ೬–೭ ತಲೆಗಳು ಕಳೆದು ಹೋಗುತ್ತವೆ. ಅವುಗಳಿಗೆ ಸು. ೨೨೦ ವರ್ಷಗಳು ಹತ್ತುವುದು ಅಸಂಭವವಲ್ಲ. ಫ್ಲೀಟರು ಈ ವಂಶಾವಳಿಯ ಮಧ್ಯದಲ್ಲಿ ಕೆಲವು ತಲೆಗಳು ತಪ್ಪಿಹೋಗಿರಬಹುದೆಂದು ಗ್ರಹಿಸಿದ್ದಾರೆ. ಆದರೆ ತಲೆಗೆ ೩೫–೪೦ ವರ್ಷಗಳು ಇತಿಹಾಸದಲ್ಲಿ ಅಸಂಭವವಲ್ಲ.

## ಚಲುಕ್ಯರ ರಾಜ್ಯವಿಸ್ತಾರ

ಚಲುಕ್ಯರು ೬ನೆಯ ಶತಮಾನದಲ್ಲಿ ಕದಂಬರ ವಶದಲ್ಲಿದ್ದ ವಾತಾಪಿಯಲ್ಲಿ ಸ್ವತಂತ್ರವಾಗಿ ಆಳತೊಡಗಿದರೆಂದು ಹಿಂದೆ ಹೇಳಿದ್ದೇವೆ. ೧ನೆಯ ಕೀರ್ತಿವರ್ಮ, ಮಂಗಲೇಶರು, ಅನೇಕ ಯುದ್ಧಗಳಲ್ಲಿ ಶತ್ರುರಾಜರನ್ನು ಸೋಲಿಸಿ ತಮ್ಮ ರಾಜ್ಯವನ್ನು ಬೆಳೆಯಿಸಿದರು. ಮಂಗಲೇಶನ ಕೊಲೆಯಾದ ಮೇಲೆ ಅರಾಜಕತೆ ಯುಂಟಾಗಲು ೧ನೆಯ ಪುಲಕೇಶಿ ನಾಲ್ಕೂ ದಿಕ್ಕುಗಳಲ್ಲಿ ಶತ್ರುಗಳನ್ನು ಸೋಲಿಸಿ ಉತ್ತರದಲ್ಲಿ ನರ್ಮದಾನದಿ, ಪೂರ್ವದಲ್ಲಿ ಸಮುದ್ರ, ದಕ್ಷಿಣದಲ್ಲಿ ಪಾಂಡ್ಯ, ಚೋಳ, ಕೇರಳ ರಾಜ್ಯಗಳು, ಪಶ್ಚಿಮದಲ್ಲಿ ಸಮುದ್ರ ಈ ಚತುರಾಘಾಟವಾದ ದೇಶದಲ್ಲಿ ವಿಜಯಭೇರಿಯನ್ನು ಹೊಡೆಯಿಸಿದನು. ೧ನೆಯ ವಿಕ್ರಮಾದಿತ್ಯನೂ, ೨ನೆಯ ವಿಕ್ರಮಾದಿತ್ಯನೂ ಕಾಂಚೀ ಪಟ್ಟಣವನ್ನು ಹಿಡಿದು ಕೊಂಡಿದ್ದರೆಂದು ಶಾಸನಗಳಲ್ಲಿ ಹೇಳಿದೆ. ಆದರೆ ಆ ಕಾಲದ ಪಲ್ಲವರಾಜರು ಕಾಂಚಿಯಲ್ಲಿ ಆಳುತ್ತಿದ್ದರೆಂದು ಅವರ ಲಿಪಿಗಳಿಂದ ಗೊತ್ತಾಗುವುದರಿಂದ ಚಳುಕ್ಯರ ವಶದಲ್ಲಿ ಕಾಂಚೀ ಪಟ್ಟಣವು ಬಹುಕಾಲ ಇರಲಿಲ್ಲವೆಂದು ಹೇಳಬೇಕಾಗುತ್ತದೆ. ಚಳುಕ್ಯರ ರಾಜ್ಯವಿಸ್ತಾರವನ್ನು ನಿರ್ಧರಿಸುವುದಕ್ಕೆ ಅವರ ಶಾಸನಗಳಲ್ಲಿ ಹೇಳಿದ ವಿಷಯಗಳನ್ನೂ, ಭೂಭಾಗಗಳನ್ನೂ ಗೊತ್ತು ಹಚ್ಚುವುದು ಅವಶ್ಯವಿದೆ. ೧ನೆಯ ಕೀರ್ತಿವರ್ಮನಿಂದ ೨ನೆಯ ಕೀರ್ತಿವರ್ಮನ ವರೆಗೆ ಆಳಿದ ರಾಜರ ಶಾಸನಗಳಲ್ಲಿ ಕೆಳಗಿನ ಭೂಪ್ರದೇಶಗಳು ಉಕ್ತವಾಗಿವೆ :—

**ಮಂಗಲೇಶ—**

| | | |
|---|---|---|
| ಕೊಂಕಣ ವಿಷಯ | .. | ನೇರೂರು ತಾಮ್ರಶಾಸನ. |

**೨ನೆಯ ಪುಲಿಕೇಶಿ—**

| | | |
|---|---|---|
| ರೇವತೀ ದ್ವೀಪ<br>ಖೇಟಾಹಾರ ವಿಷಯ | .. | ಗೋವೆ ತಾಮ್ರಶಾಸನ. |
| ಕುರುಮರಥೀ; ಭೀಮಾನದಿಯ ದಂಡೆಯ ಮೇಲಿದ್ದ ಅಲಂದ ತೀರ್ಥ | .. | ಸಾತಾರೆಯ ತಾಮ್ರಶಾಸನ. |
| ಕರ್ಮರಾಷ್ಟ್ರ | .. | ಕೊಪ್ಪರಂ ತಾಮ್ರಶಾಸನ. |
| ಗೋಪರಾಷ್ಟ್ರ ವಿಷಯ | .. | ನಿರ್ಪಾನ ತಾಮ್ರಶಾಸನ. |

ಇವುಗಳಲ್ಲಿ ರೇವತೀ ದ್ವೀಪವು ರತ್ನಾಗಿರಿಯ ಹತ್ತಿರದಲ್ಲಿದ್ದ ರೇಡಿ. ಖೇಟಾಹಾರವು ಅದೇ ಜಿಲ್ಹೆಯ ಖೇಡ ತಾಲೂಕು. ಅಲಂದತೀರ್ಥವು

ಸಾತಾರೆಯ ಉತ್ತರಕ್ಕೆ ೩೫ ಮೈಲುಗಳ ದೂರದಲ್ಲಿದ್ದ ಅಲಂದಿ. ಕರ್ಮ ರಾಷ್ಟ್ರವು ಗುಂಟೂರು ಜಿಲ್ಹೆಯ ಸರಸರಾವಪೇಟ ತಾಲೂಕಿನ ಭಾಗವು. ಗೋಪರಾಷ್ಟ್ರ ವಿಷಯವು ನಾಸಿಕ ಜಿಲ್ಹೆಯ ಭಾಗವು. ಐಹೊಳೆಯ ಶಾಸನ ದಲ್ಲಿ ನರ್ಮದಾನದಿಯ ದಂಡೆಯಲ್ಲಿ ಹರ್ಷವರ್ಧನನನ್ನು ತಡೆದನೆಂದು ಹೇಳಿರು ವುದರಿಂದ ಉತ್ತರದಲ್ಲಿ ಅವನ ರಾಜ್ಯವು ಆ ನದಿಯ ವರೆಗೆ ಹಬ್ಬಿರಬೇಕು. ಅವನು ೯೯೦೦೦ ಗ್ರಾಮಗಳುಳ್ಳ ಮಹಾರಾಷ್ಟ್ರಕತ್ರಯಗಳ ಅಧಿಪತಿಯಾಗಿ ದ್ದನೆಂದೂ ಅಲ್ಲಿಯೇ ಬರೆದಿದೆ. ಇದರ ಅರ್ಥವನ್ನು ಮುಂದೆ ವಿವೇಚಿಸುತ್ತೇವೆ. ಪೂರ್ವದಿಕ್ಕಿನಲ್ಲಿ ಚಳುಕ್ಯರಾಜ್ಯವು ಗುಂಟೂರು ಜಿಲ್ಹೆಯ ವರೆಗೂ ಹಬ್ಬಿತ್ತು. ಪುಲಿಕೇಶಿಯು ಪೂರ್ವ ಸಮುದ್ರದ ವರೆಗೆ ರಾಜ್ಯವನ್ನು ಸಂಪಾದಿಸಿ ಆ ಭಾಗ ದಲ್ಲಿ ತನ್ನ ತಮ್ಮನಾದ ಕುಬ್ಜವಿಷ್ಣುವರ್ಧನನನ್ನು ನೇಮಿಸಿದ್ದನು.[1] ಅನಂತ ಪುರ ಜಿಲ್ಹೆಗೆ ಸೇರಿದ ಪೆದ್ದವಡುಗೂರಿನಲ್ಲಿ ಪುಲಿಕೇಶಿಯ ಶಾಸನವು ದೊರೆತಿದೆ. ಇವನು ನಳರನ್ನು ಸೋಲಿಸಿದ್ದನು. ಬಳ್ಳಾರಿ ಕರ್ನೂಲ ಜಿಲ್ಹೆಗಳೇ ನಳವಾಡಿ ವಿಷಯವು.

## ೧ನೆಯ ವಿಕ್ರಮಾದಿತ್ಯ—

| | | |
|---|---|---|
| ಕರ್ಣ್ಣವಿಷಯ | .. | ಹೈದರಾಬಾದಶಾಸನ |
| ತರಕಾಗಾಹಾರಗ್ರಾಮ | .. | ನೇರೂರಶಾಸನ |
| ನಳವಾಡಿವಿಷಯ | .. | ಕರ್ನೂಲ ತಾಮ್ರಶಾಸನ |
| ನವಸಾರಿಕಾ | .. | ನವಸಾರಿ ತಾಮ್ರಶಾಸನ |
| ಕೊಚ್ಛೂರಕ | .. | ಕೋಚ್ರೇಂ ತಾಮ್ರಶಾಸನ |
| ಸೇಣಾನಕ<br>ಕುಂದಲಿಕಾಮಲವಿಷಯ | .. | ಸೇಂದ್ರಕ ತಾಮ್ರಶಾಸನ |
| ತ್ರೇಯಣಾಹಾರವಿಷಯ | .. | ಬಾಗುಮಾ ತಾಮ್ರಶಾಸನ |
| ಅಪರಾಂತ<br>ಪಿನುಕ | .. | ಸಂಜಾನಶಾಸನ |

ಇವುಗಳಲ್ಲಿ ತ್ರೇಯಣಾಹಾರವು ಬಾಡೋರ್ಲಿಯ ಹತ್ತಿರದಲ್ಲಿದ್ದ ತೇನ್. ಕೊಚ್ಛೂರಕವು ರತ್ನಾಗಿರಿ ಜಿಲ್ಹೆಯಲ್ಲಿದೆ. ನವಸಾರಿಕಾ, ನವಸಾರಿಯೇ. ಅಂತು ಶಾಸನಗಳಿಂದ ಉತ್ತರದಲ್ಲಿ ವಿಕ್ರಮಾದಿತ್ಯನ ರಾಜ್ಯವು ನವಸಾರಿಯ

[1] ಕೊಪ್ಪರಂ ತಾಮ್ರಶಾಸನವನ್ನು ನೋಡಿರಿ.

ವರೆಗಿತ್ತೆಂದು ಹೇಳಬಹುದು. ನೆಲ್ಲೂರು ಜಿಲ್ಲೆಯ ದರ್ಸಿಯಲ್ಲಿ ವಿಕ್ರಮಾದಿತ್ಯನ ಶಿಲಾಶಾಸನವು ಸಿಕ್ಕಿವೆ.

**ವಿನಯಾದಿತ್ಯ—**

| | |
|---|---|
| ಪಳಯಟ್ಟಾಣ<br>ಭಾಡಲಿ<br>ವೀರಗ್ರಾಮು<br>ಸೀರಾನದಿ | .. ಜೆಜೂರಿ ತಾಮ್ರಶಾಸನ |
| ತೊಗೊಚ್ಚೇಡು<br>ಪೆಡೆಕಲ್ಲಿವಿಷಯ | .. ತೊಗಚೇ೯ಡು ತಾಮ್ರಶಾಸನ |
| ತೊರವೂರವಿಷಯ<br>ಎಡೆವೊಳಲ್‌ವಿಷಯ | .. ಸೊರಬ ತಾಮ್ರಶಾಸನ |
| ಬನವಾಸಿ<br>ಕಾರ್ಮಣೇಯಾಹಾರವಿಷಯ | .. ಸುರತ ತಾಮ್ರಶಾಸನ |
| ಸಳವಾಡಿವಿಷಯ<br>ತಗರನದಿ<br>ತಳಯಖೇಟ | .. ದಯ್ಯಮದಿನ್ನಿ ತಾಮ್ರಶಾಸನ |
| ಕರಂಜ<br>ಹರೇಷಪುರ<br>ಎಡೆವೊಳಲ್‌ಭೋಗ<br>ವನವಾಸಿಮಂಡಲ | .. ಹರಿಹರ ತಾಮ್ರಶಾಸನ |
| ನಾಯರಖಂಡ<br>ಜೆಡುಗೂರು | .. ಬಳಗಾಂವೆ ಶಿಲಾಶಾಸನ |

ಇವುಗಳಲ್ಲಿ ತೊಗೊಚ್ಚೇಡು ಕರ್ನೂಲ ಜಿಲ್ಲೆಯಲ್ಲಿ ಉಂಟು. ತೊರವೂರ ವಿಷಯವು ಗುತ್ತಿ ತಾಲೂಕಿನ ಭಾಗವಾಗಿತ್ತು. ಎಡೆವೊಳಲ್ ವಿಷಯವು ಬನವಾಸಿಯ ಈಶಾನ್ಯದಲ್ಲಿತ್ತು. ತಗರನದಿ ನಿಜಾಂ ಪ್ರಾಂತದಲ್ಲಿದ್ದ ತೇರ್‌ನದಿ. ಕರಂಜ=ಕರ್ಜಗಿ (ಧಾರವಾಡ ಜಿಲ್ಲೆ ಹಾವೇರಿ ತಾಲೂಕು). ನಾಯರಖಂಡ ಜೆಡುಗೂರುಗಳು ಸೊರಬ ತಾಲೂಕನ್ನೊಳಗೊಂಡಿದ್ದವು. ಪಳಯಟ್ಟಾಣವು ಪುಣೆಯಹತ್ತಿರದಲ್ಲಿದ್ದ ಫಲ್ಟಣ್.

**ವಿಜಯಾದಿತ್ಯ—**

| | | |
|---|---|---|
| ರಾಸೆನಾ; ಇರಿದಿಗೆ ವಿಷಯ | .. | ನೇರೂರು ತಾಮ್ರಶಾಸನ |
| ಕರಹಾಟನಗರ ತಾಲಿತಟಾಹಾರ ವಿಷಯ | .. | ರಾಯಗಡ ಶಾಸನ |
| ಇರಿದಿಗೆ ವಿಷಯ | .. | ನೇರೂರು ತಾಮ್ರಶಾಸನ |
| ತುರಮಾರ ವಿಷಯ | .. | ಕೊಂಡಪಲ್ಲಿ ( ಗುತ್ತಿ ತಾಲೂಕು ) ಶಿಲಾ ಶಾಸನ |
| ಪುಲಿಕರ ನಗರ | .. | ಲಕ್ಷ್ಮೇಶ್ವರ ಶಿಲಾಶಾಸನ |
| ಮಂಗಲಪುರಿ | .. | ಬಲ್ಸಾರ ತಾಮ್ರಶಾಸನ |
| ಏಲಾಪುರ; ಅಲಕುರ ವಿಷಯ | .. | ಏಲಾಪುರ ತಾಮ್ರಶಾಸನ |

ಇವುಗಳಲ್ಲಿ ರಾಸೆನಾ, ಅಹಮ್ಮದನಗರ ಜಿಲ್ಹೆಯಲ್ಲಿದ್ದ ರಾಸೆನಾ. ಇರಿದಿಗೆ ವಿಷಯವು ರತ್ನಾಗಿರಿ– ಸಾವಂತವಾಡಿಗಳ ಭಾಗಗಳನ್ನೊಳಗೊಂಡಿರಬೇಕು. ತುರನೂರ ವಿಷಯವು ಗುತ್ತಿ ತಾಲೂಕಿನಲ್ಲಿತ್ತು. ಏಲಾಪುರವು, ಅಜಂತೆಯ ಹತ್ತಿರದಲ್ಲಿದ್ದ ಈಗಿನ ವೇರೂಳವು.

**೨ನೆಯ ವಿಕ್ರಮಾದಿತ್ಯ—**

| | | |
|---|---|---|
| ಕಾಂಚೀ | .. | ಕಂಚಿಯ ಶಿಲಾಶಾಸನ |
| ಕಾರ್ಮಣೇಯಾರ ವಿಷಯ | .. | ನವಸಾರಿ ತಾಮ್ರಶಾಸನ |

**೨ನೆಯ ಕೀರ್ತಿವರ್ಮ—**

| | | |
|---|---|---|
| ಬೆಳ್ವೊ (ಬೆಳ್ವ)ಲ ವಿಷಯ | .. | ಕೆಂದೂರು, ಪಟ್ಟದಕಲ್ ಶಾಸನಗಳು |
| ಭೀಮರಥೀ; ಭಂಡಾರಗವಿಟ್ಟಗೆ ಪಾನುಂಗಲ್ ವಿಷಯ | .. | ವಕ್ಕಲೇರಿ ತಾಮ್ರಶಾಸನ |
| ನೆಲೆವೊಡಿಗೆ; ಕರಿವೊಡೆ ವಿಷಯ ಭೈಮರಥೀ | .. | ಐಸೂಲಿ ತಾಮ್ರಶಾಸನ |

ಇವುಗಳಲ್ಲಿ ಬೆಳ್ವೊಲ ವಿಷಯವು ಗದಗ, ರೋಣ, ನವಲಗುಂದ ತಾಲೂಕುಗಳ ಭಾಗಗಳನ್ನೊಳಕೊಂಡಿತ್ತು. ಪಾನುಂಗಲ್ ವಿಷಯವು ಹಾನಗಲ್ ತಾಲೂಕಿನಲ್ಲಿತ್ತು. ಕರಿವೊಡೆ ವಿಷಯವು ಸೇಂದ್ರಕ ರಾಜ್ಯದಲ್ಲಿ ಸೇರಿರಬೇಕು. ಸೇಂದ್ರಕರು ಮೈಸೂರಿನ ನೈಋತ್ಯಭಾಗದಲ್ಲಿ ಆಳುತ್ತಿದ್ದರು.

ಅಂತು ಮೇಲಿನ ಭೂವಿವರಣೆಯಿಂದ ಚಲುಕ್ಯರಾಜ್ಯವು ಉತ್ತರದಲ್ಲಿ ನವಸಾರಿ ಅಥವಾ ತಾಪೀನದಿ— ನರ್ಮದೆಯ ವರೆಗೂ ಇದ್ದಿರಬಹುದು–

ಪಶ್ಚಿಮದಲ್ಲಿ ಸಮುದ್ರ, ದಕ್ಷಿಣದಲ್ಲಿ ಪಲ್ಲವರಾಜ್ಯ, ಪೂರ್ವದಲ್ಲಿ ಗುಂಟೂರು ಜಿಲ್ಲೆಯ ನರಸರಾವಪೇಟ ತಾಲೂಕು, ನೆಲ್ಲೂರು ಜಿಲ್ಲೆಯ ದರ್ಶಿ, ಇವುಗಳೇ ಮೇರೆಯಾಗಿದ್ದ ವಿಸ್ತಾರವಾದ ಭೂಪ್ರದೇಶದಲ್ಲಿತ್ತು. ಕಡಪಾ ಚೋಳರು, ಚಲುಕ್ಯ ಪಲ್ಲವರ ರಾಜ್ಯಗಳ ಮಧ್ಯದಲ್ಲಿದ್ದುದರಿಂದ ಕಡಪಾ ಜಿಲ್ಲೆಯು ಇವರ ರಾಜ್ಯದಲ್ಲಿ ಸೇರಿದ್ದಿಲ್ಲ.

## ಮಹಾರಾಷ್ಟ್ರಕತ್ರಯ

ಪುಲಕೇಶಿ ೯೯೦೦೦ ಗ್ರಾಮಗಳುಳ್ಳ ಮೂರು ಮಹಾರಾಷ್ಟ್ರಕಗಳಿಗೆ ಅಧಿಪತಿಯಾದನೆಂದು ಐಹೊಳೆ ಶಾಸನದಲ್ಲಿ ಬರೆದಿದೆ. ಅವನ ರಾಜಧಾನಿ ವಾತಾಪಿ ( ಬಾದಾಮಿ ) ಯಾಗಿತ್ತು. ಕ್ರಿ. ಶ. ಸುಮಾರು ೬೪೦ರಲ್ಲಿ ದಕ್ಷಿಣ ಹಿಂದುಸ್ತಾನದಲ್ಲಿ ಸಂಚರಿಸುವಾಗ ಹುಎನ್‌ತ್ಸಾಂಗನು ದ್ರವಿಡ ದೇಶದಿಂದ ಉತ್ತರಕ್ಕೆ ಹೊರಟು ಭಯಂಕರವಾದ ಅರಣ್ಯವನ್ನು ದಾಟಿ ಎರಡು ಊರುಗಳ ಮೇಲೆ ಹಾಯ್ದು ೨೦೦೦ ಲಿ. ( ಸು. ೪೦೦ ಮೈಲು ) ಹೋದಮೇಲೆ ' ಕುನ್ಕನಪುಲೋ ' ದೇಶವನ್ನು ಸೇರಿದನೆಂದೂ ಅಲ್ಲಿಂದ ವಾಯುವ್ಯದಿಕ್ಕಿನಲ್ಲಿದ್ದ ಕಾಡನ್ನು ಹೊಕ್ಕು ೨೫೦೦ ಲಿ ( ಸು. ೫೦೦ ಮೈಲು ) ಪ್ರಯಾಣಮಾಡಿದ ನಂತರ ' ಮೊಹಲಚ (ಟ) ' ದೇಶವನ್ನು ಮುಟ್ಟಿದನೆಂದೂ ಅವನ ಸಂಚಾರದ ಟಿಪ್ಪಣಿಗಳಲ್ಲಿ ಬರೆದಿದೆ.[1] ಇಲ್ಲಿಂದ ಪಶ್ಚಿಮಕ್ಕೆ ೧೦೦೦ ಲಿ (ಸು. ೨೦೦ ಮೈಲು) ಹೋದ ಮೇಲೆ ನರ್ಮದಾನದಿಯನ್ನು ದಾಟಿ ' ಪೊಲುಕು ( ಕ ) ಚೆಪನ್ (ಪೊ) ' = ಭರುಕಚ್ಛವನ್ನು ಪ್ರವೇಶಿಸಿದನೆಂದು ಅಲ್ಲಿಯೇ ಉಕ್ತವಾಗಿದೆ. ದ್ರವಿಡ ದೇಶದ ಉತ್ತರಕ್ಕಿದ್ದ ಭಯಂಕರವಾದ ಅರಣ್ಯವು ಪೂರ್ವಘಟ್ಟವು. ಕುನ್ಕನಪುಲೋ ದೇಶವು ಚಂದ್ರಹಾಸನ ರಾಜಧಾನಿಯೆಂದು ಹೆಸರುಗೊಂಡ ಕುಂತಲಪುರ ( ಕುಬಟ್ಟೂರು ) ವನ್ನೊಳಗೊಂಡ ಕುಂತಲದೇಶವೆಂದು ನಮ್ಮ ಅಭಿಪ್ರಾಯ. ಇದೇ ಕದಂಬರ ಕುಂತಲದೇಶವು ಅಥವಾ ಬನವಾಸಿ ದೇಶವು. ಹುಎನ್‌ತ್ಸಾಂಗನು ದ್ರವಿಡ ದೇಶದಿಂದ ನೇರವಾಗಿ ಕುಂತಲಕ್ಕೆ ಹೋಗದೆ ಪೂರ್ವಘಟ್ಟದ ಕಟ್ಟಡವಿಯಲ್ಲಿ ಬಿದ್ದು ಅಲ್ಲಿಂದ ಮುಂದಕ್ಕೆ ಸುತ್ತುಹಾದಿಯಿಂದ ಬಂದಂತೆ ತೋರುತ್ತದೆ. ಆದುದರಿಂದಲೇ ಅವನು ಕೊಟ್ಟ ಅಳತೆ ಈಗಿನ ನಮ್ಮ ಗಣನೆಗೆ ಹೆಚ್ಚಾಗಿ ಕಾಣಿಸುತ್ತದೆ. ಕುಂತಲ ದೇಶದ ಉತ್ತರಕ್ಕೆ ೫೦೦ ಮೈಲುಗಳ ಮೇಲೆಯೂ ಭರುಕಚ್ಛದ ಪೂರ್ವಕ್ಕೆ ೨೦೦ ಮೈಲುಗಳ

---

[1] *Yuam-Chwang* by Watters.

ದೂರದಲ್ಲಿಯೂ ಇದ್ದ 'ಮೊಹಲಚ(ಟ)'ವು ಖಾನದೇಶ ಸಾತಾರೆಗಳ ನಡುವೆ ಇದ್ದ ಈಗಿನ ಮಹಾರಾಷ್ಟ್ರವು. ಹುಎನ್‌ತ್ಸಂಗನು 'ಮೋಹಲಚ'ವನ್ನು ತಲ್ಪಿದ ಮೇಲೆ ಅಲ್ಲಿ ಪುಲಿಕೇಶಿಯ ರಾಜ್ಯವಿಸ್ತಾರವೇ ಮೊದಲಾದ ಸಂಗತಿಗಳನ್ನು ಕೇಳಿಕೊಂಡು ಬರೆದಿಟ್ಟಿರಬೇಕು. ಆಗ ಪುಲಿಕೇಶಿ ಸೈನ್ಯದೊಂದಿಗೆ ಅಲ್ಲಿಯೇ ಇದ್ದನಾದುದರಿಂದ ಅವನ ರಾಜ್ಯವನ್ನೆಲ್ಲ ಈ ಪ್ರವಾಸಿಕನು ಮಹಾ-ರಾಷ್ಟ್ರವೆಂದು ತಪ್ಪುತಿಳಿದುಕೊಂಡಂತೆ ತೋರುತ್ತದೆ. ಇಲ್ಲದಿದ್ದರೆ ಪುಲಿಕೇಶಿಯ ವಿಸ್ತಾರವಾದ ಬೇರೆಬೇರೆ ಭಾಗಗಳಿಗೆ ಕರ್ಣಾಟಕ, ಕುಂತಳ, ಮಹಾರಾಷ್ಟ್ರ, ಲಾಟ ಎಂದು ಹೆಸರುಗಳು ಪ್ರಚಾರದಲ್ಲಿದ್ದರೂ ಅವುಗಳನ್ನು ಕೊಡದೆ ಅವನ ರಾಜ್ಯವನ್ನು ಮಹಾರಾಷ್ಟ್ರವೆಂದು ಕರೆದುದು ಸಮಂಜಸವಾಗುವುದಿಲ್ಲ. ಮಹಾಭಾರತದಲ್ಲಿ ಕರ್ಣ್ಣಾಟ ಕರ್ಣ್ಣಾಟ್ಟ, ಕರ್ಣಾಟಕ ಎಂಬ ಹೆಸರಿನ ರಾಜ್ಯವು ಉಕ್ತವಾಗಿದೆ.[1] ೬ನೆಯ ಶತಮಾನದ ಆದಿಯಲ್ಲಿ ಹುಟ್ಟಿದ ಬೃಹತ್ಸಂಹಿತೆಯಲ್ಲಿ ಈ ಕರ್ಣಾಟಕ ಮೊದಲಾದ ಪ್ರಾಂತಗಳು ನಿರ್ದಿಷ್ಟವಾಗಿವೆ. ಮಹಾವಂಸದಲ್ಲಿ ಮೊಗ್ಗಲಿಪುತ್ತ ತಿಸ್ಸನು ಅಶೋಕನ ಆಳಿಕೆಯ ೧೭ನೆಯ ವರ್ಷದಲ್ಲ 'ಥೇರೊಮಹಾಧಮ್ಮರಕ್ಖಿತೊ' ನನ್ನು 'ಮಹಾರಟ್ಠ' (ಮಹಾರಾಷ್ಟ್ರ) ದೇಶಕ್ಕೂ ಥೋರೋರಕ್ಖಿತೋನನ್ನು 'ವನವಾಸಿ' ದೇಶಕ್ಕೂ ಕಳುಹಿಸಿದನೆಂದು ಉಕ್ತವಾಗಿದೆ. ಮಹಾರಟ್ಠವು ದೀಪವಂಸದಲ್ಲಿಯೂ ನಿರ್ದಿಷ್ಟವಾಗಿದೆ. ಈಗ ವನವಾಸಿದೇಶವೆಂದರೆ ಕುಂತಲವೇ. ಇದರಿಂದ ಕುಂತಲ ಮಹಾರಾಷ್ಟ್ರಗಳು ಭಿನ್ನಭಿನ್ನವಾಗಿದ್ದವೆಂದು ಗೊತ್ತಾಗುತ್ತದೆ. ಮಾರ್ಕಂಡೇಯ, ಬ್ರಹ್ಮ, ವಾಯು ಮೊದಲಾದ ಪುರಾಣಗಳಲ್ಲಿ ಮಹಾರಾಷ್ಟ್ರವು ಅಪರಾಂತ (ಕೊಂಕಣ) ದಿಂದ ಭಿನ್ನವಾಗಿತ್ತೆಂದು ಹೇಳಿದೆ. ರಾಜಶೇಖರನು (ಕ್ರಿ. ಶ. ೯೦೦) ಬಾಲರಾಮಾಯಣದಲ್ಲಿ ವಿದರ್ಭ, ಕುಂತಲ, ಮಹಾರಾಷ್ಟ್ರಗಳನ್ನು ಪ್ರತ್ಯೇಕವಾಗಿ ಬಣ್ಣಿಸುತ್ತಾನೆ. ಕಾವ್ಯಮೀಮಾಂಸಾದಲ್ಲಿ ಈ ದೇಶಗಳಲ್ಲದೆ ಕರ್ಣಾಟಕವೂ ನಿರ್ದಿಷ್ಟವಾಗಿದೆ, ವಾಮನಪುರಾಣದಲ್ಲಿ ಮಹಾರಾಷ್ಟ್ರವು ಗೋದಾವರೀ ಕೃಷ್ಣಾನದಿಗಳ ಮಧ್ಯದಲ್ಲಿದ್ದ ಪ್ರದೇಶವೆಂದು ಬರೆದಿದೆ. ಮಹಾವಂಶದಲ್ಲಿ ಕೊಟ್ಟ ದಕ್ಷಿಣಾಪಥದ ದೇಶಗಳ ವಿವರಣೆಯಿಂದ ಆ ಕಾಲದಲ್ಲಿ ಮಹಾರಾಷ್ಟ್ರ ದೇಶವು, ಉತ್ತರದಲ್ಲಿ ನರ್ಮದಾನದಿ, ದಕ್ಷಿಣದಲ್ಲಿ ವನವಾಸಿದೇಶ, ಪಶ್ಚಿಮದಲ್ಲಿ ಕೊಂಕಣ ಇವುಗಳ

---

[1] Sorensen: Mahābhārata Index. **ಮಹಾಭಾರತದ ಔತ್ತರೀಯ ದಾಕ್ಷಿಣಾತ್ಯ ಪಾಠಗಳೆರಡರಲ್ಲಿಯೂ 'ಕರ್ಣಾಟಕ' ದ ನಿರ್ದೇಶವಿದೆ.**

ನಡುವೆ ಇದ್ದ ಒಂದು ಪ್ರಾಂತವಾಗಿತ್ತೆಂದು ಪ್ರೊ. ಕಾಣೆಯುವರು ಹೇಳಿದ್ದಾರೆ.[1] ಈ ಆಧಾರಗಳಿಂದ ಮೊದಲಿನಿಂದಲೂ ಮಹಾರಾಷ್ಟ್ರವು ಕರ್ಣಾಟಕದಿಂದ ಭಿನ್ನವಾದ ಒಂದು ಚಿಕ್ಕ ಪ್ರಾಂತವಾಗಿತ್ತೆಂದೂ ಪುಲಿಕೇಶಿಯ ವಿಸ್ತಾರವಾದ ರಾಜ್ಯಕ್ಕೆಲ್ಲ ಮಹಾರಾಷ್ಟ್ರವೆಂಬ ಹೆಸರಿದ್ದಿರುವುದು ಸಂಭವವಿಲ್ಲವೆಂದೂ ಸ್ಪಷ್ಟವಾಗುತ್ತದೆ. ಕರ್ಣಾಟಕ ಎಂಬ ಶಬ್ದದ ಮೂಲರೂಪವು ಕರುನಾಡು ( ದೊಡ್ಡನಾಡು ) ಎಂದು ಭಾವಿಸಿ ಕರುನಾಡು ಮಹಾರಾಷ್ಟ್ರಗಳು ಏಕಾರ್ಥದ್ಯೋತಕವಾದುದರಿಂದ ಅವೆರಡೂ ಒಂದೇ ಪ್ರಾಂತದ ಹೆಸರುಗಳೆಂದು ಕೆಲವರು ಅಭಿಪ್ರಾಯಪಟ್ಟಿರುವುದೂ ಸರಿಯಲ್ಲ.[2]

ಪುಲಿಕೇಶಿಯು ಮೂರುರಾಷ್ಟ್ರಗಳ ಆಧಿಪತ್ಯವನ್ನು ಹೊಂದಿದ ಮೇಲೆ ಪೂರ್ವದಿಕ್ಕಿನಲ್ಲಿದ್ದ ಕೋಸಲ, ಕಳಿಂಗ, ಪಿಷ್ಟಪುರ, ಪಲ್ಲವರಾಜ್ಯಗಳನ್ನು ಗೆದ್ದನಾದುದರಿಂದ ಈ ಭಾಗಗಳು ಮೂರು ಮಹಾರಾಷ್ಟ್ರಕಗಳಲ್ಲಿ ಸೇರಿದ್ದಿಲ್ಲವೆಂದು ತಿಳಿಯಬಹುದು. ವರದಾನದಿಯ ದಡದಲ್ಲಿದ್ದ ವನವಾಸಿಯನ್ನು ವಶಪಡಿಸಿಕೊಳ್ಳುವಾಗ ಗಂಗ ಆಳುಪರು ತಾವಾಗಿಯೇ ಪುಲಿಕೇಶಿಗೆ ಶರಣಾಗತರಾದುದರಿಂದಲೂ ಕೊಂಕಣವನ್ನು ಕಿತ್ತುಕೊಂಡಾಗ ಲಾಟ, ಮಾಳವ, ಗೂರ್ಜರರು ಕಾಲಿಗೆ ಬಿದ್ದುದರಿಂದಲೂ ಹರ್ಷವರ್ಧನನ್ನು ವಿಂಧ್ಯಪರ್ವತದ ತಪ್ಪಲಲ್ಲಿ ಸೋಲಿಸಿದ್ದುದರಿಂದಲೂ ಮಹಾರಾಷ್ಟ್ರಕತ್ರಯದಲ್ಲಿ ಗಂಗ, ಆಳುಪ, ಲಾಟ, ಮಾಳವ, ಗೂರ್ಜರ ರಾಜ್ಯಗಳು ಸೇರಿದ್ದಿಲ್ಲವೆಂದೂ ಅದು ವಿಂಧ್ಯಪರ್ವತ ವರದಾನದಿಗಳ ನಡುವೆ ಇದ್ದ ದೇಶಗಳನ್ನು ಒಳಗೊಂಡಿತ್ತೆಂದೂ ತಿಳಿಯಬಹುದು. ಮಹಾರಾಷ್ಟ್ರವೆಂದು ಪ್ರಸಿದ್ಧವಾದ ದೇಶವು ಕೃಷ್ಣಾ ಗೋದಾವರಿಗಳ ಮಧ್ಯದಲ್ಲಿದ್ದುದರಿಂದ 'ಮಹಾರಾಷ್ಟ್ರಕತ್ರಯ' ಎಂಬ ಪದದಿಂದ ಮಹಾರಾಷ್ಟ್ರಕವೆಂಬ ಹೆಸರಿನ ಮೂರುದೇಶಗಳೆಂಬ ಅರ್ಥವಾಗಲಾರದು. ಗ್ರಾಮ, ವಿಷಯ, ರಾಷ್ಟ್ರ, ದೇಶಗಳಂತೆ ಮಹಾರಾಷ್ಟ್ರವು ರಾಜ್ಯಭಾರದ ಸೌಕರ್ಯಕ್ಕಾಗಿ ಮಾಡಿಕೊಂಡ ಒಂದು ರಾಜಕೀಯ ವಿಭಾಗವಾಗಿರಬೇಕು. ನಾಡು ಮಹಾನಾಡು, ಗ್ರಾಮ ಮಹಾಗ್ರಾಮ, ಅಗ್ರಹಾರ ಮಹಾಗ್ರಹಾರ, ಸ್ಥಾನ ಮಹಾಸ್ಥಾನ, ಇವೇ ಮೊದಲಾದ ಶಬ್ದಗಳಲ್ಲಿ

---

[1] *Jour. Bom. Br. R. A. Soc.* 1916, Vol. XXIV, pp. 620 ff.

[2] *Ind. Ant.* for the year 1928.

**ಕರಣ + ಅಟ ಎಂಬ ಕಾಡುಜನರ ಸಂಸರ್ಗದಿಂದ ಕರ್ಣಾಟರು ಹುಟ್ಟಿದರೆಂಬ ಶ್ರೀರಾಜವಾಡೆಯವರ ನಿರುಕ್ತಿ ( ಭಾ. ಇ. ಸ. ಮಂ. ಪುಣೆ ) ಕುಚೋದ್ಯವೇ ಸರಿ.**

ಮಹಾ ಎಂಬ ವಿಶೇಷಣವು ದೊಡ್ಡದು ಎಂಬ ಅರ್ಥವನ್ನು ಕೊಡುತ್ತದೆ. ಮಹಾನಾಡಿನಲ್ಲಿ ಅನೇಕ ನಾಡುಗಳು ಸೇರಿದ್ದವೆಂದು ಲಿಪಿಗಳಿಂದ ಗೊತ್ತಾಗುತ್ತದೆ. ಸು. ೬ನೆಯ ಶತಮಾನದ ಕಡೆಯ ಭಾಗದಲ್ಲಿದ್ದ ಕದಂಬ ಭೋಗಿವರ್ಮನ ತಗರೇ ತಾಮ್ರಶಾಸನದಲ್ಲಿ ತಗರೇ ವಿಷಯದಲ್ಲಿದ್ದ ತಗರೇ ಮಹಾಗ್ರಾಮವು ೨೪ ಹಳ್ಳಿಗಳನ್ನು ಒಳಕೊಂಡಿತ್ತೆಂದು ಬರೆದಿದೆ. ಇದರಿಂದ ಮಹಾಗ್ರಾಮವು ಗ್ರಾಮಕ್ಕಿಂತ ದೊಡ್ಡದಾದ ರಾಜಕೀಯ ವಿಭಾಗವೆಂದು ಗೊತ್ತಾಗುತ್ತದೆ. ಇದರಂತೆ ಅನೇಕ ರಾಷ್ಟ್ರಗಳನ್ನೊಳಕೊಂಡಿದ್ದ ಒಂದು ವಿಸ್ತಾರವಾದ ರಾಜಕೀಯ ವಿಭಾಗಕ್ಕೆ ಮಹಾರಾಷ್ಟ್ರವೆಂಬ ಸಂಕೇತವಿತ್ತೆಂದು ತಿಳಿಯುವುದು ಯುಕ್ತವಾಗಿದೆ. ಕರ್ನಾಟಕ, ಕುಂತಳ, ಮಹಾರಾಷ್ಟ್ರಗಳೇ (ಕೊಂಕಣ ಸಹಿತ) ವರದಾನದಿ ವಿಂಧ್ಯಪರ್ವತಗಳ ಮಧ್ಯದಲ್ಲಿದ್ದ ಪುಲಿಕೇಶಿಯ ವಿಸ್ತಾರವಾದ ರಾಜ್ಯದ ಮೂರು ದೊಡ್ಡ ಭಾಗಗಳು. ರಾಜಧಾನಿಯಾದ ವಾತಾಪಿಪುರದ ಸುತ್ತಲಿನ ಭಾಗವಾದ ಕರ್ನಾಟಕವನ್ನು ಪುಲಿಕೇಶಿ ತಾನಿಟ್ಟುಕೊಂಡು ಉಳಿದ ಭಾಗಗಳ ಮೇಲೆ ಪ್ರತಿನಿಧಿಗಳನ್ನು ನೇಮಿಸಿದಂತೆ ತೋರುತ್ತದೆ. ಕುಂತಲವು ಕದಂಬರ ವಶದಲ್ಲಿತ್ತು. ವೇಂಗಿ ಮಂಡಲಕ್ಕಧಿಪತಿಯಾಗುವ ವರೆಗೆ ಕುಬ್ಜವಿಷ್ಣುವರ್ಧನನು ಮಹಾರಾಷ್ಟ್ರವನ್ನಾಳುತ್ತಿದ್ದನೆಂದು ಸಾತಾರಾ ತಾಮ್ರಶಾಸನದಿಂದ ಊಹಿಸಬಹುದು. ಈ ವಿಸ್ತಾರವಾದ ರಾಜ್ಯವು ಟಾಲೆಮಿ ಕಾಲದಲ್ಲಿ (ಕ್ರಿ. ಶ. ೨ನೇ ಶತಮಾನ) ಮೂರು ದೊಡ್ಡ ಭಾಗಗಳಾಗಿ ವಿಂಗಡಿಸಲ್ಪಟ್ಟಿತ್ತೆಂದು ಅವನ ಭೂಗೋಲ ವರ್ಣನೆಯಿಂದ ತಿಳಿಯುತ್ತದೆ. ಅವೇ ಭಾಗಗಳು ಪುಲಿಕೇಶಿಯ ಕಾಲದಲ್ಲಿಯೂ ಇದ್ದಿರಬಹುದು.

ಕೆಲವರು ಪುಲಿಕೇಶಿಯ ರಾಜ್ಯವು ೯೯೦೦೦ ಗ್ರಾಮಗಳನ್ನೊಳಗೊಂಡ ಮಹಾರಾಷ್ಟ್ರಕತ್ರಯವೆಂದು ಐಹೊಳೆ ಶಾಸನದಿಂದ ಸ್ಪಷ್ಟವಾಗುವುದಿಲ್ಲವೆಂದೂ ಆ ಮಹಾರಾಷ್ಟ್ರಕತ್ರಯವು ಲಾಟ, ಮಾಳವ, ಗೂರ್ಜರ ದೇಶಗಳಂತೆ ಒಂದು ದೇಶದ ಹೆಸರಾಗಿರಬೇಕೆಂದೂ ಅದು ಕಲಿಂಗ ಕೋಸಲಗಳ ಪಶ್ಚಿಮದಲ್ಲಿರಬೇಕೆಂದೂ ಪ್ರತಿಪಾದಿಸುತ್ತಾರೆ. ಆದರೆ "ಅಗಮದಧಿಪತಿತ್ವಂ ಯೋ ಮಹಾರಾಷ್ಟ್ರಕಾಣಾಂ ನವನವತಿ ಸಹಸ್ರಗ್ರಾಮಭಾಜಾಂ ತ್ರಯಾಣಾಂ" ಎಂಬ ಶ್ಲೋಕದಲ್ಲಿ ಮಹಾರಾಷ್ಟ್ರಕತ್ರಯದಲ್ಲಿ ೯೯೦೦೦ ಗ್ರಾಮಗಳಿದ್ದವೆಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ ಮಂಗಲೇಶನ ಕೊಲೆಯಾದ ಮೇಲೆ ಛತ್ರಭಂಗವಾಗಲು ಅದನ್ನು ಅಡಗಿಸಿದ ಮೇಲೆ ಪುಲಿಕೇಶಿ ರಾಜ್ಯಾಭಿಷಿಕ್ತನಾದುದು ಸ್ವಾಭಾವಿಕವಾಗಿರುವುದರಿಂದಲೂ 'ಅಗಮದಧಿಪತಿತ್ವಂ' ಎಂಬ

ವಾಕ್ಯದಿಂದ ಅವನು ಬಂಡುಗಾರರನ್ನೂ ಶತ್ರುರಾಜರನ್ನೂ ಮುರಿಬಡಿದ ಮೇಲೆ ತನ್ನ ರಾಜ್ಯದಲ್ಲಿ ಅಭಿಷಿಕ್ತನಾದನೆಂದು ಸೂಚಿತವಾಗುತ್ತದೆ. ಮಹಾರಾಷ್ಟ್ರಕ-ತ್ರಯವು ದೇಶದ ಹೆಸರಾಗಿದ್ದುದು ಎಲ್ಲಿಯೂ ಉಕ್ತವಾಗಿಲ್ಲ. ಅದು ವರ್ಹಾಡ ದೇಶದ ಭಾಗವಾದ ಮಹಾರಾಷ್ಟ್ರವೇ ಆಗಿದ್ದರೆ[1] ಪುಲಿಕೇಶಿಯ ರಾಜ್ಯದ ಪರಿಮಾಣವು ಬಹು ಚಿಕ್ಕದಾಗುತ್ತದೆ. ಐಹೊಳೆಯ ಶಾಸನವನ್ನು ಚನ್ನಾಗಿ ವಿಮರ್ಶಿಸಿದರೆ ಪುಲಿಕೇಶಿಯ ರಾಜ್ಯವು ಮಹಾರಾಷ್ಟ್ರಕತ್ರಯವನ್ನೊಳ-ಕೊಂಡಿತ್ತೆಂದು ಗೊತ್ತಾಗದೆ ಇರಲಾರದು. ಈ ಸಂಕೇತದ ವ್ಯಾಪ್ತಿಯನ್ನು ಕುರಿತು ಇಲ್ಲಿ ನಮ್ಮ ಅಭಿಪ್ರಾಯವನ್ನು ಸೂಚಿಸಿದ್ದೇವೆ.[2]

ಅವಿಧೇಯನ ಪಾಂಡುರಂಗಪಳ್ಳಿ ತಾಮ್ರಶಾಸನವನ್ನು ಪ್ರಸಿದ್ಧಿಸುವಾಗ ಡಾ. ಎಮ್. ಎಚ್. ಕೃಷ್ಣ ಅಯ್ಯಂಗಾರರವರು ರಾಷ್ಟ್ರಕೂಟಮಾನಾಂಕನು ಸಾತ್ಪುಡಾಪರ್ವತಾವಳಿಯಲ್ಲಿ ತನ್ನದೊಂದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನೆಂದೂ ಅವನ ಮಗನಾದ ದೇವರಾಜನು ಪಿತೃರಾಜ್ಯವನ್ನು ಉತ್ತರದಲ್ಲಿ ಮಹಾನದಿ ತಾಪೀನದಿಗಳು, ದಕ್ಷಿಣದಲ್ಲಿ ಭೀಮಾನದಿಗಳವರೆಗೆ ಬೆಳೆಯಿಸಿದನೆಂದೂ, ಅವನಾದ ಮೇಲೆ ಈ ರಾಜ್ಯವು ಅವನ ಮಕ್ಕಳಾದ ಭವಿಷ್ಯ, ಅವಿಧೇಯ, ಜಯರಾಜರು ಹಂಚಿಕೊಂಡರೆಂದೂ ಈ ಮೂರು ಭಾಗಗಳೇ ಮಹಾರಾಷ್ಟ್ರಕತ್ರಯವಾಗಿರಬೇಕೆಂದೂ ಬರೆದಿದ್ದಾರೆ.[3] ಚಳುಕ್ಯ ರಾಜ್ಯವನ್ನು ಸ್ಥಾಪಿಸಿದ ಜಯಸಿಂಹನು ಇಂದ್ರನ ಮಗನಾದ ಕೃಷ್ಣನನ್ನು ಸೋಲಿಸಿದುದರಿಂದ ಈ ಇಂದ್ರನು ಅವಿಧೇಯನ ಮಗನಾಗಿರಬೇಕೆಂದೂ ಕೃಷ್ಣನ ವಂಶದವನೇ ೨ನೆಯ ಪುಲಿಕೇಶಿ ಸೋಲಿಸಿದ ಅಪ್ಪಾಯಿಕ ಗೋವಿಂದನೆಂದೂ[4] ಹೇಳಿದ್ದಾರೆ. ಆದರೆ ಭವಿಷ್ಯನ ಮಗನಾದ ಅಭಿಮನ್ಯು ರೇವಾ ಸಂಸ್ಥಾನದಲ್ಲಿದ್ದ ಮಾನಪುರದಲ್ಲಿ ಆಳುತ್ತಿದ್ದನೆಂದೂ ಕ್ರಿ. ಶ. ೭ನೆಯ ಶತಮಾನದಲ್ಲಿ ರಾಷ್ಟ್ರಕೂಟ ಮನೆತನದ ಯುದ್ಧಾಸುರನಂದರಾಜನು ಅಮರಾವತೀ ಜಿಲ್ಲೆಗೆ ಸೇರಿದ

---

[1] ಮರಾಠೀ ಭಾಷೆಯ ಮೂಲವಾದ ಮಹಾರಾಷ್ಟ್ರೀ ಪ್ರಾಕೃತವು ಮೊದಲು ವರ್ಹಾಡ ದೇಶದಲ್ಲಿ ಪ್ರಚಾರದಲ್ಲಿದ್ದಿತೆಂದೂ ಪ್ರಾಚೀನ ಮಹಾರಾಷ್ಟ್ರ ದೇಶವು ಅದೇ ಆಗಿರಬೇಕೆಂದೂ ಮರಾಠೀ ದೇಶದ ಕೆಲ ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ.

[2] ಈ ಅಭಿಪ್ರಾಯವು ನಿರ್ಣಯಾತ್ಮಕವೆಂದು ಹೇಳಲಿಕ್ಕಾಗದು. ಹೆಚ್ಚಿನ ನಿರ್ಧಾರಕ ಪ್ರಮಾಣಗಳು ಸಿಕ್ಕಿದರೆ ಇದರಲ್ಲಿ ಹೆಚ್ಚುಕಡಮೆಯಾಗಬಹುದು.

[3] *M. A. R.* 1931. pp 203–4.

[4] *Ibid.* pp. 202. ಅಪ್ಪಾಯಿಕ ಗೋವಿಂದರು ಇಬ್ಬರು ಪುಂಡರು. ಅವರು ಧಾಳಿಕೊಟ್ಟರೆಂದು ಐಹೊಳೆಶಾಸನದಲ್ಲಿ ಹೇಳಿಲ್ಲ,

ತೀವಾರಿಖೇಡ ಪ್ರಾಂತದಲ್ಲಿ ಆಳುತ್ತಿದ್ದನೆಂದೂ ಉಂಟಿಕವಾಟಿಕಾ, ತಿವಾರಿಖೇಡ ಮುಲ್ತಾಯಿ ಶಾಸನಗಳಿಂದ ಊಹಿಸಬಹುದು. ಮಾನಪುರದ ರಾಷ್ಟ್ರಕೂಟದ ಲಾಂಛನವು ಸಿಂಹವಾಗಿತ್ತು. ತಿವಾರಿಖೇಡ ರಾಷ್ಟ್ರಕೂಟರು ಗರುಡ ಲಾಂಛನರಾಗಿದ್ದುದರಿಂದ ಇವರಿಬ್ಬರೂ ಒಂದೇ ಮನೆತನದವರಾಗಿರಲಾರರು. ೭ನೆಯ ಶತಮಾನದ ಆದಿಯಲ್ಲಿ ತಿವಾರಿಖೇಡ ಪ್ರಾಂತದಲ್ಲಿ ಆಳುತ್ತಿದ್ದ ರಾಷ್ಟ್ರಕೂಟರ ರಾಜ್ಯವು ಭೀಮಾನದಿ ಮಾನಪುರಗಳ ಮಧ್ಯದಲ್ಲಿ ಬರುವುದರಿಂದ ಆ ಇಡೀ ರಾಜ್ಯದಲ್ಲಿ ದೇವರಾಜನ ಮೂವರು ಮಕ್ಕಳು ಮೂರು ಭಾಗಗಳನ್ನು ಮಾಡಿಕೊಂಡಿದ್ದರೆಂದು ತಿಳಿಯುವುದು ಸಮಂಜಸವಾಗುವುದಿಲ್ಲ. ಮತ್ತು ಚಳುಕ್ಯರ ರಾಜಧಾನಿಯಾದ ವಾತಾಪಿಪುರವು ಭೀಮಾನದಿಯ ದಕ್ಷಿಣದಲ್ಲಿ ಬಹುದೂರವಿರುವುದರಿಂದ ಭೀಮಾನದಿಯೇ ಮಹಾರಾಷ್ಟ್ರಕತ್ರಯದ ದಕ್ಷಿಣ ಮೇರೆಯಾಗಿದ್ದರೆ ಅದರಲ್ಲಿ ವಾತಾಪಿ ಸೇರಿದಂತಾಗುವುದಿಲ್ಲ. ಇದಲ್ಲದೆ ಮೂವರು ರಾಷ್ಟ್ರಕೂಟರಾಜರು ಪಿತೃರಾಜ್ಯದಲ್ಲಿ ಮೂರು ಭಾಗಗಳನ್ನು ಮಾಡಿಕೊಂಡಿದ್ದರೆ ಆ ಭಾಗಗಳಿಗೆ ಮಹಾರಾಷ್ಟ್ರಕವೆಂಬ ಹೆಸರು ಹೇಗೆ ಬರುವುದೋ ತಿಳಿಯದು. ಅಪ್ಪಾಯಿಕ ಗೋವಿಂದರಿಗೂ ಅವಿಧೇಯನ ಮನೆತನಕ್ಕೂ ಸಂಬಂಧವನ್ನು ಕಲ್ಪಿಸುವುದಾಗಲಿ, ೧೧–೧೨ ನೆಯ ಶತಮಾನದ ಕೌಠೇಂ, ಯೇವೂರು ಶಾಸನಗಳನ್ನು ೬–೭ ನೆಯ ಶತಮಾನದ ಇತಿಹಾಸ ರಚನೆಯಲ್ಲಿ ನಂಬಿ ರಾಷ್ಟ್ರಕೂಟ ಇಂದ್ರಕೃಷ್ಣರನ್ನು ಅವಿಧೇಯನ ಮಕ್ಕಳು, ಮೊಮ್ಮಕ್ಕಳೆಂದು ತಿಳಿಯುವುದಾಗಲಿ ನಿರ್ಧಾರಕ ಸಮಸಾಮಯಿಕ ಪ್ರಮಾಣಗಳು ಸಿಕ್ಕುವವರೆಗೆ ಸಮಂಜಸವಾಗುವುದಿಲ್ಲ.

ನಿರ್ಧಾರಕ ಪ್ರಮಾಣಗಳು ಸಿಕ್ಕುವವರೆಗೆ ಮಹಾರಾಷ್ಟ್ರಕತ್ರಯವೆಂದರೆ ಆಡಳಿತದ ಸೌಕರ್ಯಕ್ಕಾಗಿ ಮಾಡಿದ ಮೂರು ದೊಡ್ಡ ದೇಶ ಭಾಗಗಳೆಂದೂ ಅವು ಕರ್ನಾಟಕ ಕುಂತಲ ಮಹಾರಾಷ್ಟ್ರಗಳಾಗಿರಬಹುದೆಂದೂ ತಿಳಿಯಬಹುದು.

# ಭಾಗ ೩—ತಳಕಾಡಿನ ಗಂಗರು

ಗಂಗರು ಕ್ರಿ. ಶ. ೫ನೆಯ ಶತಮಾನಕ್ಕೆ ಮುಂಚೆಯೇ ಕುವಳಾಲಪುರ (ಕೋಲಾರ) ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕದಂಬರ ನೆರೆ ಪ್ರಾಂತದಲ್ಲಿ ಆಳುತ್ತಿದ್ದರು. ಇವರು ಜಾನ್ಹವೇಯ ಕುಲದವರು; ಕಾಣ್ವಾಯನ ಗೋತ್ರದವರು ; ನಂದಗಿರಿನಾಥರು. ಇವರ ರಾಜಚಿನ್ಹವು ಆನೆ. ಮೊಟ್ಟ ಮೊದಲಿನಿಂದಲೂ ಮೈಸೂರು ಪ್ರಾಂತದಲ್ಲಿಯೇ ಇವರು ಆಳುತ್ತಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಮತ್ತು ಇವರು 'ಕುವಳಾಲಪುರವರೇಶ್ವರ' ರೆಂದು ತಮ್ಮನ್ನು ಕರೆದುಕೊಳ್ಳುವುದರಿಂದಲೂ ನಂದಗಿರಿ (ನಂದಿದುರ್ಗ) ಯು ಇವರ ರಾಜ್ಯದ ಮುಖ್ಯ ದುರ್ಗವಾಗಿದ್ದುದರಿಂದಲೂ ಇವರ ಮೂಲ ಸ್ಥಾನವು ಮೈಸೂರು ದೇಶವೆಂದು ಹೇಳಬಹುದು. ಇವರ ಮನೆತನಕ್ಕೆ 'ಗಂಗ' ಎಂಬ ಹೆಸರು ಹೇಗೆ ಬಂದಿತೆಂದಾಗಲಿ ಇವರಿಗೆ ರಾಜ್ಯವು ಯಾವ ಸಂದರ್ಭಗಳಲ್ಲಿ ಪ್ರಾಪ್ತವಾಯಿತೆಂದಾಗಲಿ ಅವರ ಕಾಲದ ಲಿಪಿಗಳಲ್ಲೆಲ್ಲಿಯೂ ಉಕ್ತವಾಗಿಲ್ಲ. ಶಿವಮೊಗ್ಗ ಜಿಲ್ಲೆಯ ೬ನೆಯ ವಿಕ್ರಮಾದಿತ್ಯನ ಕಾಲದ ಕೆಲವು ಶಾಸನಗಳಲ್ಲಿ ಗಂಗರ ಚರಿತ್ರೆಯು ಹೀಗೆ ಕೊಡಲ್ಪಟ್ಟಿದೆ:—[1] ಗಂಗರು ಸೂರ್ಯವಂಶದ ಇಕ್ಷ್ವಾಕುಕುಲದವರು. ಇವರ ಮೂಲಪುರುಷನು ಧನಂಜಯನು. ಇವನ ಮಗನು ಹರಿಶ್ಚಂದ್ರನು. ನಗರ (೩೫), ಶಿವಮೊಗ್ಗ (೧೦) ಶಾಸನಗಳು [2] ಹರಿಶ್ಚಂದ್ರನ ಮಕ್ಕಳು ದಡಿಗ, ಮಾಧವರೆಂದು ಹೇಳುತ್ತವೆ. ಆದರೆ ಶಿವಮೊಗ್ಗೆಯ ಕೆಲ ಶಾಸನಗಳಲ್ಲಿ (೪, ೬೪) ಹರಿಶ್ಚಂದ್ರನ ತರುವಾಯದಲ್ಲಿ ಅನೇಕ ರಾಜರಾಳಿದ ಮೇಲೆ ಪದ್ಮನಾಭನು ಹುಟ್ಟಿದನೆಂದೂ ಅವನಿಗೆ ದಡಿಗ ಮಾಧವರೆಂಬ ಇಬ್ಬರು ಮಕ್ಕಳಾದರೆಂದೂ ಬರೆದಿದೆ. ಹರಿಶ್ಚಂದ್ರನಿಗೆ ಭರತನೆಂಬ ಮಗನಿದ್ದನು. ಅವನು ವಿಜಯ ಮಹಾದೇವಿ ಯನ್ನು ಮದುವೆಯಾದನು. ಅವಳು ಗರ್ಭಿಣಿಯಾದಾಗ್ಗೆ ಬಯಕೆಯನ್ನು ತೀರಿಸಿಕೊಳ್ಳುವುದಕ್ಕೆ ಗಂಗಾನದಿಯಲ್ಲಿ ಸ್ನಾನಮಾಡಿ ಪೂರ್ಣಮನೋರಥಳಾದುದರಿಂದ ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ಮಗುವಿಗೆ ಗಂಗಾದತ್ತ ಎಂಬ

---

[1] *Mysore and Coorg from Inscriptions*, P. 30

[2] *Epigraphia Carnatica* Vol. VIII.

ಹೆಸರು ಬಂದಿತು. ಇವನ ತರುವಾಯದಲ್ಲಿ ಕೆಲಕಾಲದ ಮೇಲೆ ವಿಷ್ಣುಗುಪ್ತನೆಂಬ ರಾಜನು ಯಜ್ಞಯಾಗಾದಿಗಳನ್ನು ಮಾಡಿ ಇಂದ್ರನನ್ನು ಸಂತೋಷಗೊಳಿಸಿ ಅವನಿಂದ ಒಂದು ಆನೆಯನ್ನು ಪಾರಿತೋಷಿಕವಾಗಿ ಪಡೆದನು. ವಿಷ್ಣುಗುಪ್ತನು ತನ್ನ ಮಕ್ಕಳಾದ ಭಗದತ್ತ ಶ್ರೀದತ್ತರಿಗೆ ಪೈತ್ರರಾಜ್ಯವನ್ನು ಹಂಚಿಕೊಟ್ಟನು. ಭಗದತ್ತನಿಗೆ ಕಲಿಂಗ ದೇಶವನ್ನು ಕೊಟ್ಟುದರಿಂದ ಅವನ ವಂಶಜರು ಕಲಿಂಗಗಂಗರೆಂಬ ಹೆಸರಾದರು. ಶ್ರೀದತ್ತನಿಗೆ ವಂಶಾನುಗತ ರಾಜ್ಯವನ್ನೂ ಆನೆಯನ್ನೂ ಕೊಟ್ಟುದರಿಂದ ಅವನ ವಂಶಜರು ಆನೆಯನ್ನು ಧ್ವಜಪಾಗಿಟ್ಟುಕೊಂಡರು. ಆಮೇಲೆ ಆಳಿದ ಪ್ರಿಯಬಂಧು ರಾಜನಿಗೆ ದೇವೇಂದ್ರನು ೫ ಚಿಹ್ನಗಳನ್ನು ಕೊಟ್ಟು 'ನಿನ್ನ ಮನೆತನದ ರಾಜರು ಮತಾಂತರವನ್ನು ಸ್ವೀಕಾರಮಾಡಿದ ಪಕ್ಷದಲ್ಲಿ ಅವು ನಷ್ಟವಾಗುವುವೆ'ಂದು ಹೇಳಿದನು. ಕೆಲಕಾಲದ ತರುವಾಯ ಪದ್ಮನಾಭನು ರಾಜ್ಯಾಧಿಪತಿಯಾದನು. ಅವನು ತಪಸ್ಸನ್ನು ಮಾಡಿ ಇಬ್ಬರು ಮಕ್ಕಳನ್ನು ಪಡೆದನು. ಉಜ್ಜಯಿನಿಯ ರಾಜನಾದ ಮಹೀಪಾಲನು ಪದ್ಮನಾಭನ ಮೇಲೆ ದಂಡೆತ್ತಿ ಬಂದು ಇಂದ್ರದತ್ತವಾದ ೫ ಚಿಹ್ನಗಳನ್ನು ಬೇಡಿದನು. ಪದ್ಮನಾಭನು ಅವುಗಳನ್ನು ಕೊಡಲಾರದೆ ಯುದ್ಧಕ್ಕೆ ಸನ್ನದ್ಧನಾದನು. ರಣಾಂಗಣಕ್ಕೆ ಹೋಗುವ ಪೂರ್ವದಲ್ಲಿ ತನ್ನ ಇಬ್ಬರು ಮಕ್ಕಳಿಗೆ ದಡಿಗಮಾಧವ ಎಂಬ ಬೇರೆ ಹೆಸರನ್ನಿಟ್ಟು ಅವರ ಕೈಯಲ್ಲಿ ಆ ೫ ಚಿಹ್ನಗಳನ್ನು ಕೊಟ್ಟು ಅವರನ್ನೂ ಅವರ ತಂಗಿಯನ್ನೂ ಅನೇಕ ಬ್ರಾಹ್ಮಣರೊಂದಿಗೆ ದಕ್ಷಿಣ ದೇಶಕ್ಕೆ ಕಳುಹಿಸಿದನು. ಅವರೆಲ್ಲರೂ ಪಯಣಮಾಡಿ ದಕ್ಷಿಣದಲ್ಲಿ ಪೇರೂರಿಗೆ[1] ಬಂದು ಅಲ್ಲಿ ಜೈನಮತದ ಸಿಂಹಣಂದಿ ಆಚಾರ್ಯರನ್ನು ಕಂಡರು. ಇವರು ಗಂಗ ರಾಜಕುಮಾರರ ವೃತ್ತಾಂತವನ್ನು ಕೇಳಿ ಆದರವುಳ್ಳವರಾಗಿ ದಯೆಯಿಂದ ಅವರಿಗೆ ಅನೇಕ ವಿದ್ಯೆಗಳಲ್ಲಿಯೂ ಯುದ್ಧಕಲೆಗಳಲ್ಲಿಯೂ ಶಿಕ್ಷಣವನ್ನು ಕೊಟ್ಟರು. ಇದರ ಪ್ರಭಾವದಿಂದ ಕುಮಾರರು ಪದ್ಮಾವತೀದೇವಿಯ ಪ್ರಸಾದವನ್ನು ಪಡೆದು ಒಂದು ಖಡ್ಗವನ್ನು ಸಂಪಾದಿಸಿದರು. ಮಾಧವನು ಈ ಖಡ್ಗದಿಂದ ಶಿಲಾಸ್ತಂಭವನ್ನು ಖಂಡಿಸಿ ರಾಜ್ಯಾಧಿಪತ್ಯವನ್ನು ಹೊಂದಿದನು. ಮುಂದೆ ದಡಿಗನ ಮಗನಾದ ಕಿರಿಯ ಮಾಧವನ ಸಂತತಿಯಲ್ಲಿ ಈ ರಾಜ್ಯವು ಉಳಿಯಿತು. ಇದೇ ತಳಕಾಡಿನ ಗಂಗರ ಗಂಗಮಂಡಲವು.

---

[1] ಕಡಪಾ ಜಿಲ್ಲೆಯಲ್ಲಿರುವ ಗಂಗಪೇರೂರೆಂದು ರಾಯಿಸರು ಹೇಳಿದ್ದಾರೆ. *Mysore and Coorg from Inscriptions*, p. 31

ಈ ಕಥೆಯು ಎಷ್ಟುಮಟ್ಟಿಗೆ ನಿಜವೆಂದು ನಿರ್ಧರಿಸಲು ಶಕ್ಯವಿಲ್ಲ. ಕಲಿಂಗ ಗಂಗರು ತಳಕಾಡಿನ ಗಂಗರ ಮನೆತನಕ್ಕೆ ಸೇರಿದವರೆಂಬುದು ಅವರ ಶಾಸನಗಳಲ್ಲಿ ಹೇಳಿದೆ. ಜೈನಗುರುವಿನ ಅನುಗ್ರಹದಿಂದ ಗಂಗರಾಜ್ಯವು ಸ್ಥಾಪಿತವಾಯಿತೆಂಬ ಅಂಶವು ತತ್ಕಾಲದ ಲಿಪಿಗಳಲ್ಲಿ ಉಕ್ತವಾಗಿದೆ. ಆದರೆ ಅವು ಮಾಧವನು ಮೂಲಪುರುಷನೆಂದೂ ಅವನ ಪುತ್ರಸಂತಾನದಲ್ಲಿ ಗಂಗಪಟ್ಟವು ಉಳಿಯಿತೆಂದೂ ಹೇಳುತ್ತವೆಯಲ್ಲದೆ ದಡಿಗನ ವಿಷಯವನ್ನೇ ಎತ್ತುವುದಿಲ್ಲ. ಅವನ ಹಿಂದೆ ಧನಂಜಯನಿಂದ ಪದ್ಮನಾಭನ ವರೆಗೆ ಆಳಿದ ರಾಜರ ಪರಂಪರೆಯಲ್ಲಿ ೧೧ನೆಯ ಶತಮಾನದ ಲಿಪಿಗಳಲ್ಲಿಯೂ ವ್ಯತ್ಯಾಸವು ಬರುವುದರಿಂದ ಅದರ ಸತ್ಯತೆಯ ಬಗ್ಗೆ ಸಂಶಯವುಂಟಾಗುತ್ತದೆ.

## ಗಂಗರ ಶಾಸನಗಳು :

ಗಂಗರ ಶಾಸನಗಳು ಮೈಸೂರು ಪ್ರಾಂತದಲ್ಲಿ ಹೇರಳವಾಗಿ ದೊರೆಯುತ್ತವೆ. ಅವುಗಳಲ್ಲಿ ತಾಮ್ರಶಾಸನಗಳೇ ವಿಪುಲವಾಗಿವೆ. ಮೈಸೂರು ಶಾಸನಗಳನ್ನು ಪ್ರಸಿದ್ಧಿಸಿದ ಲುಯಿ ರಾಯಿಸರು ಇವೆಲ್ಲವುಗಳನ್ನು ನಂಬಿ ಗಂಗರ ಇತಿಹಾಸವನ್ನು ಆಮೂಲಾಗ್ರವಾಗಿ ಬರೆದರು. ಫ್ಲೀಟರು ಮಾತ್ರ ಈ ಮನೆತನದ ಕೆಲವು ತಾಮ್ರಶಾಸನಗಳನ್ನು ಕೃತಕವೆಂದು ಬರೆದು ಕಲ್ಲಿನ ಮೇಲೆ ಬರೆದ ಲಿಪಿಗಳು ಮಾತ್ರ ವಿಶ್ವಸನೀಯವೆಂದೂ ತಾಮ್ರಪಟಗಳನ್ನವಲಂಬಿಸಿ ರಾಯಿಸರು ರಚಿಸಿದ ವಂಶವೃಕ್ಷವು ನಂಬಿಕೆಗರ್ಹವಲ್ಲವೆಂದೂ ಹೇಳಿದರು. ಇವರು ೧ನೆಯ ರಾಜಮಲ್ಲನ ವಳ್ಳಿಮಲೆ ಶಿಲಾಶಾಸನದ ಆಧಾರದಿಂದ ೧ನೆಯ ಶಿವಮಾರನ ತರುವಾಯ ರಾಜ್ಯವಾಳಿದ ಅರಸರೇ ನಿಜವಾಗಿಯೂ ಬಾಳಿ ಬದುಕಿದವರೆಂದೂ ಅವನ ಹಿಂದಿನವರು ಇರಲೇ ಇಲ್ಲವೆಂದೂ ಪ್ರತಿಪಾದಿಸಿದರು.[1] ಆದರೆ ಬರಬರುತ್ತ ಗಂಗರ ವಿಷಯವಾಗಿದ್ದ ತಮ್ಮ ಈ ವಿಚಾರಸರಣಿಯನ್ನು ತಿದ್ದಿಕೊಂಡರು. ಮತ್ತು ಗುಮ್ಮರೆಡ್ಡಿಪುರ, ಪೆನುಗೊಂಡೆ ತಾಮ್ರಶಾಸನಗಳನ್ನು ನೋಡಿ ಮಾಧವ ದುರ್ವಿನೀತ ರಾಜರ ಅಸ್ತಿತ್ವವನ್ನು ಒಪ್ಪಿಕೊಂಡುದಲ್ಲದೆ ಪೆನುಗೊಂಡೆ ಶಾಸನವೊಂದು ಮಾತ್ರ ನಂಬಲರ್ಹವೆಂದು ಬರೆದರು.[2] ಮುಂದೆ ಅನೇಕ ವಿಶ್ವಸನೀಯ ಶಾಸನಗಳು ಸಿಕ್ಕಿದ್ದರೂ ಅವುಗಳೆಲ್ಲ ಕೃತಕವೆಂಬ ಪಕ್ಷವನ್ನೇ ಸಾಧಿಸಿದರು. ಫ್ಲೀಟನಂಥ ವಿದ್ವಾಂಸನ ಈ ಹಟವಾದವನ್ನು ನೋಡಿ ಯಾವ ಪಂಡಿತರೂ ಗಂಗಮನೆತನದ ಇತಿಹಾಸವನ್ನು ಸಂಪೂರ್ಣವಾಗಿ ವಿಮರ್ಶೆಮಾಡಲಿಲ್ಲ. ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟುಗಳಲ್ಲಿ ಆರ್. ನರಸಿಂಹಾಚಾರ್ಯರು ಗಂಗರ ಶಾಸನಗಳನ್ನು ಐತಿಹಾಸಿಕ ಪೀಠಿಕೆಯೊಂದಿಗೆ ಪ್ರಸಿದ್ಧಮಾಡಿದ್ದಾರೆ. ಅವರು ಮಾಡಿದ ಕೆಲವು ವಿಧಾನಗಳನ್ನು ಕುರಿತು ಮಾತ್ರ ನಮ್ಮ ಅಭಿಪ್ರಾಯಗಳು ಭಿನ್ನವಾಗಿವೆ. ಅವುಗಳನ್ನು ಅಲ್ಲಲ್ಲಿ ಅವಕಾಶ ಸಿಕ್ಕಾಗ ಸಂಕ್ಷೇಪವಾಗಿ ವಿವರಿಸಿದ್ದೇವೆ.

---

[1] *Ep. Ind.* Vols. III, p. 176 ; VI, pp. 157 ff.
*Imperial Gazetteer* Vol. II.

[2] *See Fleet's note on the Penngoṇḍa Plates of Mādhavavarman in the Royal Asiatic Society Journal, for* 1915.



(Plate 10) ಪಟ್ಟದಕಲ್ಲು – ಔತ್ತರೀಯ ಮತ್ತು ದಾಕ್ಷಿಣಾತ್ಯ ವಾಸ್ತುಶೈಲಿಗಳಲ್ಲಿ
ಕಟ್ಟಲ್ಪಟ್ಟ ೮ನೆಯ ಶತಮಾನದ ದೇವಾಲಯಗಳು

ಈ ಮನೆತನದ ಶಾಸನಗಳಲ್ಲಿ ಸೃಷ್ಟಿಗಳಾವುವು ನಿಜವಾದವು-ಗಳಾವುವು ಎಂಬುದನ್ನು ನಿರ್ಧರಿಸುವುದು ಅವಶ್ಯವಿರುತ್ತದೆ. ಈ ಕೆಲಸವು ಕಷ್ಟಸಾಧ್ಯವಾದರೂ ಕೆಲ ಸಾಮಾನ್ಯ ತತ್ವಗಳಿಂದ ಅವುಗಳನ್ನು ವಿಂಗಡಿಸಬಹುದು. ಈ ತತ್ವಗಳಾವುವೆಂದರೆ :—

೧. ಲಿಪಿಸ್ವರೂಪ ( Palaeography ).— ಹಳೆಯ ಶಾಸನದ ಪ್ರತಿರೂಪವೆಂದು ಗೊತ್ತಾದ ಪಕ್ಷವೊಂದನ್ನು ಬಿಟ್ಟು ಉಳಿದೆಡೆಗಳಲ್ಲಿ ಲಿಪಿಸ್ವರೂಪವು ನಿರ್ಧಾರಕ ಅಂಶವೆಂದು ಧಾರಾಳವಾಗಿ ಹೇಳಬಹುದು. ಬೇರೆ ಬೇರೆ ಕಾಲಮಾನದಲ್ಲಿ ಬೇರೆ ಬೇರೆ ಬರೆಹವು ಪ್ರಚಾರದಲ್ಲಿ-ತ್ತೆಂಬುದು ಲಿಪಿಜ್ಞರಿಗೆ ತಿಳಿದ ವಿಷಯವು.

೨. ಭಾಷಾಸ್ವರೂಪ.— ಭಾಷೆ, ವ್ಯಾಕರಣ ನಿಯಮಗಳನ್ನನುಸರಿಸದೆ ಅಶುದ್ಧ ಪ್ರಯೋಗಗಳನ್ನೊಳಕೊಂಡಿದ್ದರೆ ಸಾಧಾರಣವಾಗಿ ಇದರಿಂದ ಶಾಸನವು ನಿಜವೇ ಅಲ್ಲವೇ ಎಂಬುದನ್ನು ತಿಳಿಯಬಹುದು. ಆದರೆ ಅನೇಕ ಕಾರಣಗಳಿಂದ ನಿಜವೆಂದು ಗೊತ್ತಾದ ಲಿಪಿಗಳಲ್ಲಿಯೂ ಈ ದೋಷವು ಕಂಡುಬರುತ್ತದಾದುದರಿಂದ ಭಾಷೆಯ ಶುದ್ಧತೆಯೊಂದೇ ನಿರ್ಧಾರಕವಾಗಲಾರದು. ಆಯಾಕಾಲದ ಭಾಷೆ ಆಯಾ ಕಾಲದ ಲಿಪಿ-ಗಳಲ್ಲಿರದೆ ವ್ಯತ್ಯಸ್ತವಾಗಿ ಕಂಡುಬಂದರೆ ಸಂಶಯಕ್ಕೆ ಆಸ್ಪದವುಂಟು.

೩. ನಿರ್ದಿಷ್ಟವಾದ ಕಾಲ.—

(ಅ) ಶಾಸನದ ವರ್ಷ, ತಿಥಿ ಮೊದಲಾದ ಅಂಗಗಳು ಸ್ವಾಮಿಕಣ್ಣು ಪಿಳ್ಳೆ, ಸುಯೆಲ್, ದೀಕ್ಷಿತ ಮೊದಲಾದ ಜ್ಯೋತಿಃಶಾಸ್ತ್ರಜ್ಞರು ಪ್ರಸಿದ್ಧಮಾಡಿದ ಪಟ್ಟಿಗಳ ಸಾಹಾಯ್ಯದಿಂದ ಸರಿಯೇ ಅಲ್ಲವೇ ಎಂಬುದನ್ನು ನಿಶ್ಚಯಿಸಬಹುದು. ಅಭ್ಯಂತರವಿದ್ದಲ್ಲಿ ಸಂಶಯಕ್ಕೆ ಆಸ್ಪದವುಂಟು. ಕ್ರಿ. ಶ. ೫೦೦ ರ ಪೂರ್ವದಲ್ಲಿ ೧೨ ವರ್ಷದ ಬಾರ್ಹಸ್ಪತ್ಯಮಾನವು ಪ್ರಚಾರದಲ್ಲಿತ್ತು. 'ಮಹಾ' ಎಂಬ ಪದವನ್ನು ಚೈತ್ರ-ವೈಶಾಖ ಮೊದಲಾದ ತಿಂಗಳುಗಳಿಗೆ ಹಿಂದೆ ಜೋಡಿಸಿ ಮಹಾಚೈತ್ರ ಮಹಾವೈಶಾಖ ಎಂದು ವರ್ಷಗಳು ನಿರ್ದೇಶಿಸಲ್ಪಡುತ್ತಿದ್ದವು. ಆಗ ಈಗಿನ ೬೦ ವರ್ಷದ ಕಾಲ-ಮಾನವು ಪ್ರಚಾರದಲ್ಲಿದ್ದಿಲ್ಲವೆಂದು ತೋರುತ್ತದೆ. ಈ ಅಂಶವೂ ಶಾಸನಗಳ ಸ್ವರೂಪವನ್ನು ನಿರ್ಧರಿಸುವುದಕ್ಕೆ ಸಹಾಯಕವಾಗುವುದು.

(ಇ) ಆಯಾಕಾಲದ ಲಿಪಿಯು ಮಾದರಿ ತಜ್ಞರಿಗೆ ಗೊತ್ತಿರುವುದರಿಂದ ಶಾಸನದಲ್ಲಿ ಕೊಟ್ಟಿರುವ ಕಾಲವೂ ಅದರ ಲಿಪಿಸ್ವರೂಪವೂ ಹೊಂದುತ್ತವೆಯೋ ಇಲ್ಲವೋ ಎಂಬುದನ್ನು ತಿಳಿಯಬಹುದು. ಮತ್ತು ಆಳಿಕೆಯ ಕಾಲವು ಗೊತ್ತಿಲ್ಲದ ರಾಜರ ವಿಷಯದಲ್ಲಿ ಒಂದು ತಲೆಗೆ ಸು. ೨೫-೩೦ ವರ್ಷಗಳ ಅವಧಿಯನ್ನು ಕೊಡುವುದುಂಟು. ಅದರಂತೆ ಲೆಕ್ಕಮಾಡಿ ನೋಡಿ ರಾಜರಾಜರ ನಡುವೆ ಸಂಭಾವ್ಯವಾದ ಅಂತರವಿರದಿದ್ದರೆ ಈ ಕಲ್ಪಿತ ಕಾಲಗಳನ್ನು ಕೊಡುವ ಶಾಸನಗಳನ್ನು ಕೃತಕವೆಂದು ಭಾವಿಸಬೇಕಾಗುತ್ತದೆ. ಉದಾ: ಹರಿವರ್ಮನ ತಂಜಾವೂರು ತಾಮ್ರಶಾಸನದ ಕಾಲವು ಶಕ ೧೬೯ ( ಕ್ರಿ. ಶ. ೨೪೭ ). ಅವನ ಮರಿಮಗನಾದ ಅವಿನೀತನ ಮಡಿಕೇರಿ ತಾಮ್ರಶಾಸನದ ಕಾಲವು ಶಕ ೩೮೮ (ಕ್ರಿ.ಶ. ೪೬೬). ಅಂದರೆ ೩ ತಲೆಗಳಿಗೆ ೨೧೮ ವರ್ಷಗಳಾದವು. ಇದು ಇತಿಹಾಸದಲ್ಲಿ ತೀರ ಅಸಂಭವವು.

೪. ಐತಿಹಾಸಿಕ ಪ್ರತಿಕೂಲಗಳು:— ಶಾಸನಗಳಲ್ಲಿ ನಿರ್ದಿಷ್ಟರಾದ ಇತರ ಅರಸುಮನೆತನಗಳ ಅರಸರು ಆಯಾ ಶಾಸನಗಳ ಕಾಲದಲ್ಲಿ ಇದ್ದಿಲ್ಲವೆಂಬುದು ಬೇರೆ ಪ್ರಮಾಣಗಳಿಂದ ನಿಷ್ಕೃಷ್ಟವಾಗಿದ್ದರೆ ಅವು ನಿಜವಲ್ಲವೆಂದು ತಿಳಿಯಬಹುದು. ಇದಲ್ಲದೆ ಅಲ್ಲಿ ಕೊಟ್ಟ ದಾನ ಭಾಗಿಗಳೂ ದಾತಾರರೂ ಯಾವುದೋ ಕಾಲದಲ್ಲಿ ಅಂದರೆ ಶಾಸನಗಳ ಕಾಲಕ್ಕೆ ಬಹಳ ಹಿಂದೆ ಅಥವಾ ಮುಂದೆ ಇದ್ದರೆಂಬುದು ನಿಶ್ಚಿತವಾಗಿದ್ದರೆ ಅಂಥ ಶಾಸನಗಳೂ ನಂಬಿಕೆಗರ್ಹವಲ್ಲ.

ಈ ನಿರ್ಣಾಯಕ ಅಂಶಗಳಿಂದ ಗಂಗರ ಶಾಸನಗಳನ್ನು ಪರೀಕ್ಷಿಸಿದರೆ ೧ನೆಯ ಮಾಧವನ ನಂದಿಶಾಸನ,[1] ತಾಗರ್ತಿಶಾಸನ,[2] ತಂಜಾವೂರ ಶಾಸನ,[3] ತಗಡೂರ ಶಾಸನ,[4] ಹರಿವರ್ಮನ ಕೂಡಲೂರು ಶಾಸನ,[5] ೩ನೆಯ ಮಾಧವನ ನೊಣಮಂಗಲಶಾಸನ,[6] ಮಡಿಕೇರಿಶಾಸನ,[7] ಬ್ರಿಟಿಶ್ ಮ್ಯೂಜಿಯಂ ಶಾಸನ,[8] ಕೋದುಂಜೆಱುವುಶಾಸನ,[9] ಜೆದರೂರುಶಾಸನ,[10] ದುರ್ವಿನೀತನ

---

1 *M. A. R.* 1914.
2 *Ep. Car.* Vol. VII, Sk. 52.
3 *Ind. Ant.* Vol. VIII, 212
4 *Ep. Car.* Vol. III, p. 202
5 *M. A. R.* 1021.
6 *Ep. Car.* Vol. X, Mr. 73.
7 *Coorg Inscriptions*, p. 1
8 *Ind. Ant.* Vol. XIV, p. 230.
9 *M. A. R.* 1924
10 *M. A. R.* 1925.

ಉತ್ತನೂರ,[1] ಮಲ್ಲೊಹಳ್ಳಿ ಶಾಸನಗಳು,[2] ಗಳಿಗೆಕೆರೆಶಾಸನ,[3] ನರಸಾಪುರ ಶಾಸನ,[4] ಸೂಡಿಶಾಸನ[5] ಇವೇ ಮೊದಲಾದುವು ಕೃತಕವಾದುವೆಂಬುದು ಸ್ಪಷ್ಟವಾಗುತ್ತದೆ. ನಿಜವಾದುವೆಂದು ನಿರ್ಧರಿಸಲ್ಪಟ್ಟ ಶಾಸನಗಳಲ್ಲಿ ಕೊಟ್ಟ ವಂಶವೃಕ್ಷ ಮತ್ತು ಇತರ ಸಂಗತಿಗಳು ಕೃತಕಶಾಸನಗಳಲ್ಲಿಯೂ ಇದ್ದರೆ ಅವುಗಳನ್ನು ಇತಿಹಾಸ ರಚನೆಗೆ ಉಪಯೋಗಿಸಬಹುದು.

ಕೆಲವು ನಿಜವಾದ ಶಾಸನಗಳನ್ನು ಫ್ಲೀಟ ಮೊದಲಾದ ಪಂಡಿತರು ಕೃತಕವೆಂದು ತಿಳಿದು ಅವುಗಳನ್ನು ಗಣನೆಗೆ ತರಕೂಡದೆಂದು ಹೇಳಿದ್ದಾರೆ. ಆದರೆ ಮೇಲೆ ಉಕ್ತವಾದ ನಿರ್ಧಾರಕ ಪ್ರಮಾಣಗಳಿಂದ ಪರೀಕ್ಷಿಸಿದಲ್ಲಿ ಅವರ ಅಭಿಪ್ರಾಯವು ಅನೇಕ ಎಡೆಗಳಲ್ಲಿ ಸದೋಷವಾಗಿರುತ್ತದೆಂದು ಸ್ಪಷ್ಟವಾಗುತ್ತದೆ.

೧. ಅವಿನೀತನ ನೊಣಮಂಗಲ ಶಾಸನ.[6]— ಇದರ ಲಿಪಿಯಲ್ಲಿ ದೋಷವೇನೂ ತೋರುವುದಿಲ್ಲ. ಸ್ವ**ಭುಜ** (೨ನೆಯ ಪಂಕ್ತಿ), ಪಿ**ತು**ರನ್ವಾಗತ**ಗುಣ** (೪ನೆಯ ಪಂಕ್ತಿ), ನಿಕಷೋಪಲ**ಭೂ**ತಸ್ಯ (೫ನೆಯ ಪಂಕ್ತಿ), ದತ್ತಕ**ಸೂ**ತ್ರ (೭ನೆಯ ಪಂಕ್ತಿ)ಗಳಲ್ಲಿ ಕಂಡುಬರುವ 'ಉ', 'ಊ'ಕಾರದ್ಯೋತಕವಾದ ಕೊಂಬುಗಳು ನಿಜವೆಂದು ನಿಶ್ಚಿತವಾದ ಪೆನುಗೊಂಡೆ ಚುಕುಟ್ಟೂರು ಶಾಸನಗಳಲ್ಲಿರುವಂತೆಯೇ ಇರುತ್ತವೆ. 'ತ', 'ಸ' ಅಕ್ಷರಗಳಾದರೂ ಈ ಶಾಸನಗಳಲ್ಲಿರುವ ಇವೆರಡು ಅಕ್ಷರಗಳನ್ನು ಹೋಲುತ್ತವೆ. ಅವಿನೀತನ ಈ ಶಾಸನದ ಅಕ್ಷರಗಳ ಸಾಮಾನ್ಯ ಸ್ವರೂಪವೂ ೬ನೆಯ ಶತಮಾನದ ಹಲಸಿ[7], ಸಂಗೊಳ್ಳಿ[8] ಶಾಸನಗಳಂತೆ ಇರುತ್ತದೆ. ಆದುದರಿಂದಇದನ್ನು ಕೃತಕವೆಂದು ತಿಳಿಯುವುದು ತಪ್ಪು. ಇದರಂತೆಯೇ ಇವನ ೨ನೆಯ ವರ್ಷದ ಶೃಂಗೇರಿ ಶಾಸನವನ್ನು[9] ನಿಜವೆಂದು ಭಾವಿಸಬೇಕು. ಇವೆರಡರಲ್ಲಿ ಕಂಡುಬರುವ 'ಲಲನಾನಯನ ಭ್ರಮರಾವಳೀ ನಿತ್ಯಕೃತಾನುಯಾತ್ರ' ಮೊದಲಾದ ಶೈಶವಾಭಿಷಿಕ್ತನಾದ ಅರಸನ ಪ್ರಾಯವನ್ನು ಸೂಚಿಸುವ ಪದಗಳ ಅರ್ಥವೇನೆಂಬುದನ್ನು ಮುಂದೆ ಅವನೀತನ ಚರಿತ್ರೆಯಲ್ಲಿ ಚರ್ಚಿಸಿದ್ದೇವೆ.

---

1 *M. A. R.* 1917.
2 *Ind. Ant.* Vol. V, p. 138.
3 *Ep. Car.* Vol. IV, p. 109.
4 *Ep. Car.* Vol. IV, *YD*. 60.
5 *Ep. Ind.* Vol. III, p. 176.
6 *Ep. Car.* Vol. X, Mr 72.
7 *Ind. Ant.* Vol. VI, p. 31.
8 *Ep. Ind.* Vol. XIV, p. 163.
9 *M. A. R.* 1916,

೨. ಅವನೀತನ ಮಲ್ಲೋಹಳ್ಳಿ ತಾಮ್ರಶಾಸನ.[1]— ಇದಾದರೂ ಲಿಪಿ ಸ್ವರೂಪದಲ್ಲಿ ನೊಣಮಂಗಲ, ಹಲಸಿ, ಸಂಗೊಳ್ಳಿ ಶಾಸನಗಳನ್ನು ಹೋಲುತ್ತದೆ. ಐತಿಹಾಸಿಕ ಮೊದಲಾದ ಉಳಿದ ವಿಷಯಗಳು ನೊಣ-ಮಂಗಲ ಶಾಸನದಲ್ಲಿದ್ದಂತೆಯೇ ಇವೆ. ಭಾಷೆಯಲ್ಲಿ ತಪ್ಪುಗಳಿದ್ದರೂ ಅಷ್ಟರಿಂದಲೇ ಕೃತಕವೆಂದು ಹೇಳಲಿಕ್ಕಾಗದು.

೩. ದುರ್ವಿನೀತನ ಕೊಡಗತ್ತೂರು ಶಾಸನ.[2]— ಇದರಲ್ಲಿಯು ಮ, ಅ, ನ ಮೊದಲಾದ ಅಕ್ಷರಗಳು ಕ್ರಿ. ಶ. ೬ನೆಯ ಶತಮಾನದವಿರುತ್ತವೆ. ಇಲ್ಲಿ ಕೊಟ್ಟ ವಂಶಾವಳಿಯೂ ಇತರ ಐತಿಹಾಸಿಕ ವಿಷಯಗಳೂ ನಿಜವಾದ ಶಾಸನಗಳಲ್ಲಿದ್ದಂತೆ ಇರುತ್ತವೆ. ಈ ಶಾಸನವು ರಾಜನ ಆಳ್ವಿಕೆಯ ೪ನೆಯ ವರ್ಷದ್ದಾದುದರಿಂದ ದುರ್ವಿನೀತನು ಅಂದರಿ ಆಳತ್ತೂರುಗಳಲ್ಲಿ ಪಡೆದ ಜಯವೂ ಬೃಹತ್ಕಥಾ ಮೊದಲಾದ ಗ್ರಂಥಗಳ ರಚನೆಯೂ ಇಲ್ಲಿ ಉಕ್ತವಾಗದಿರುವುದು ಸ್ವಾಭಾವಿಕವೇ ಸರಿ. ಗಂಗರ ಮೂಲಪುರುಷನಾದ ಕೊಂಗುಣಿವರ್ಮನು ಶಿಲಾಸ್ತಂಭವನ್ನು ಖಂಡಿಸಿದ ಸಂಗತಿಯು ಇದರಲ್ಲಿ ಉಕ್ತವಾಗಿಲ್ಲ. ನಿಜವೆಂದು ತಿಳಿದ ಇನ್ನೂ ಕೆಲವು ಲಿಪಿಗಳಲ್ಲಿಯೂ ಇದು ಹೇಳಲ್ಪಟ್ಟಿಲ್ಲವಾದುದರಿಂದ ಈ ಅಂಶವನ್ನು ಗಣನೆಗೆ ತರಬೇಕಾದುದಿಲ್ಲ. ಈ ಶಾಸನದ ದತ್ತಿಯ ಗ್ರಾಮವಾದ ತಿಪ್ಪೇರೂರನ್ನು ಶಿವ-ಮಾರನ ಮಗನಾದ ಯುವರಾಜ ಮಾರಸಿಂಹನು ಪುನಃ ದಾನಮಾಡಿದಂತೆ ಗಂಜಾಂ ಶಾಸನದಿಂದ[3] ಗೊತ್ತಾಗುತ್ತದೆ. ೮ನೆಯ ಶತಮಾನದ ಕೊನೆಯ ಭಾಗದಲ್ಲಿ ಗಂಗಮಂಡಲವು ರಾಷ್ಟ್ರಕೂಟರ ಕೈಸೇರಿದ್ದುದರಿಂದ ಆಗ ಈ ಗ್ರಾಮವು ಅಂತರಿತವಾಗಿದ್ದು ಮಾರಸಿಂಹನ ಕಾಲದಲ್ಲಿ ಪುನರುದ್ಧೃತವಾಗಿರಬಹುದು.

೪. ೧ನೆಯ ಶಿವಮಾರನ ಹಳ್ಳಿಗೆರೆಶಾಸನ.[4]— ಇದರ ಲಿಪಿಯು ಕ್ರಿ. ಶ. ೭–೮ ನೆಯ ಶತಮಾನದ್ದಿರುತ್ತದೆ. ಭಾಷೆಯೂ ಐತಿಹಾಸಿಕ ಸಂಗತಿಗಳೂ ಕೃತಕವೆಂಬ ಸಂಶಯಕ್ಕೆ ಆಸ್ಪದವನ್ನು ಕೊಡುವುದಿಲ್ಲ.

೫. ಶ್ರೀಪುರುಷನ ಜಾವಳಿ ಹೊಸೂರು ದೇವರಹಳ್ಳಿ ಶಾಸನಗಳು.— ಇವುಗಳ ಅಕ್ಷರಗಳು ಪೂರ್ವ ಚಲುಕ್ಯ ಮನೆತನದ ೧ನೆಯ ವಿಜಯಾದಿತ್ಯನ

---

[1] *Ind Ant.* Vol. V, p. 136. [2] *Ep. Car.* Vol. XII, Mi. 110.
[3] *Ep. Car.* Vol. IV, *SR.* 160. [4] *Ep. Car.* Vol. III, p. 107.

( ಕ್ರಿ. ಶ. ೭೫೧–೭೬೯ ) ಒಂದು ತಾಮ್ರಶಾಸನದಲ್ಲಿದ್ದಂತೆ ಇವೆ.[1] ಸುಮಾರು ೪೦ ವರ್ಷಗಳನಂತರ ಹೊರಟ ರಾಷ್ಟ್ರಕೂಟ ೩ನೆಯ ಗೋವಿಂದನ ಮಣ್ಣೆತಾಮ್ರಶಾಸನವನ್ನೂ ( ಕ್ರಿ. ಶ. ೮೦೨ ) ಇವುಗಳಿಗೆ ಹೋಲಿಸಬಹುದು. ಉಳಿದ ಅಂಶಗಳಾವುವೂ ಆಕ್ಷೇಪಾರ್ಹವಲ್ಲವಾದುದರಿಂದ ಫ್ಲೀಟರು ಇದನ್ನು ಕೃತಕವೆಂದು ಹೇಳಿದುದು ಸರಿಯಲ್ಲ. ದೇವರಹಳ್ಳಿಶಾಸನವನ್ನು ಕುರಿತು ಬರೆಯುವಾಗ ಫ್ಲೀಟರು ಈ ಶಾಸನವನ್ನು ಸೃಷ್ಟಿಸಿದ ಶಿಲ್ಪಿ ಶ್ರೀಪುರುಷನ ಕಾಲಕ್ಕೆ ತಕ್ಕ ಅಕ್ಷರಗಳನ್ನು ಕೊರೆದಿದ್ದರೂ 'ಖ' ಮತ್ತು 'ಬ' ಅಕ್ಷರಗಳ ರೂಪಗಳು ಕ್ರಿ.ಶ. ೮೦೪ಕ್ಕೆ ಮುಂಚಿನವಲ್ಲವಾದುದರಿಂದ ಅವು ಇತ್ತೀಚೆಗೆ ಹುಟ್ಟಿದುವೆಂದು ಅಭಿಪ್ರಾಯಪಟ್ಟಿದ್ದಾರೆ.[2] ಆದರೆ ಮೇಲೆ ಹೇಳಿದ ವಿಜಯಾದಿತ್ಯನ ಶಾಸನದಲ್ಲಿಯೇ 'ಖ' ಅಕ್ಷರದ ಈ ರೂಪವಿರುವುದರಿಂದ ಇದನ್ನಿಟ್ಟುಕೊಂಡು ಕೃತಕವೆಂದು ಹೇಳುವುದು ತಪ್ಪು. ಶ್ರೀಪುರುಷನ ಕಾಲವು ಲಿಪಿಯ ಬೆಳೆವಣಿಗೆಯಲ್ಲಿ ಕ್ರಾಂತಿಕಾಲ ( Period of transition ) ವಾದುದರಿಂದ ಅಕ್ಷರಗಳ ಹಳೆ ಹೊಸ ಎರಡೂ ರೂಪಗಳಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಇದಲ್ಲದೆ ಶ್ರೀಪುರುಷನ ದೇವರಹಳ್ಳಿಯ ಶಾಸನದ ಕಾಲಕ್ಕೂ ( ಕ್ರಿ. ಶ. ೭೭೬ ) ಕ್ರಿ. ಶ. ೮೦೪ಕ್ಕೂ ನಡುವೆ ಇರುವ ಅಂತರವು ಸ್ವಲ್ಪ ಅಂದರೆ ೨೮ರೇ ವರ್ಷವಿರುವುದರಿಂದ ೮೦೪ಕ್ಕೆ ಮೊದಲು ಈ ರೂಪವಿದ್ದಿಲ್ಲವೆಂದೂ ಮುಂದೆ ಅದು ಪ್ರಚಲಿತವಾಯಿತೆಂದೂ ಹೇಳುವುದು ಸಮಂಜಸವಾಗಲಾರದು. ಮೇಲ್ಕಂಡ ವಿವೇಚನೆಯಿಂದ ಈ ಮೂರು ಶಾಸನಗಳು ವಿಶ್ವಸನೀಯವಾದುವೆಂದೇ ತಿಳಿಯಬೇಕು. ಸರಗೂರು ಶಾಸನದ ಅಕ್ಷರಗಳು ಮೇಲಿನ ಶಾಸನಗಳಂತೇ ಇರುವುದರಿಂದ ಇದೂ ನಿಜವೆಂದು ಹೇಳಬಹುದು. ಇದೇ ರಾಜನ ಇಸ್ಲಾಂಪುರ ತಾಮ್ರಶಾಸನವನ್ನು ಪಾಠಕರು ಕೃತಕವೆಂದು ಹೇಳಿದ್ದಾರೆ. ಇದರ ಲಿಪಿಸ್ವರೂಪವು ಆಕ್ಷೇಪಾನರ್ಹವಾಗಿದ್ದರೂ ಭಾಷೆಯೂ ಬರೆವಣಿಗೆಯೂ ಅಶುದ್ಧವಾಗಿವೆಯೆಂಬ ನಿಮಿತ್ತದಿಂದ ಇದರ ನಿಜತ್ವದ ಬಗ್ಗೆ ಸಂಶಯಗೊಂಡಿದ್ದಾರೆ. ಆದರೆ ನಿಜವೆಂದು

---

[1] *Journal of the Andhra Historical Research Society*, Vol. 5, p. 55.

[2] *Ep. Ind.* Vol. III, p. 165.

ನಿರ್ಧರಿಸಲ್ಪಟ್ಟ ಅನೇಕ ಶಾಸನಗಳು ಅಶುದ್ಧ ಭಾಷೆಯಲ್ಲಿ ಬರೆಯಲ್ಪಟ್ಟಿರುವುದು ತಿಳಿದಿರುವುದರಿಂದ ಈ ಯುಕ್ತಿ ಗ್ರಾಹ್ಯವಾಗಲಾರದು. ಮತ್ತು ಇಲ್ಲಿ ಕೊಟ್ಟ ವಿವರಗಳು ಇತಿಹಾಸಕ್ಕೆ ವಿರೋಧವಾಗಿಲ್ಲ.

೬. ೨ನೆಯ ಶಿವಮಾರನ ಮಗನಾದ ಯುವರಾಜ ಮಾರಸಿಂಹನ ಮಣ್ಣೇ ತಾಮ್ರಶಾಸನ.—[1] ಈ ಶಾಸನವು ಕೃತಕವೆಂದು ಫ್ಲೀಟರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇದರ ಲಿಪಿಸ್ವರೂಪವು ವಿಜಯಾದಿತ್ಯನ ಇಸ್ಲಾಂಪುರಶಾಸನ,[2] ರಾಷ್ಟ್ರಕೂಟ ೩ನೆಯ ಗೋವಿಂದನ ಮಣ್ಣೇತಾಮ್ರಶಾಸನ[3] ಗಳಲ್ಲಿದ್ದಂತೆ ಇರುತ್ತದೆ. ಆದುದರಿಂದ ಇದನ್ನು ಕೃತಕವೆಂದು ಬಗೆಯುವುದು ಸಮಂಜಸವಾಗಲಾರದು. ಇಲ್ಲಿ ಕೊಟ್ಟ ಐತಿಹಾಸಿಕ ವಿವರಗಳನ್ನು ಮಾತ್ರ ಯಾವ ವಿರೋಧವೂ ಬಾರದಂತೆ ೨ನೆಯ ಶಿವಮಾರನ ಚರಿತ್ರವನ್ನು ಕೊಡುವಾಗ ತಿಳಿಸಿ ಹೇಳಿದ್ದೇವೆ. ಮಾರಸಿಂಹನ ಗಂಜಾಂ ಶಾಸನ ಆಲೂರು[4] ಶಾಸನಗಳೂ ಇದರಂತೆ ನಿಜವಾದ ಲಿಪಿಗಳೆಂದು ತಿಳಿಯಬೇಕು.

ಈ ರೀತಿಯಾಗಿ ಗಂಗರ ತಾಮ್ರಶಾಸನಗಳಲ್ಲಿ ನಂಬಲು ಯೋಗ್ಯವಾದವಾವುವೆಂಬುದನ್ನು ದಿಗ್ದರ್ಶನ ಮಾಡಿ ತೋರಿಸಿದ್ದೇವೆ. ಈ ಆಧಾರಗಳಿಂದಲೂ ಶಿಲಾಶಾಸನಗಳಿಂದಲೂ ಇವರೊಡನೆ ಸಂಬಂಧವನ್ನು ಬೆಳೆಸಿದ ಇತರ ರಾಜರ ಶಾಸನಗಳಲ್ಲಿ ನಿರ್ದಿಷ್ಟವಾದ ವಿಶೇಷಾಂಶಗಳಿಂದಲೂ ಗಂಗರ ಇತಿಹಾಸವನ್ನು ಬರೆದಿದ್ದೇವೆ.

---

[1] *Ep. Car.* Vol. IX, NL. 60. [2] *Ep. Ind.* Vol. XII, p. 48.
[3] *Ep. Car.* Vol. IX, NL. 61. [4] *M. A. R.* 1919.

# ಗಂಗರ ವಂಶವೃಕ್ಷ

## ಕೊಂಗುಣಿವರ್ಮ್ಮಧರ್ಮ್ಮ ಮಹಾಧಿರಾಜ

- ೧ನೆಯ ಮಾಧವ ಮಹಾಧಿರಾಜ
  - ಹರಿವರ್ಮ್ಮ—ಆಯ್ಯವರ್ಮ್ಮ—ಕೃಷ್ಣವರ್ಮ್ಮ ಮಹಾಧಿರಾಜ (ಸು. ಕ್ರಿ. ಶ. ೪೪೦–೪೬೦)
    - ೨ನೆಯ ಮಾಧವ ಪ್ರತಿನಾಮ, ಸಿಂಹವರ್ಮ್ಮ (ಕ್ರಿ. ಶ. ೪೬೦–೪೭೫)
    - ವೀರವರ್ಮ್ಮ (ಆಳಲಿಲ್ಲ)
    - ವಿಷ್ಣುಗೋಪ (ಕ್ರಿ. ಶ. ೪೭೫–೪೮೦)
      - ೩ನೆಯ ಮಾಧವ (ಕ್ರಿ. ಶ. ೪೮೦–೪೯೫)
        - ಅವಿನೀತ (ಕ್ರಿ. ಶ ೪೯೫–೫೫೫)
          - ದುರ್ವಿನೀತ (ಕ್ರಿ. ಶ. ೫೫೫–೬೦೫)
            - ಮುಷ್ಕರ (ಕ್ರಿ. ಶ. ೬೦೫–೬೩೦)
              - ಶ್ರೀವಿಕ್ರಮ (ಕ್ರಿ. ಶ. ೬೪೪–೬೬೯)
                - ಭೂವಿಕ್ರಮ (ಕ್ರಿ. ಶ. ೬೬೯–೬೭೯)
                - ೧ನೆಯ ಶಿವಮಾರ ಕ್ರಿ. ಶ. ೬೭೯–೭೨೬
                  - ಮಗ
                    - ಶ್ರೀಪುರುಷ ಕ್ರಿ. ಶ. ೭೨೬–೭೮೮
            - ಪೊಲವೀರ (ಕ್ರಿ. ಶ. ೬೩೯–೬೪೪)
          - (ಮಗ) ರಾಜ್ಯವಾಳಲಿಲ್ಲ

P. T. O.

# ಗಂಗರ ವಂಶವೃಕ್ಷ ( ಮುಂದುವರಿದದ್ದು )



## ಗಂಗರ ವಂಶವೃಕ್ಷ

ಸಾಮಾನ್ಯವಾಗಿ ಗಂಗರ ವಂಶಾವಳಿಯು ಲಿಪಿಗಳಲ್ಲಿ ಒಂದೇ ತೆರನಾಗಿ ಕೊಡಲ್ಪಟ್ಟಿದ್ದರೂ ಕೆಲವು ತಾಮ್ರಶಾಸನಗಳು ಮಾತ್ರ ಅದನ್ನು ವ್ಯತ್ಯಸ್ತವಾಗಿ ಹೇಳುತ್ತವೆ. ಕೊಂಗುಣಿವರ್ಮ್ಮ ಧರ್ಮಮಹಾಧಿರಾಜ ಮಾಧವನೇ ಈ ಮನೆತನದ ಮೂಲ ಪುರುಷನು. ಇವನ ಮಗನು ಮಾಧವನು. ಇವನನ್ನು ೧ನೆಯ ಮಾಧವನೆಂದು ಈ ಪುಸ್ತಕದಲ್ಲಿ ಕರೆಯುತ್ತೇವೆ. ಇವನಿಂದ ಅವನೀತನ ವರೆಗೆ ಆಳಿದ ರಾಜರ ವಂಶಾವಳಿಯ ವಿಷಯದಲ್ಲಿ ನಿಜವಾದ ಲಿಪಿಗಳಲ್ಲಿಯೂ ಏಕವಾಕ್ಯತೆಯಿಲ್ಲ. ಆದುದರಿಂದ ಅಲ್ಲಿ ತೋರುವ ವಿರೋಧಾಭಾಸವನ್ನು ಸಮನ್ವಯವಾಗುವಂತೆ ಬಿಡಿಸಿ ಹೇಳಬೇಕಾಗುತ್ತದೆ. ಗುಮ್ಮರೆಡ್ಡಿಪುರ ಶಾಸನದಲ್ಲಿ ಮಾಧವನ ಮಗನು ಹರಿವರ್ಮ್ಮನೆಂದು ಹೇಳಿದೆ.[1] ಪೆನುಗೊಂಡೆ ಶಾಸನದಲ್ಲಿ ಅದೇ ಮಾಧವನ ಮಗನು ಆಯ್ಯವರ್ಮ್ಮನೆಂದು ಕೊಟ್ಟಿದೆ.[2] ಹರಿವರ್ಮ್ಮ ಶಬ್ದದ ಅಪಭ್ರಂಶವೇ ಆಯ್ಯವರ್ಮ್ಮವೆಂದು ರಾಯಿಸರು ಬರೆದಿದ್ದಾರೆ.[3] ಚುಕುಟ್ಟೂರುಶಾಸನದಿಂದ ಮಾಧವನ ಮಗನು ಕೃಷ್ಣವರ್ಮ್ಮನೆಂದೂ ಅವನಿಗೆ ಸಿಂಹವರ್ಮ್ಮನೆಂಬ ಮಗನಿದ್ದನೆಂದೂ ತಿಳಿಯುತ್ತದೆ.[4] ಪೆನುಗೊಂಡೆ ಶಾಸನದಲ್ಲಿ ಆಯ್ಯವರ್ಮ್ಮನ ಮಗನು ಸಿಂಹವರ್ಮ್ಮಾಪರ ನಾಮಧೇಯನಾದ ಮಾಧವವರ್ಮ್ಮನೆಂದು ಬರೆದಿದೆ. ಆದುದರಿಂದ ಹರಿವರ್ಮ್ಮ ಆಯ್ಯವರ್ಮ್ಮ, ಕೃಷ್ಣವರ್ಮ್ಮ ಎಂಬ ಮೂರು ಹೆಸರುಗಳು ಒಬ್ಬನಿಗೇ ಅನ್ವಯಿಸುತ್ತವೆಂಬುದು ಸ್ಪಷ್ಟವಾಗುತ್ತದೆ. ಇನ್ನು ಬೆಂಡಿಗಾನಹಳ್ಳಿ ತಾಮ್ರ ಲಿಪಿಯಲ್ಲಿ[5] ಕೊಂಗುಣಿವರ್ಮ್ಮನನ್ನು ಬಿಟ್ಟು ೧ನೆಯ ಮಾಧವನನ್ನೇ ಮೂಲ ಪುರುಷನೆಂದೂ ಅವನ ಮಗನು ಕೃಷ್ಣವರ್ಮ್ಮನೆಂದೂ ಕೊಟ್ಟಿದೆ. ಸಾಮಾನ್ಯವಾಗಿ ಕೊಂಗುಣಿವರ್ಮ್ಮನಿಗೆ ಕೊಡುವ ವಿಶೇಷಣಗಳನ್ನು ಈ ಮಾಧವನಿಗೆ ಮತ್ತು ಇವನಿಗೆ ಕೊಡುವ ವಿಶೇಷಣಗಳನ್ನು ಇವನ ಮಗನಾದ ಕೃಷ್ಣವರ್ಮ್ಮನಿಗೆ ಕೊಟ್ಟಿದೆ. ಈ ವಿವರಣೆಯಲ್ಲಿ ಒಂದು ತಲೆಯನ್ನು ಬಿಟ್ಟಿರುವುದರಿಂದ ಪರಸ್ಪರರ ವಿಶೇಷಣಗಳು ವ್ಯತ್ಯಸ್ತವಾಗಿ ಬಿದ್ದಿವೆಯೆಂದು ಭಾವಿಸಿದರೆ ತಪ್ಪಾಗಲಾರದು. ಕೃಷ್ಣವರ್ಮ್ಮನು ೧ನೆಯ ಮಾಧವನ ಮಗನೆಂದು ಚುಕುಟ್ಟೂರು

---

1 *Mysore Arch. Report*, 1912.
2 *Ep. Ind.* Vol. XIV p. 331.
3 *Ibid.*
4 *Mysore Arch. Report*, 1924.
5 *Mysore Arch. Report*, 1915.

ಶಾಸನದಿಂದ ಗೊತ್ತಾಗುವುದರಿಂದ ಬೆಂಡಿಗಾಸ ಹಳ್ಳಿಯ ಮಾಧವನು ೧ನೆಯ ಮಾಧವನೆಂದೇ ಹೇಳಬೇಕಾಗುತ್ತದೆ. ಪೆನುಗೊಂಡೆ ಚುಕುಟ್ಟೂರು ಶಾಸನಗಳಿಂದ ಆಯ್ಯವರ್ಮ್ಮ-ಕೃಷ್ಣವರ್ಮ್ಮನ ಮಗನು ಮಾಧವ-ಸಿಂಹವರ್ಮ್ಮನೆಂದೂ ಇತರ ಶಾಸನಗಳಿಂದ ಹರಿವರ್ಮ್ಮ-ಆಯ್ಯವರ್ಮ್ಮ-ಕೃಷ್ಣವರ್ಮ್ಮನ ಮಗನು ೩ನೆಯ ಮಾಧವನ ತಂದೆಯಾದ ವಿಷ್ಣುಗೋಪನೆಂದೂ ತಿಳಿದಿದೆ. ಈ ೩ನೆಯ ಮಾಧವನ ತಂದೆಯ ಹೆಸರು (೨ನೆಯ) ಮಾಧವನೆಂದಾಗಲಿ ಸಿಂಹವರ್ಮ್ಮನೆಂದಾಗಲಿ ಎಲ್ಲಿಯೂ ನಿರ್ದೇಶಿಸಲ್ಪಟ್ಟಿಲ್ಲವಾದುದರಿಂದ ಆಯ್ಯವರ್ಮ್ಮ-ಕೃಷ್ಣವರ್ಮ್ಮ-ಹರಿವರ್ಮ್ಮನಿಗೆ ಮಾಧವ ವಿಷ್ಣುಗೋಪರೆಂಬ ಇಬ್ಬರು ಮಕ್ಕಳಿದ್ದರೆಂದು ವ್ಯಕ್ತವಾಗುತ್ತದೆ. ಚುಕುಟ್ಟೂರು ಶಾಸನದಿಂದ ಅವನಿಗೆ ವೀರವರ್ಮ್ಮನೆಂಬ ಇನ್ನೊಬ್ಬ ಮಗನಿದ್ದನೆಂದೂ ಅವನು ತನ್ನ ಅಣ್ಣನಾದ ಮಾಧವನ ಕಾಲದಲ್ಲಿ ಯುವರಾಜನಾಗಿದ್ದಾಗಲೇ ಮಡಿದನೆಂದೂ ತಿಳಿಯುತ್ತದೆ. ಪೆನುಗೊಂಡೆ ಚುಕುಟ್ಟೂರು ಶಾಸನಗಳಲ್ಲಿ ಮಾಧವ-ಸಿಂಹವರ್ಮ್ಮನು ರಾಜ್ಯವಾಳಿದನೆಂದು ಬರೆದಿದೆ. ಆದರೆ ಹರಿವರ್ಮ್ಮನ ತರುವಾಯ ವಿಷ್ಣುಗೋಪನು ಪಟ್ಟಕ್ಕೆ ಬಂದನೆಂದು ಗುಮ್ಮರೆಡ್ಡಿಪುರಶಾಸನ ಆವಣಿಶಿಲಾಲಿಪಿ[1] ಮೊದಲಾದವುಗಳು ಹೇಳುತ್ತವೆ. ಅವು ೨ನೆಯ ಮಾಧವನ ಹೆಸರನ್ನೇ ಎತ್ತುವುದಿಲ್ಲ. ಇದರಿಂದ ೨ನೆಯ ಮಾಧವನಿಗೆ ಸಂತಾನವಿದ್ದಿಲ್ಲವೆಂದೂ ಅವನ ತರುವಾಯ ಅವನ ತಮ್ಮನಾದ ವಿಷ್ಣುಗೋಪನು ಪಟ್ಟವೇರಿದನೆಂದೂ ಎನ್ನಬೇಕಾಗುತ್ತದೆ. ಈ ವಿಷ್ಣುಗೋಪನ ಮಗನೇ ಕದಂಬ ೧ನೆಯ ಕೃಷ್ಣವರ್ಮ್ಮನ ತಂಗಿಯನ್ನು ಮದುವೆಯಾದ ೩ನೆಯ ಮಾಧವನು.

ಇವನ ಮಗನಾದ ಅವಿನೀತನಿಗೆ ಇಬ್ಬರು ಮಕ್ಕಳಿದ್ದರು. ಇವರಲ್ಲಿ ದುರ್ವಿನೀತನು ಹಿರಿಯವನು. ಇವನ ತಮ್ಮನ ಹೆಸರು ಗೊತ್ತಿಲ್ಲ. ಅವಿನೀತನು ಗಂಗಪಟ್ಟವನ್ನು ಹಿರಿಯ ಮಗನಿಗೆ ತಪ್ಪಿಸಿ ಕಿರಿಯ ಮಗನಿಗೆ ಕಟ್ಟಬೇಕೆಂದು ಯೋಚಿಸಿದ್ದನೆಂದೂ ಆದರೆ ಅದು ಸಫಲವಾಗಲಿಲ್ಲವೆಂದೂ ಶಾಸನಗಳಿಂದ ಗೊತ್ತಾಗುತ್ತದೆ.[2] ಸಿರಗುಂದಾ ಶಿಲಾಶಾಸನದಲ್ಲಿ ನಿರ್ವ್ವಿನೀತನ ಕಿರಿಯ ಮಗನಿಗೆ ಕಾಡುವೆಟ್ಟಿಯರೂ ಪಲ್ಲವರಸರೂ ಕೊಂಗುಣಿ ಪಟ್ಟವನ್ನು ಕಟ್ಟಿದರೆಂದು ಬರೆದಿದೆ.[3] ತಗರೇಶಾಸನದಲ್ಲಿ ಪೊಲವೀರನು ನಿರ್ವ್ವಿನೀತನ ಮಗನೆಂದು ಹೇಳಿದೆ.[4] ಈ ನಿರ್ವ್ವಿನೀತನೇ ದುರ್ವಿನೀತನೆಂದು ಅದೇ ಶಾಸನದಿಂದ ಗೊತ್ತಾಗುತ್ತದೆ.

---

[1] *Ep. Car.* Vol. X. [2] ಉತ್ತನೂರು (*M. A. R.* 1916) ಗುಮ್ಮರೆಡ್ಡಿಪುರ (*M. A. R.* 1912) ಶಾಸನಗಳು.

[3] *Ep. Car.* Vol. VI. [4] *M. A. R.* 1918.

ಇತರ ಶಾಸನಗಳಲ್ಲೆಲ್ಲ ದುರ್ವಿನೀತನ ತರುವಾಯ ಅವನ ಮಗನಾದ ಮುಷ್ಕರನ ಸಂತತಿಯವರೇ ರಾಜ್ಯವಾಳಿದರೆಂದು ಹೇಳಿದೆ. ಅಂದ ಮೇಲೆ ದುರ್ವಿನೀತನಿಗೆ ಮುಷ್ಕರ ಪೋಲವೀರರೆಂಬ ಇಬ್ಬರು ಮಕ್ಕಳಿದ್ದರೆಂದು ಸ್ಪಷ್ಟವಾಗುತ್ತದೆ.[1] ಇವರಲ್ಲಿ ಯಾರು ದೊಡ್ಡವರೆಂಬುದು ಗೊತ್ತಾಗಿಲ್ಲ. ಮುಷ್ಕರನ ಮಗನಾದ ಶ್ರೀವಿಕ್ರಮನಿಗೆ ಭೂವಿಕ್ರಮ, ೧ನೆಯ ಶಿವಮಾರರೆಂದು ಇಬ್ಬರು ಮಕ್ಕಳಾದರು.[2] ಅವರಲ್ಲಿ ಭೂವಿಕ್ರಮನ ತರುವಾಯ ಒಂದನೆಯ ಶಿವಮಾರನೂ ಅವನ ಸಂತತಿಯವರೂ ಆಳಿದುದರಿಂದ ಭೂವಿಕ್ರಮನಿಗೆ ಮಕ್ಕಳಿದ್ದಿರಲಿಕ್ಕಿಲ್ಲ. ವಳ್ಳಿಮಲೆಯಲ್ಲಿರುವ ಬಂಡೆಯ ಮೇಲಿನ ಲಿಪಿಯು[3] ( ೧ನೆಯ ) ಶಿವಮಾರನ ಆತ್ಮಜನು ಶ್ರೀಪುರುಷ ಮುತ್ತರಸನೆಂದೂ ಅವನ ಮಗನು ರಣವಿಕ್ರಮನೆಂದೂ ಈ ರಣವಿಕ್ರಮನ ಮಗನು ರಾಜಮಲ್ಲನೆಂದೂ ಹೇಳುತ್ತದೆ. ಸೂಡಿ ಶಾಸನ[4] ವನ್ನುಳಿದು ಎಲ್ಲ ತಾಮ್ರಶಾಸನಗಳಲ್ಲಿ ಶ್ರೀಪುರುಷನು ಶಿವಮಾರನ ಪೌತ್ರನೆಂದು ಹೇಳಿದೆ. ಶ್ರೀಪುರುಷನ ಕೊವಳವೆಟ್ಟು[5] ಜಾವಳಿ[6] ಮೊದಲಾದ ನಿಜವಾದ ತಾಮ್ರ ಲಿಪಿಗಳಲ್ಲಿ ತಾನು ೧ನೆಯ ಶಿವಮಾರನ ಪೌತ್ರನೆಂದು ಹೇಳಿಕೊಂಡಿದ್ದಾನೆ. ಆದುದರಿಂದ ವಳ್ಳಿಮಲೆ ಶಾಸನದಲ್ಲಿ ' ಆತ್ಮಜ ' ಎಂದು ಪ್ರಯೋಗ ಮಾಡಿದ್ದು ತಪ್ಪೆಂದೆಣಿಸಬೇಕಾಗುತ್ತದೆ. ಶಿಲಾಶಾಸನಗಳಲ್ಲಿಯೂ ತಪ್ಪುಗಳಿರುವುದು ಅಸಂಭವವಲ್ಲ.

ಶ್ರೀಪುರುಷನಿಗೆ ದುಗ್ಗಮಾರ, ೨ನೆಯ ಶಿವಮಾರ, ವಿಜಯಾದಿತ್ಯರೆಂಬ ಮೂವರು ಮಕ್ಕಳಿದ್ದರು. ಇವರಲ್ಲಿ ದುಗ್ಗಮಾರನೇ ಜೇಷ್ಠನೆಂದು ತೋರುತ್ತದೆ. ಇವನೊಡನೆ ನೊಳಂಬಸಿಂಹಪೋತನು ಪೆರ್ಮಾನಡಿಯ ( ಶ್ರೀಪುರುಷನ) ಆಜ್ಞೆಯ ಮೇರೆಗೆ ಯುದ್ಧಮಾಡಿದನೆಂದು ದೊಡ್ಡ ಉಳವರ್ತಿಯ ಶಿಲಾಲಿಪಿಯಲ್ಲಿ ಬರೆದಿದೆ.[7] ಈ ಸಿಂಹಪೋತನು ರಾಷ್ಟ್ರಕೂಟ ೨ನೆಯ ಗೋವಿಂದನ ( ಸು. ಕ್ರಿ. ಶ. ೭೭೨ ) ಸಾಮಂತನಾಗಿದ್ದ ಚಾರುಪೊನ್ನೇರನ ತಂದೆ. ಇವನ ಕಾಲವು ಸು. ಕ್ರಿ. ಶ. ೭೫೦. ಇವನ ಮಗಳಾದ ನೊಳಂಬಮಾದವೆಯ ಮಗಳನ್ನು ಶ್ರೀಪುರುಷನು ಮದುವೆಯಾಗಿದ್ದನೆಂದು ಚಳ್ಳಕೆರೆ ತಾಲೂಕಿನ

---

1 ಮುಂದೆ ಮೂವರು ಇದ್ದಿರಬಹುದೆಂದು ಊಹಿಸಿದ್ದೇವೆ.

2 ಹಳ್ಳಿಗೇರಿ, ಜಾವಳಿ, ದೇವರ ಹಳ್ಳಿ, ಗಳಿಗೆಕೆರೆ ತಾಮ್ರಶಾಸನಗಳು.

3 *Ep. Ind.* Vol. IV, p. 141.

4 *Ep. Ind.* Vol. III, 176.

5 *M. A. R.* 1924.

6 *Ep. Car.* Vol. VI, p. 151.

7 *Ep. Car.* Vol. XI, ( ಚಳ್ಳಕೆರೆ ೮ ).

ಚಿಕ್ಕ ಮಧುರೆಯ ಶಿಲಾಶಾಸನದಿಂದ ತಿಳಿಯುತ್ತದೆ.[1] ಸಿಂಹಪೋತನು ತನ್ನ ಮರಿಮಗನೊಡನೆ ಕಾದಿರುವುದು ಅಸಂಭವವಾದುದರಿಂದ ದುಗ್ಗಮಾರನು ಶ್ರೀಪುರುಷನ ಬೇರೆ ಅಂದರೆ ಹಿರಿಯ ಹೆಂಡತಿಯ ಮಗನೆಂದು ಹೇಳಬಹುದು. ಶ್ರೀಪುರುಷನಾದ ಮೇಲೆ ೧ನೆಯ ಶಿವಮಾರನು ಪಟ್ಟಕ್ಕೆ ಬಂದುದರಿಂದ ದುಗ್ಗಮಾರನು ತನ್ನ ತಂದೆಗಿಂತ ಮೊದಲೇ ಮೃತನಾಗಿರಬಹುದು. ಶಿವಮಾರನಿಗೆ ೧ನೆಯ ಮಾರಸಿಂಹನು ಯುವರಾಜನಾಗಿದ್ದನೆಂದು ಕ್ರಿ. ಶ. ೭೯೨ರ ಮಣ್ಣೇ ತಾಮ್ರ ಲಿಪಿಯಲ್ಲಿಯೂ[2] ಕ್ರಿ. ಶ. ೭೯೯ರ ಆಲೂರ ಶಾಸನದಲ್ಲಿಯೂ[3] ಹೇಳಿದೆ ಶಿವಮಾರನು ಸಾಯುವಾಗ ತನ್ನ ತಮ್ಮನಾದ ವಿಜಯಾದಿತ್ಯನಿಗೆ ರಾಜ್ಯಭಾರವನ್ನು ಕೊಟ್ಟನೆಂದೂ ಅವನು ಭರತನಂತೆ ತನ್ನ ಅಣ್ಣನ ರಾಜ್ಯ ಲಕ್ಷ್ಮಿಯನ್ನುಪ-ಭೋಗಿಸಲಿಚ್ಛಿಸಲಿಲ್ಲವಾದುದರಿಂದ ಅವನ ಮಗನಾದ ೧ನೆಯ ರಾಚಮಲ್ಲನು ತನ್ನ ತಂದೆಯ ಹೆಸರಿನಿಂದ ರಾಜ್ಯಸೂತ್ರಗಳನ್ನು ಹಿಡಿದಿದ್ದನೆಂದೂ ಮುಂದೆ ಗಂಗಪಟ್ಟವು ರಾಚಮಲ್ಲನ ಸಂತತಿಯಲ್ಲಿಯೇ ಉಳಿಯಿತೆಂದೂ ಶಾಸನಗಳಿಂದ ತಿಳಿಯುತ್ತದೆ.[4] ಇದರಿಂದ ೧ನೆಯ ಮಾರಸಿಂಹನು ಶಿವಮಾರನ ಜೀವಮಾನದಲ್ಲಿಯೇ ಸತ್ತಿರಬೇಕೆಂದು ಗೊತ್ತಾಗುತ್ತದೆ. ೧ನೆಯ ಪೃಥವೀಪತಿಯು ಪಲ್ಲವರಾಜನಾದ ನೃಪತುಂಗ ವಿಕ್ರಮವರ್ಮನ ಮಾಂಡಲಿಕನಾಗಿದ್ದನೆಂದು ಪಲ್ಲವ ಶಾಸನಗಳಲ್ಲಿ ಹೇಳಿದೆ.[5] ಇವನ ಮಗನಾದ ನನ್ನಿಯ ಗಂಗನು ಗಂಗ ರಾಜ್ಯದ ಮೇಲಿದ್ದ ಹಿರಿಯ ಸಂತಾನದ ತನ್ನ ಹಕ್ಕನ್ನು ಬಿಡಬಾರದೆಂದು ಬಗೆದು ತನ್ನ ಬಂಧುಗಳಾದ ಬಾಣರಾಜರ ಸಹಾಯವನ್ನು ಪಡೆದು ೨ನೆಯ ರಾಚಮಲ್ಲನ ಮೇಲೆ ಯುದ್ಧಮಾಡಿ ರಾಜಧಾನಿಯಾದ ತಳಕಾಡನ್ನಾಕ್ರಮಿಸಿಕೊಂಡನು. ಬಾಣವಿಧ್ವಂಸನವಾದ ಮೇಲೆ ನಷ್ಟಬಲನಾಗಿದ್ದ ನನ್ನಿಯಗಂಗನಿಂದ, ರಾಚಮಲ್ಲನು ಕಳೆದು ಹೋಗಿದ್ದ ರಾಜಧಾನಿಯನ್ನು ಕಿತ್ತುಕೊಂಡನು. 'ನನ್ನಿಯ ಗಂಗ' ಎಂಬ ಬಿರುದು ೧ನೆಯ ಪೃಥಿವೀಪತಿಯ ಮಗನಾದ ಮಾರಸಿಂಹನಿಗೆ ಇದ್ದಿರಬಹುದು.[6] ಇವನ ಮಗನಾದ ೨ನೆಯ ಪೃಥಿವೀಪತಿಗೆ ಚೋಳ ೧ನೆಯ

---

[1] *Ep. Car.* Vol. XI. [2] *Ep. Car.* Vol. X, Nl 60. [3] *M.A.R.* 1924.

[4] ಕೆರೆಗೋಡುರಂಗಾಪುರಂ, ಗಟ್ಟವಾಡಿ, ಕೂಡಲೂರು ಮೊದಲಾದ ತಾಮ್ರ ಶಾಸನಗಳು.

[5] ಅಂಬೂರ ವೀರಗಲ್ಲು (*Ep. Ind.* Vol. IV, *p.* 82-83); ಉದಯೇಂದಿರಂ ತಾಮ್ರಶಾಸನ (S. I. I. Vol. II, p. 384).

[6] ಮೈಸೂರುಪ್ರಾಂತದ ಕೋಲಾರಜಿಲ್ಲೆಯ ಹಿರೇಬಿದನೂರ ಒಂದು ಶಿಲಾಶಾಸನದಲ್ಲಿ 'ಗಂಗಕುಲತಿಲಕ ರಾಜನ್ಯಚೂಡಾಮಣಿ ಕೋಳಾಲಪುರ ಪರಮೇಶ್ವರ ಶ್ರೀಮತ್ ಪಿಟ್ಟ್ವಿಪತಿಯ ಮಗ ನನ್ನಿಯಗಂಗ'ನೆಂದು ಬರೆದಿದೆ.

ಪರಾಂತಕನು ಬಾಣಮಂಡಲಾಧಿಪತ್ಯವನ್ನು ಕೊಟ್ಟನೆಂದು ಉದಯೇಂದಿರಂ ಶಾಸನದಲ್ಲಿ ಹೇಳಿದೆ.

೧ನೆಯ ರಾಜಮಲ್ಲನ ಮಗನಾದ ಎಱೆಗಂಗ–ನೀತಿಮಾರ್ಗನಿಗೆ ೨ನೆಯ ರಾಜಮಲ್ಲ ಬೂತುಗರೆಂಬ ಇಬ್ಬರು ಮಕ್ಕಳಿದ್ದರು. ಈ ರಾಜಮಲ್ಲನು ತನ್ನ ತಮ್ಮನ ಮಗನಾದ ಎಱೆಯಪ್ಪನೊಡನೆ ಏಕತ್ರವಾಗಿ ರಾಜ್ಯಸೂತ್ರಗಳನ್ನು ವಹಿಸಿದ್ದನೆಂದು ಶಾಸನಗಳಿಂದ ತಿಳಿಯಬರುತ್ತದೆ.[1] ಮುಂದೆ ಗಂಗಪಟ್ಟವು ಎಱೆಯಪ್ಪನ ಸಂತತಿಯಲ್ಲಿಯೇ ಉಳಿದುದರಿಂದ ೨ನೆಯ ರಾಜಮಲ್ಲನಿಗೆ ಮಕ್ಕಳಿದ್ದಿಲ್ಲವೆಂದೂ ಬೂತುಗನು ಅಣ್ಣನಕಿಂತ ಮೊದಲೇ ಸತ್ತಿದ್ದನೆಂದೂ ಹೇಳಬಹುದು. ಎಱೆಯಪ್ಪನಿಗೆ ನರಸಿಂಹದೇವ, ೩ನೆಯ ರಾಜಮಲ್ಲ, ೨ನೆಯ ಬೂತುಗರೆಂದು ಮೂವರು ಪುತ್ರರಿದ್ದರು. ಇವರು ಒಬ್ಬರ ಹಿಂದೊಬ್ಬರಾಳಿದಮೇಲೆ ೨ನೆಯ ಬೂತುಗನ ಮಕ್ಕಳಲ್ಲಿ ಹಿರಿಯವನಾದ ಪುಣಸೆಯ ಗಂಗ–ಮರುಳನು ಸಿಂಹಾಸನವನ್ನೇರಿದನು. ಅವನ ತರುವಾಯ ಅವನ ತಮ್ಮನಾದ ೨ನೆಯ ಮಾರಸಿಂಹನು ರಾಜನಾದನು. ಹೆಬ್ಬಾಳ ಶಾಸನದಲ್ಲಿ ಮರುಳನ ತರುವಾಯ ಅವನ ಮಗನಾದ ರಚ್ಚಗಂಗನೂ ಅವನಾದ ಒಳಿಕ ಮಾರಸಿಂಹನೂ ಪಟ್ಟಕ್ಕೆ ಬಂದರೆಂದು ಹೇಳಿದೆ.[2] ಆದರೆ ರಚ್ಚಗಂಗನು ರಾಜ್ಯವಾಳಲಿಲ್ಲವೆಂಬ ವಿಷಯದಲ್ಲಿ ಅನೇಕ ಆಧಾರಗಳುಂಟು.[3] ಮಾರಸಿಂಹನಿಗೆ ಸತ್ಯವಾಕ್ಯ ರಾಜಮಲ್ಲ, ರಕ್ಕಸ ಗಂಗ ಅರುಮುಳಿದೇವ[4] ಎಂಬ ಮೂರು ಜನ ಮಕ್ಕಳಿದ್ದರು. ಮೊದಲಿನವರಿಬ್ಬರು ಕ್ರಮವಾಗಿ ಆಳಿದ ಮೇಲೆ ನೀತಿಮಾರ್ಗ–ರಾಜಮಲ್ಲನೆಂಬ ಗಂಗ ಅರಸನು ರಾಜ್ಯಭಾರವನ್ನು ವಹಿಸಿದನು. ಈ ನೀತಿಮಾರ್ಗನಿಗೂ ಇವನ ಹಿಂದೆ ಇದ್ದ ರಾಜರಿಗೂ ಯಾವ ಸಂಬಂಧವಿತ್ತೆಂಬುದು ತಿಳಿದಿಲ್ಲ. ನೀತಿಮಾರ್ಗ–ರಾಜಮಲ್ಲನ ಕಾಲದಲ್ಲಿ ಕ್ರಿ. ಶ. ೯೯೮–೯೯೯ ರಲ್ಲಿ ಚೋಳ ಮನೆತನದ ೧ನೆಯ ರಾಜರಾಜನು ಗಂಗಪಾಡಿಯನ್ನು ಸ್ವಾಧೀನಪಡಿಸಿಕೊಂಡನು.[5] ಕ್ರಿ. ಶ. ೯೭೫–೯೭೬ ರಲ್ಲಿ ಚಾಳುಕ್ಯ ಮನೆತನದ ೨ನೆಯ ತೈಲಪನು ಗಂಗರ ಮಾಂಡಲಿಕನಾಗಿದ್ದ ಪಂಚಲನನ್ನು ಕೊಂದು ಗಂಗವಾಡಿಯ ಉತ್ತರ ಪಶ್ಚಿಮ ಭಾಗಗಳನ್ನಾಕ್ರಮಿಸಿದ್ದನಾದುದರಿಂದ ಗಂಗರಾಜ್ಯದ ಉಳಿದ ಭಾಗವು ಚೋಳರ ವಶಕ್ಕೆ ಹೋಗಿರಬೇಕು.

---

1 ಮುಂದೆ ಈ ವಿಷಯವನ್ನು ಕುರಿತು ನೋಡಿರಿ. 2 *Ep. Ind* Vol.IV, p 351

3 ಮುಂದೆ ಇದೇ ಪ್ರಕರಣದಲ್ಲಿ ನೋಡಿರಿ. 4 ಇವನ ಹೆಸರು ಶಾಸನಗಳಲ್ಲಿಯೂ ಉಕ್ತವಾಗಿಲ್ಲ. ರಾಯಿಸರು ಇವನನ್ನು ಗಂಗರ ವಂಶವೃಕ್ಷದಲ್ಲಿ ಸೇರಿಸಿದ್ದಾರೆ. See *Mysore and Coorg from Inscriptions.*

5 ೧ನೆಯ ರಾಜರಾಜನ ೧೪ನೆಯ ವರ್ಷದ ಶಿಲಾಶಾಸನ.

## ಗಂಗರಾಜರ ಚರಿತ್ರೆ

**ಕೊಂಗುಣಿವರ್ಮ್ಮ ಮಹಾಧಿರಾಜ ಮಾಧವನು** ಗಂಗರಾಜ್ಯದ ಸ್ಥಾಪಕನು. ಇವನು ಕೊಂಗುಣಿವರ್ಮ್ಮ ಎಂಬ ಹೆಸರಿನಿಂದಲೇ ಪ್ರಸಿದ್ಧನಾಗಿದ್ದಾನೆ. ಇವನ ಶಾಸನಗಳಾವುವೂ ದೊರೆತಿಲ್ಲ. ಇವನು ಖಡ್ಗೈಕ ಪ್ರಹಾರದಿಂದ ಶಿಲಾಸ್ತಂಭವನ್ನು ಕತ್ತರಿಸಿ ಬಹು ಪರಾಕ್ರಮಿಯೆಂದು ಪ್ರಖ್ಯಾತನಾದನೆಂದೂ ಅನೇಕ ಯುದ್ಧಗಳಲ್ಲಿ ಶತ್ರುಗಳನ್ನು ಜಯಿಸಿ ಸ್ವಬಾಹುಬಲದಿಂದ ರಾಜ್ಯವನ್ನು ಸಂಪಾದಿಸಿದನೆಂದೂ ಗಂಗಮನೆತನದ ಲಿಪಿಗಳಲ್ಲಿ ವರ್ಣಿತನಾಗಿದ್ದಾನೆ. ಇವನು ಅರ್ಹದ್ಭಟ್ಟಾರಕ ಶಾಸನ (ಜೈನ ಧರ್ಮ)ದ ಪ್ರಸಾದದಿಂದ ವಿಪುಲೈಶ್ವರ್ಯವನ್ನು ಪಡೆದನು. ಜೈನಗುರು ಸಿಂಹನಂದಿ ಆಚಾರ್ಯರ ಅನುಗ್ರಹದಿಂದ ಶಿಲಾಸ್ತಂಭವನ್ನು ಖಂಡಿಸುವ ಸಾಮರ್ಥ್ಯವನ್ನು ಪಡೆದನು. ಕರ್ಣಿಕಾರ ಪುಷ್ಪಮಾಲೆಯಿಂದ ಇವನ ಲಲಾಟಪಟ್ಟವು ಅಲಂಕೃತವಾಗಿತ್ತು. ಕ್ರಿ. ಶ. ೧೧೨೨ ರ ಶಿವಮೊಗ್ಗೆಯ ಶಾಸನದಲ್ಲಿ ಸಿಂಹನಂದಿಯು ಕೊಂಗುಣಿವರ್ಮನಿಗೆ ಖಡ್ಗವನ್ನು ಕೊಟ್ಟು ಅವನನ್ನು ರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿ ಕರ್ಣಿಕಾರಪುಷ್ಪದ ಪಟ್ಟವನ್ನು ಕಟ್ಟಿದನೆಂದು ಹೇಳಿದೆ. ಸಿಂಹನಂದಿಯ ಪ್ರಸಾದದಿಂದಲೇ ಕೊಂಗುಣಿವರ್ಮ್ಮನಿಗೆ ರಾಜ್ಯವು ಪ್ರಾಪ್ತವಾಯಿತೆಂದು ಕ್ರಿ. ಶ. ೯೨೦ರ ಹಸ್ತಿಮಲ್ಲನ ಉದಿಯೇಂದಿರಂ ಶಾಸನ[1] ಕ್ರಿ. ಶ. ೯೬೩ ರ ಮಾರಸಿಂಹನ ಕೂಡಲೂರು ಶಾಸನ[2] ಕ್ರಿ. ಶ. ೧೦೭೭ರ ನಗರ ಶಾಸನಗಳು,[3] ೧೧೭೭ ರ ಶ್ರವಣಬೆಳ್ಗೊಳ ಶಾಸನ[4] ಮತ್ತು 'ಗೊಮ್ಮಟಸಾರ'ದ ಒಂದು ಪ್ರಾಚೀನ ವ್ಯಾಖ್ಯಾನಗ್ರಂಥವು ಇವೇ ಮೊದಲಾದ ಆಧಾರಗಳಿಂದ ತಿಳಿಯ ಬಂದಿದೆ. ಕೊಂಗುಣಿವರ್ಮ್ಮನಿಗೆ ಜಯಭೂಷಣವೆಂಬ ಬಿರುದು ಇತ್ತು. ಇವನು ಮುನಿಗುರು ದೇವತಾಪೂಜೆಯಲ್ಲಿ ಶ್ರದ್ಧೆಯುಳ್ಳವನಾಗಿದ್ದನು. ಅನೇಕ ದಾನಗಳಿಂದ ಅರ್ಥಿಜನರನ್ನು ಸಂತೋಷಪಡಿಸುತ್ತಿದ್ದನು. ಇವನು ಎಷ್ಟು ಕಾಲ ಆಳಿದನೆಂಬುದು ಗೊತ್ತಿಲ್ಲ.

ಇವನ ತರುವಾಯದಲ್ಲಿ ಇವನ ಮಗನಾದ **೧ನೆಯ ಮಾಧವನು** (ಸು. ಕ್ರಿ. ಶ. ೪೧೫–೪೪೦) ರಾಜನಾದನು. ಇವನು ವಿದ್ಯಾವಿನಯಸಂಪನ್ನನೂ ರಾಜ್ಯಭಾರದಲ್ಲಿ ಪ್ರಜಾಪರಿಪಾಲನೆಯೇ ಮುಖ್ಯ ಧ್ಯೇಯವೆಂದು

---

[1] S. I. I. Vol. II, p. 384. [2] *Mysore Arch. Report*, 1921.
[3] *Ep. Car.* Vol. VIII.
[4] *Śravaṇa Beḷgoḷa Inscriptions.*

ಎಣಿಸಿದವನೂ ನಾನಾಶಾಸ್ತ್ರಗಳ ಅಧ್ಯಯನದಿಂದ ಕುಶಾಗ್ರಬುದ್ಧಿಯುಳ್ಳವನೂ ನೀತಿಶಾಸ್ತ್ರವನ್ನು ಚನ್ನಾಗಿ ಅರಿತಿದ್ದನಲ್ಲದೆ ಅದನ್ನು ಬಲು ಜಾಣ್ಮೆಯಿಂದ ಪ್ರಯೋಗಿಸಲು ಸಮರ್ಥನೂ ಆಗಿದ್ದನು. ಇವನು ದತ್ತಕಸೂತ್ರವೆಂಬ ಗ್ರಂಥಕ್ಕೆ ವೃತ್ತಿಯನ್ನು ರಚಿಸಿದನು. ಇದಲ್ಲದೆ ಇವನು ಒಳ್ಳೆಯ ಕವಿಯೂ ಆಗಿದ್ದನು. ಬೆಂಡಿಗಾನಹಳ್ಳಿ ಶಾಸನದಲ್ಲಿ ಕೃಷ್ಣವರ್ಮ್ಮನಿಗೆ ಕೊಟ್ಟ ವಿಶೇಷಣ ಗಳೆಲ್ಲ ಈ ಮಾಧವನಿಗೆ ಹತ್ತುತ್ತವೆ. ಅಲ್ಲಿ ಇವನು ದೇವದ್ವಿಜ ಗುರುಪಾದ ಸೇವಕನೆಂದು ವರ್ಣಿಸಲ್ಪಟ್ಟಿದ್ದಾನೆ. ಇವನ ಶಿಲಾಶಾಸನಗಳಾವುವೂ ದೊರೆ ತಿಲ್ಲ. ತಾಮ್ರಶಾಸನಗಳಲ್ಲಿ ನಂದಿಶಾಸನವೊಂದೇ[1] ಇವನದು. ಇದರಲ್ಲಿ ಮಾಧವ ಮಹಾಧಿರಾಜನು ಅರಮನೆಯ ಪುರೋಹಿತನಾದ ಕಂಗಮಂಗಲದ ಗಟ್ಟಿವರ್ಮನೆಂಬ ಬ್ರಾಹ್ಮಣನಿಗೆ ಮೊರಸು ನಾಡಿಗೆ ಸೇರಿದ್ದ ಪೆರ್ಬ್ಬಸೂರು ಗ್ರಾಮದಲ್ಲಿ ಭೂಮಿಯನ್ನು ದಾನ ಮಾಡಿದನೆಂದು ಹೇಳಿದೆ. ಕಂಗಮಂಗಲವು ಚಿಂತಾಮಣಿ ತಾಲೂಕಿನಲ್ಲಿರುವ ಕನ್ನಮಂಗಲವೆಂದು ಊಹಿಸಲ್ಪಟ್ಟಿದೆ. ಈ ಶಾಸನದ ಅಕ್ಷರಗಳು ಬಾದಾಮಿಯ ಚಾಳುಕ್ಯ ಮನೆತನದ ೧ನೆಯ ವಿಕ್ರಮಾ ದಿತ್ಯನ ಗದ್ವಾಲಶಾಸನ, ವಿನಯಾದಿತ್ಯನ ಜೆಜೂರಿ, ಹರಿಹರ ಶಾಸನಗಳು ಪೊಲವೀರನ ತಾಗರೇ ಶಾಸನಗಳ ಅಕ್ಷರಗಳನ್ನು ಹೋಲುತ್ತವೆ. ಬರೆಹ ದಲ್ಲಿಯೂ ಭಾಷೆಯಲ್ಲಿಯೂ ಅನೇಕ ತಪ್ಪುಗಳಿರುತ್ತವೆ. ದಾನಭಾಗವು ಆ ಕಾಲದ ಪದ್ಧತಿಯನ್ನು ಬಿಟ್ಟು ಕನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಇವೆಲ್ಲ ಕಾರಣಗಳಿಂದ ಈ ಶಾಸನದ ಸತ್ಯತೆಯ ಬಗ್ಗೆ ಸಂಶಯವುಂಟಾಗದೆ ಇರಲಾರದು.

೧ನೆಯ ಮಾಧವನ ತರುವಾಯದಲ್ಲಿ ಅವನ ಮಗನಾದ **ಹರಿವರ್ಮ್ಮನು** (ಸು. ಕ್ರಿ. ಶ. ೪೪೦–೪೬೦) ಗಂಗರಾಜ್ಯಕ್ಕೆ ಅಧಿಪತಿಯಾದನು. ಇವನೇ ಬೆಂಡಿಗಾನಹಳ್ಳಿ ಚುಕುಟ್ಟೂರು ಶಾಸನಗಳ ಕೃಷ್ಣವರ್ಮ್ಮನೂ ಪೆನುಗೊಂಡೆ ಶಾಸನದ ಆಯ್ಯವರ್ಮ್ಮನೂ ಆಗಿರಬೇಕೆಂದು ಮೇಲೆ ತೋರಿಸಿದ್ದೇವೆ. ಹರಿ ವರ್ಮ್ಮನಿಗೆ ಪಲ್ಲವಸಿಂಹವರ್ಮ್ಮನು ಪಟ್ಟಾಭಿಷೇಕ ಮಾಡಿದನೆಂದು ಪೆನುಗೊಂಡೆ ಶಾಸನವು ಹೇಳುತ್ತದೆ. ಈ ಸಿಂಹವರ್ಮ್ಮನ ಕಾಲವನ್ನು ಸಿಂಹಸೂರಿಯೆಂಬ ಜೈನಮುನಿಯ 'ಲೋಕವಿಭಾಗ'ವೆಂಬ ಗ್ರಂಥದಿಂದ ನಿರ್ಧರಿಸಬಹುದು.[2]

---

[1] *Mysore Arch. Report*, 1914.

[2] 'ಸಂವತ್ಸರೇ ತು ದ್ವಾವಿಂಶೇ ಕಾಞ್ಚೀಶಃ ಸಿಂಹವರ್ಮ್ಮಣಃ ।
ಅಶೀತ್ಯಗ್ರೇ ಶಕಾಹ್ವಾನಾಂ (ಬ್ದಾನಾಂ) ಸಿದ್ಧಮೇತಚ್ಛತತ್ರಯೇ' ॥
ಎಂಬ ಶ್ಲೋಕವು ಲೋಕವಿಭಾಗದಲ್ಲಿ ಉಂಟು.

ಆದರಲ್ಲಿ ಸಿಂಹವರ್ಮ್ಮನ ೨೨ನೆಯ ವರ್ಷವಾದ ಶಕ ೩೮೦ ರಲ್ಲಿ ಈ ಗ್ರಂಥವು ಬರೆಯಲ್ಪಟ್ಟಿತೆಂದು ಹೇಳಿದೆ. ಆದುದರಿಂದ ಸಿಂಹವರ್ಮ್ಮನು ಶಕ ೩೫೮ (ಕ್ರಿ. ಶ. ೪೩೬) ರಲ್ಲಿ ಆಳಲಿಕ್ಕೆ ಮೊದಲು ಮಾಡಿರಬೇಕು. ಇವನು ೨೨ ವರ್ಷಗಳಾಚೆಗೆ ೧-೨ ವರ್ಷ ಕಾಲ ಆಳಿದನೆಂದು ಭಾವಿಸಿ ಕ್ರಿ. ಶ. ೪೬೦ ತ್ರೀ ಇವನ ಕಡೆಯ ವರ್ಷವೆಂದು ತಿಳಿಯಬಹುದು.[1] ಇವನ ಮಗನಾದ ಸ್ಕಂದ ವರ್ಮ್ಮನು ಹರಿವರ್ಮ್ಮನ ಮಗನಾದ ೨ನೆಯ ಮಾಧವನಿಗೆ ಪಟ್ಟಬಂಧ ಮಾಡಿದನೆಂದು ಪೆನುಗೊಂಡೆ ಶಾಸನದಲ್ಲಿ ಬರೆದಿದೆ. ೩ನೆಯ ಮಾಧವನು ಕದಂಬ ೧ನೆಯ ಕೃಷ್ಣವರ್ಮ್ಮನ ತಂಗಿಯನ್ನು ಮದುವೆಯಾದನೆಂದು ಶಾಸನ ಗಳಿಂದ ತಿಳಿಯುವುದರಿಂದ ಅವನ ಕಾಲವು ಸುಮಾರು ಕ್ರಿ. ಶ. ೪೮೦-೪೯೫ ಎಂದು ನಿರ್ಧರಿಸಿದ್ದೇವೆ. ಸ್ಕಂದವರ್ಮ್ಮನು ಕ್ರಿ. ಶ. ೪೬೦ ರಲ್ಲಿ ಆಳತೊಡಗಿ ದುದರಿಂದ ಅವನಿಂದ ಅಭಿಷಿಕ್ತನಾದ ೨ನೆಯ ಮಾಧವನೂ ಅವನ ತಮ್ಮ ವಿಷ್ಣುಗೋಪನೂ ಕ್ರಿ. ಶ. ೪೬೦-೪೮೦ರ ಮಧ್ಯದಲ್ಲಿ ಇದ್ದಿರಬೇಕು. ಈ ೨೦ ವರ್ಷಗಳ ಅವಧಿಯಲ್ಲಿ ಇಬ್ಬರ ಆಳ್ವಿಕೆಗಳು ನಡೆದಿರಬೇಕಾದುದರಿಂದ ೨ನೆಯ ಮಾಧವನ ಪಟ್ಟಬಂಧೋತ್ಸವವು ಕ್ರಿ. ಶ. ೪೬೦ ರಿಂದ ಈಚೆಗೆ ಆಗಿರುವುದು ಸಂಭವವಿಲ್ಲ. ಎಂದರೆ ೪೬೦ ತ್ರೀ ಮಾಧವನ ಮೊದಲನೆಯ ವರ್ಷವೂ ಹರಿವರ್ಮ್ಮನ ಕಡೆಯ ವರ್ಷವೂ ಆಗಿರಬಹುದು. ಹರಿವರ್ಮ್ಮನು ಸಿಂಹವರ್ಮ್ಮನಿಂದ ಅಭಿಷಿಕ್ತನಾದುದರಿಂದ ಕ್ರಿ. ಶ. ೪೩೬ ರಿಂದೀಚೆಗೆ ಇವನು ಸಿಂಹಾಸನವನ್ನೇರಿರಬೇಕು.

ಹರಿವರ್ಮ್ಮನು ಪಿತೃಪೈತಾಮಹಗುಣಸಂಪನ್ನನೂ ಗಜಯುದ್ಧಗಳಲ್ಲಿ ವಿಜಯವನ್ನು ಸಂಪಾದಿಸಿ ಚತುಃಸಮುದ್ರಾಕ್ರಾಂತವಾದ ಕೀರ್ತ್ತಿಯನ್ನು ಪಡೆದವನೂ ಧನುರ್ವಿದ್ಯಾಪ್ರಯೋಗದಲ್ಲಿ ಬಹು ಕುಶಲನೂ ಆಗಿದ್ದನು. ಇವನು ನಾನಾ ಶಾಸ್ತ್ರ ಇತಿಹಾಸ ಪುರಾಣಗಳಲ್ಲಿ ಬಹು ನಿಷ್ಣಾತನೆಂದು ಪೆನುಗೊಂಡೆ ಶಾಸನದಲ್ಲಿ ಹೇಳಿದೆ. ಇವನ ಹೆಸರಿನಿಂದ ಹೊರಟ ಕೂಡಲೂರು,[2] ತಗಡೂರು,[3] ತಂಜಾವೂರು[4] ತಾಮ್ರಶಾಸನಗಳು ಮೂರೂ ಕೃತಕಗಳೇ. ಕೂಡಲೂರು ತಗಡೂರ ಶಾಸನಗಳು ಶಕ ೧೮೮ರಲ್ಲಿ ಹುಟ್ಟಿದಂತೆ ಹೇಳಿಕೊಳ್ಳುತ್ತವೆ. ಅವು ಗಳಲ್ಲಿ ನಿರ್ದಿಷ್ಟವಾದ ಸಂವತ್ಸರಗಳ ಹೆಸರುಗಳು ಒಂದರಲ್ಲಿ ಜಯ, ಇನ್ನೊಂದ ರಲ್ಲಿ ವಿಭವ ಎಂದು ಇರುತ್ತವೆ. ಆದರೆ ಶಕ ೧೮೮ನೆಯ ವರ್ಷವು ವ್ಯಯ

---

[1] *J. R. A. S*, 1915. [2] *Mysore Arch. Report*, 1921.
[3] *E.p. Car.* Vol. III, p. 202. [4] *Ind. Ant.* Vol. VIII, p. 212.

ವಾಗಿತ್ತು. ಲಿಪಿಯು ಬಹಳ ಅರ್ವಾಚೀನದ್ದಿರುತ್ತದೆ. ತಂಜಾವೂರು ಶಾಸನದ ಕಾಲವು ಶಕ ೧೬೯ ಪ್ರಭವವೆಂದಿದ್ದರೂ ಲಿಪಿ ೧೦ನೆಯ ಶತಮಾನದ್ದಿದೆ. ಕೂಡ–ಲೂರು ತಂಜಾವೂರು ಇವೆರಡೂ ಶಾಸನಗಳಲ್ಲಿ ಕೊಟ್ಟಿರುವ ಸಾಕ್ಷಿಗಳ ಮತ್ತು ಲೇಖಕನ ಹೆಸರುಗಳು ಶಕ ೩೮೮ (ಕ್ರಿ.ಶ.೪೬೬)ರ ಮಡಿಕೇರಿ ಶಾಸನ[1] ದಲ್ಲಿದ್ದಂತೆ ಇರುತ್ತವೆ. ಇವೆಲ್ಲ ಕಾರಣಗಳಿಂದ ಈ ಶಾಸನಗಳು ಇತಿಹಾಸ ರಚನೆಯಲ್ಲಿ ವಿಶ್ವಸನೀಯವಾಗಲಾರವು. ಬೆಂಡಿಗಾನಹಳ್ಳಿ ತಾಮ್ರಲಿಪಿಯೊಂದು[2] ಇವನ ನಿಜವಾದ ಶಾಸನವು. ಇದರಲ್ಲಿ ಕೃಷ್ಣವರ್ಮ (ಹರಿವರ್ಮ)ನು ತನ್ನ ಆಳಿಕೆಯ ೧ನೆಯ ವರ್ಷದ ಆಶ್ವಯುಜಮಾಸ ಕೃಷ್ಣಪಕ್ಷ ತ್ರಯೋದಶಿ ತಿಥಿಯಲ್ಲಿ ಕಲ್ಯ–ಪಾಟಸ್ಥಾನದ ನೆಲೆವೀಡಿನಲ್ಲಿದ್ದಾಗ ಪರುವಿ ವಿಷಯಕ್ಕೆ ಸೇರಿದ ಪೆರಟಿ ಭೋಗ ದಲ್ಲಿದ್ದ ಕುರಲೂರ ಗ್ರಾಮವನ್ನು ವಳವೀರ ಚತುರ್ವೇದಿಯ ಮಗನಾದ ಮಾತೃಶರ್ಮ್ಮನಿಗೆ ಬ್ರಹ್ಮದಾಯವಾಗಿ ಕೊಟ್ಟನೆಂದು ಹೇಳಿದೆ. ಪರುವಿ ವಿಷ ಯುವು ಪೆನುಗೊಂಡೆ ಶಾಸನದಲ್ಲಿ ನಿರ್ದಿಷ್ಟವಾದ ಪರುವಿ ವಿಷಯವೇ. ಇದು ಹಿಂದುಪುರ ತಾಲೂಕಿನಲ್ಲಿದ್ದ ಈಗಿನ ಪರಗಿಯು.

ಹರಿವರ್ಮನಿಗೆ ಮಾಧವ, ವೀರವರ್ಮ, ವಿಷ್ಣುಗೋಪ ಎಂಬ ಮೂವರು ಮಕ್ಕಳಿದ್ದರು. ಮಾಧವನು ರಾಜನಾಗಿದ್ದಾಗ ಅವನ ಅನುಜನಾದ ವೀರ–ವರ್ಮನು ಯುವರಾಜನಾಗಿದ್ದನೆಂದು ಚುಕುಟ್ಟೂರು ಶಾಸನದಿಂದ ತಿಳಿವುದ ರಿಂದ ವಿಷ್ಣುಗೋಪನಿಗಿಂತ ಇವನು ಹಿರಿಯನಾಗಿರಬೇಕು.

ಹರಿವರ್ಮ–ಕೃಷ್ಣವರ್ಮನ ಮಗನಾದ **೨ನೆಯ ಮಾಧವ-ಸಿಂಹ ವರ್ಮನು** ಸು. ಕ್ರಿ.ಶ. ೪೬೦ರಲ್ಲಿ ಸಿಂಹಾಸನವನ್ನೇರಿದನು. ಹರಿವರ್ಮನು ತನ್ನ ಪ್ರಭುವಾದ ಪಲ್ಲವಸಿಂಹವರ್ಮನ ಹೆಸರನ್ನೇ ತನ್ನ ಮಗನಿಗೆ ಇಟ್ಟಂತೆ ತೋರು ತ್ತದೆ. ಸಿಂಹವರ್ಮನ ಮಗನಾದ ಸ್ಕಂದವರ್ಮನು ಮಾಧವನಿಗೆ ರಾಜ್ಯಾಭಿ-ಷೇಕವನ್ನು ಮಾಡಿದನು. ಪೆನುಗೊಂಡೆ ಶಾಸನದ ಈ ಮಾಧವನು ಗಂಗವಂಶದ ಒಂದು ಶಾಖೆಯಾದ ಪಜುವಿ ಮನೆತನಕ್ಕೆ ಸೇರಿದವನೆಂಬ ಡುಬ್ರಾಯಿಲರ ಅಭಿ ಪ್ರಾಯವು ಸರಿಯಾದುದಲ್ಲ. ಬೆಂಡಿಗಾನಹಳ್ಳಿ ಶಾಸನದ ಪರುವಿವಿಷಯವು ಹರಿವರ್ಮನ ವಶದಲ್ಲಿತ್ತೆಂದು ತಿಳಿದಿದೆ. ಮತ್ತು ಅದು ಅವನೀತನ ರಾಜ್ಯದಲ್ಲಿ–ತ್ತೆಂದು ಅವನ ಬೆಂಗಳೂರು ರೆಸಿಡೆನ್ಸಿ ತಾಮ್ರಶಾಸನದಿಂದ ಗೊತ್ತಾಗುತ್ತದೆ.

---

[1] *Coorg Inscriptions*, No. 1, p. 1; *Mysore Inscriptions*, No. 251, p. 282.

[2] *Mysore Arch. Report*, 1915.

ಈ ಮಾಧವನು 'ಕ್ರಮಪ್ರಾಪ್ತ' ವಾದ ರಾಜ್ಯವನ್ನಾಳುತ್ತಿದ್ದನೆಂದು ಪೆನಗೊಂಡೆ ಶಾಸನದಲ್ಲಿ ಹೇಳಿದೆ. ಇದರಿಂದ ೨ನೆಯ ಮಾಧವನು ಗಂಗವಂಶದ ಮೂಲ ಮನೆತನಕ್ಕೆ ಹೊಂದಿದವನೆಂದೇ ಹೇಳಬೇಕಾಗುತ್ತದೆ. 'ಗಾಂಗೇಯ ವಂಶ-ಧ್ವಜ' ನಾದ ಮಾಧವನು ಅನೇಕ ಯುದ್ಧಗಳಲ್ಲಿ ಪರಾಕ್ರಮವನ್ನು ತೋರಿಸಿ ವಿಜಯವನ್ನು ಸಂಪಾದಿಸಿದ್ದನು. ಇವನ ಬಲವಾದ ತೋಳುಗಳು ಆಯುಧ ಪ್ರಹಾರಗಳ ಕಲೆಗಳಿಂದ ಶೋಭಿಸುತ್ತಿದ್ದವು. ಇವನು ಬಾಹುವೀರ್ಯ್ಯದಿಂದ ತನ್ನ 'ಕ್ರಮಪ್ರಾಪ್ತವಾದ' ರಾಜ್ಯವನ್ನು ವಿಸ್ತರಿಸಿದನು. ಇವನ ನುಡಿಯು 'ಲಟಹ' ವೆಂಬ ವಾದ್ಯದಂತೆ ಗಂಭೀರವೂ ಮೃದುವೂ ಆಗಿದ್ದಿತು. ಇವನು ದೇವದ್ವಿಜ ಗುರುಗಳನ್ನು ಅತ್ಯಾದರದಿಂದ ಪೂಜಿಸುತ್ತಿದ್ದನು. ಧರ್ಮಶಾಸ್ತ್ರಾ-ಭ್ಯಾಸದಿಂದ ಇವನ ಬುದ್ಧಿ ನಿಶ್ಚಲವಾಗಿತ್ತು.

೩ನೆಯ ಮಾಧವನು ರಾಜನಾಗುವ ಮೊದಲು ಅಂದರೆ ಕ್ರಿ. ಶ. ೪೮೦ರ ಪೂರ್ವದಲ್ಲಿ ಮಾಧವ ವಿಷ್ಣುಗೋಪರಿಬ್ಬರ ಆಳಿಕೆಗಳು ಮುಗಿದಿರಬೇಕೆಂದು ಮೇಲೆ ಹೇಳಿದ್ದೇವೆ. ಮಾಧವನ ಪೆನುಗೊಂಡೆ ಶಾಸನದ ಕಾಲವು ಸು. ಕ್ರಿ. ಶ. ೪೭೫ದೆಂದು ಫ್ಲೀಟರು ಹೇಳಿದ್ದಾರೆ.[1] ವಿಷ್ಣುಗೋಪನು ಕೆಲಕಾಲ ಆಳಿದುದ-ರಿಂದ ಕ್ರಿ. ಶ. ೪೭೫ದೇ ಮಾಧವನ ಕಡೆಯ ವರ್ಷವೆಂದು ಹಿಡಿದಿದ್ದೇವೆ.

## ಮಾಧವನ ಶಾಸನಗಳು

೧. ಚುಕುಟ್ಟೂರು ತಾಮ್ರಶಾಸನ.[2]— ಮಾಧವನು 'ಅಪ್ರತಿಮರಣಶೂರ' ನಾದ ತನ್ನ ತಮ್ಮ ಯುವರಾಜ ವೀರವರ್ಮನ ಔರ್ಧ್ವದೇಶಿಕಾರ್ಥವಾಗಿ ಯಮನಿಯಮ ತಪಃಸ್ವಾಧ್ಯಾಯ ಯಜನ ಯಾಜನ ಅಧ್ಯಯನ ಅಧ್ಯಾ-ಪನ ಶಾಪಾನುಗ್ರಹ ಸಮರ್ಥರಾದ ೭೪ ಜನ ಬ್ರಾಹ್ಮಣರಿಗೆ ಮಾರ್ಗ-ಶೀರ್ಷ ಕೃಷ್ಣಪಕ್ಷ ಅಷ್ಟಮೀ ಚಿತ್ರಾ ನಕ್ಷತ್ರದಂದು ಕೈವಾರ ವಿಷಯ ದಲ್ಲಿದ್ದ ಚುಕುಟ್ಟೂರು ಗ್ರಾಮವನ್ನು ವೀರಮಂಗಲ (ಮಜರೆ) ಸಹಿತ ವಾಗಿ ದಾನಮಾಡಿದನು. ಈ ತಾಮ್ರಪಟ್ಟಿಕೆಯನ್ನು ಬಾಣಪುರೇಶ ಅಪಾಪನು ಬರೆದನು.

೨. ಪೆನುಗೊಂಡೆ ತಾಮ್ರಶಾಸನ.[3]— ಗಂಗವಂಶದ ಮಾಧವ ಮಹಾರಾಜ ನಾದ ಶ್ರೀಸಿಂಹವರ್ಮನು ವತ್ಸಗೋತ್ರದ ತೈತ್ತಿರೀಯಚರಣದ ಕುಮಾರ

---

[1] *Journal of the Royal Asiatic Society*, 1915.

[2] *Mysore Arch. Report*, 1924.

[3] *Ep. Ind.* Vol. XIV, p. 331.

ಶರ್ಮ್ಮನೆಂಬ ಬ್ರಾಹ್ಮಣನಿಗೆ ಚೈತ್ರ ಪೌರ್ಣಿಮೆಯ ದಿನ ಪರುವಿವಿಷಯದಲ್ಲಿ ಪರುವಿಮಹಾತಟಾಕದ ಕೆಳಗೆ ಕರ್ಮ್ಮಟುವ ಕ್ಷೇತ್ರದಲ್ಲಿ ೬೫ ಗದ್ದೆಗಳನ್ನು ಬ್ರಹ್ಮದೇಯವಾಗಿ ಕೊಟ್ಟನು.

ಯುವರಾಜ ವೀರವರ್ಮನು ಮಾಧವನ ಕಾಲದಲ್ಲಿಯೇ ಸತ್ತುದರಿಂದ ಕಡೆಯ ತಮ್ಮನಾದ ವಿಷ್ಣುಗೋಪನು ಸು. ೪೭೫ರಲ್ಲಿ ರಾಜ್ಯಭಾರವನ್ನು ವಹಿಸಿದನು. ಇವನ ಶಾಸನಗಳಾವುವೂ ಸಿಕ್ಕಿಲ್ಲ. ಇವನು ರಾಜನೀತಿಯಲ್ಲಿ ಬೃಹಸ್ಪತಿತುಲ್ಯನೂ ಗುರುಗೋಬ್ರಾಹ್ಮಣಪೂಜಕನೂ ನಾರಾಯಣಚರಣಾನುಧ್ಯಾತನೂ ಆಗಿದ್ದನು. ಇವನ ಆಳಿಕೆಯಲ್ಲಿ ಪರಾಕ್ರಮದ ಸಂಗತಿಗಳಾವುವೂ ಜರುಗಿಲ್ಲ. ಕ್ರಿ. ಶ. ೪೮೦ರಲ್ಲಿ ಇವನ ಮಗನು ರಾಜನಾದುದರಿಂದ ಅಷ್ಟರಲ್ಲಿ ಇವನ ರಾಜ್ಯಭಾರವು ಕೊನೆಗಂಡಿರಬೇಕು. ಅವಿನೀತನ ಮಲ್ಲೊಹಳ್ಳಿ ತಾಮ್ರಶಾಸನದಲ್ಲಿ ವಿಷ್ಣುಗೋಪನು 'ಯಾವದಾಯುಃಖಂಡಿತಮನೋತ್ಸಾಹ'[1] ನಾಗಿದ್ದನೆಂದು ಹೇಳಿದೆ. ಇದನ್ನವಲಂಬಿಸಿ ರಾಯಿಸರು ವಿಷ್ಣುಗೋಪನ ಆಳಿಕೆಯು ಬಹುಕಾಲ ಅಂದರೆ ೬೦ ವರ್ಷಕ್ಕೆ ಮಿಕ್ಕಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ವಿಷ್ಣುಗೋಪನು ಕ್ರಿ. ಶ. ೪೮೦ ರ ನಂತರ ಆಳಿರಲು ಶಕ್ಯವಿಲ್ಲವೆಂದೂ ಇವನ ಆಳಿಕೆಯು ಅಲ್ಪಕಾಲವಿತ್ತೆಂದೂ ಆಧಾರಗಳನ್ನು ಕೊಟ್ಟು ತೋರಿಸಿದ್ದೇವೆ. ಆದುದರಿಂದ ಮೇಲ್ಕಂಡ ವಿಶೇಷಣವು ವಿಷ್ಣುಗೋಪನು ಇಳಿವಯಸ್ಸಿನವನಾದ ಬಳಿಕ ಪಟ್ಟಕ್ಕೆ ಬಂದಿರಬೇಕೆಂಬ ಅಂಶವನ್ನು ಮಾತ್ರ ಸೂಚಿಸುತ್ತದೆ.

ವಿಷ್ಣುಗೋಪನ ತರುವಾಯದಲ್ಲಿ ೩ ನೆಯ ಮಾಧವನು ಗಂಗ ಸಿಂಹಾಸನವನ್ನೇರಿದನು. ಇವನಿಗೆ ತಡಂಗಾಲ (ಕುಂಟಕಾಲುಳ್ಳ) ಮಾಧವನೆಂಬ ಅಪರನಾಮವಿತ್ತು. ಇವನು ಎಷ್ಟುವರ್ಷ ಆಳಿದನೆಂಬುದು ತಿಳಿಯದುದರಿಂದ ಇವನಿಗೆ ೧೫ ವರ್ಷ ಆಳಿಕೆಯನ್ನು ಕೊಟ್ಟಿದ್ದೇವೆ. ಇವನ ಮಗನಾದ ಅವಿನೀತನು ಅಶ್ವಮೇಧಯಾಜಿಯಾದ ಕದಂಬ ಕೃಷ್ಣವರ್ಮ್ಮಮಹಾಧಿರಾಜನ ಭಾಗಿನೇಯನೆಂದು ಅನೇಕ ಗಂಗರ ಶಾಸನಗಳಲ್ಲಿ ಹೇಳಿದೆ. ಈ ಕೃಷ್ಣವರ್ಮ್ಮನು ಕಾಕುತ್ಸ್ಥವರ್ಮ್ಮನ ಮಗನಾದ ೧ನೆಯ ಕೃಷ್ಣವರ್ಮ್ಮನೇ. ಇವನ ಮಗನಾದ ಯುವರಾಜದೇವವರ್ಮ್ಮನ ದೇವಗಿರಿ ತಾಮ್ರಶಾಸನದಿಂದಲೂ ೨ನೆಯ ಕೃಷ್ಣವರ್ಮ್ಮನ ಬೆಣ್ಣೂರು ತಾಮ್ರಶಾಸನದಿಂದಲೂ ೧ನೆಯ ಕೃಷ್ಣವರ್ಮನೇ

[1] *Ep. Car.* Vol. IX, DB. 67.

ಅಶ್ವಮೇಧಯಾಜಿಯೆಂದು ಗೊತ್ತಾಗುತ್ತದೆ.[1] ೨ನೆಯ ಕೃಷ್ಣವರ್ಮನು ಅಶ್ವಮೇಧಯಾಗವನ್ನು ಮಾಡಿದ್ದನೆಂಬ ವಿಷಯದಲ್ಲಿ ಉಲ್ಲೇಖವೇನೂ ಇಲ್ಲ. ಆದುದರಿಂದ ಅವಿನೀತನ ಸೋದರಮಾವನು ೨ನೆಯ ಕೃಷ್ಣವರ್ಮನೆಂಬ ಡುಬ್ರಾಯಿಲರ ಅಭಿಪ್ರಾಯವು ಸರಿಯಲ್ಲ.[2] ಇದಲ್ಲದೆ ಅವಿನೀತನ ತಂದೆಯಾದ ೩ನೆಯ ಮಾಧವನು (ಕ್ರಿ. ಶ. ೪೮೦-೪೯೫) ಕದಂಬ ೨ನೆಯ ಕೃಷ್ಣವರ್ಮನ (ಕ್ರಿ. ಶ.-೫೪೫-೫೭೦) ಸಮಕಾಲೀನನಾಗಿರುವುದು ಸಂಭವವಿಲ್ಲ.

ಮಾಧವನು ತ್ರ್ಯಂಬಕಸೇವೆಯಲ್ಲಿ ಸದಾನಿರತನೂ ಕಲಿಯುಗವೆಂಬ ಕೆಸರಿನಲ್ಲಿ ಸಿಕ್ಕಿಕೊಂಡಿದ್ದ ಧರ್ಮದೇವತೆಯನ್ನು ಉದ್ಧಾರಮಾಡುವುದರಲ್ಲಿ ನಿತ್ಯಸನ್ನದ್ಧನೂ ಆಗಿದ್ದನು. ಇವನು ಸ್ವಭುಜಬಲಪರಾಕ್ರಮದಿಂದ ರಾಜ್ಯವನ್ನು ಸಂಪಾದಿಸಿದ್ದನೆಂದೂ ಬಹುಕಾಲ ನಷ್ಟವಾಗಿದ್ದ ದೇವಭೋಗಬ್ರಹ್ಮದೇಯಗಳನ್ನು ಉದ್ಧಾರಮಾಡಿ ಧರ್ಮಾಭಿವೃದ್ಧಿಯನ್ನು ಮಾಡಿದನೆಂದೂ ನೊಣಮಂಗಲ,[3] ಶೃಂಗೇರಿ,[4] ಮೊದಲಾದ ಗಂಗರ ಶಾಸನಗಳಲ್ಲಿ ಹೇಳಿದೆ. ಇದರಿಂದ ಗಂಗರಾಜ್ಯದ ಕೆಲವು ಭಾಗವು ಪರರ ಕೈಸೇರಿತ್ತೆಂದೂ ಅದನ್ನು ಮಾಧವನು ಅತಿಶೌರ್ಯದಿಂದ ಕಿತ್ತುಕೊಂಡು ಅಂತರಿತವಾಗಿದ್ದ ದಾನಗಳನ್ನು ಉಜ್ಜೀವಗೊಳಿಸಿದನೆಂದೂ ತಿಳಿಯಬಹುದು. ಈ ಪರರಾಜರು ಗಂಗರ ಸಮಕಾಲೀನರಾಗಿದ್ದ ಕದಂಬರಾಗಿರಬಹುದು. ಮೃಗೇಶವರ್ಮನ (ಕ್ರಿ. ಶ. ೪೭೨-೪೯೭) ೮ನೆಯ ವರ್ಷದ ಹಲಸಿ ತಾಮ್ರಶಾಸನದಲ್ಲಿ ಅವನು 'ತುಂಗಗಂಗಕುಲೋತ್ಸಾದಿ' ಎಂದು ವರ್ಣಿಸಲ್ಪಟ್ಟಿದ್ದಾನೆ.[5] ಇದು ಮೃಗೇಶವರ್ಮನು ಈ ಪ್ರಬಲ ಗಂಗರನ್ನು ಸೋಲಿಸಿದನೆಂಬುದನ್ನು ಸೂಚಿಸುತ್ತದೆ. ೩ನೆಯ ಮಾಧವನಿಗೆ ಕೊಟ್ಟಿರುವ 'ಸ್ವಭುಜಬಲಪರಾಕ್ರಮಕ್ರಯಕ್ರೀತರಾಜ್ಯ' ಎಂಬ ವಿಶೇಷಣವು ಕಳೆದುಹೋಗಿದ್ದ ರಾಜ್ಯವನ್ನು ಅವನು ಕದಂಬರಿಂದ ತಿರುಗಿ ಸಂಪಾದಿಸಿದನೆಂಬುದನ್ನು ತೋರಿಸುತ್ತದೆ.

---

1 ಹಿಂದೆ ಕದಂಬ ಪ್ರಕರಣದಲ್ಲಿ ಈ ವಿಷಯದ ಚರ್ಚೆಯನ್ನು ನೋಡಿರಿ.

2 *Ancient History of the Deccan*, p. 103. ಹೆರಾಸರು ಡುಬ್ರಾಯಿಲರ ಅಭಿಪ್ರಾಯವನ್ನೇ ಎತ್ತಿಹಿಡಿದಿದ್ದಾರೆ. ಇದು ತಪ್ಪೆಂದು ಹಿಂದೆ ೨೧-೨೨ ಪುಟಗಳಲ್ಲಿ ತೋರಿಸಿದ್ದೇವೆ.

3 *Ep. Car.* Vol. X, Mr. 73.

4 M. A. R. 1916.

5 *Ind. Ant.* Vol. VI, p. 24.

## ಇವನ ಶಾಸನಗಳು :

೧. ಇದುವರೆಗೆ ದೊರೆತ ಇವನ ಮೂರು ಶಾಸನಗಳಲ್ಲಿ ಹರಿಹರ (ತಾಗರ್ತಿ) ತಾಮ್ರಲಿಪಿಯು [1] ಕೃತಕ. ಇದರಲ್ಲಿಯ ಕಾಲನಿರ್ದೇಶಕ ಕ್ರಮವು ೫-೬ನೆಯ ಶತಮಾನದಲ್ಲಿ ಪ್ರಚಾರದಲ್ಲಿರಲಿಲ್ಲ. ಲಿಪಿಸ್ವರೂಪವೂ ಕೂಡ ಈ ಕಾಲಕ್ಕೆ ತಕ್ಕುದಿಲ್ಲ. ತಡಂಗಾಲ ಮಾಧವನು ತಳವನಪುರದಲ್ಲಿ ಇದ್ದಾಗ ರಾಜಮಲ್ಲನ ಹೆಂಡತಿಯನ್ನೂ ಸೇವಕರನ್ನೂ ಶತ್ರುಗಳ ಕೈಯಿಂದ ತಪ್ಪಿಸಿ ರಾಜಧಾನಿಗೆ ಸುರಕ್ಷಿತವಾಗಿ ಕರೆದೊಯ್ದು ಸಾಹಸಕ್ಕಾಗಿ ಯೆರಕುಲದ ರಾಮದೇವನಿಗೆ ಅವಳು ಶಕ ೨೭ [೨] (?) (ಶಗವಷನಯುನಗಿರ್ರೇನಯಾ !`) ಸಾಧಾರಣಸಂವತ್ಸರದಲ್ಲಿ ಕಾರೆನಾಡ ದೇವಸೂರನ್ನು ಬಹುಮಾನವಾಗಿ ಕೊಟ್ಟಳೆಂದು ಹೇಳಿದೆ. ಈ ಶಕ ವರ್ಷದಲ್ಲಿ ಮಾಧವನು ಇದ್ದಿರಲೇ ಇಲ್ಲ.

೨. ನೊಣಮಂಗಲ ತಾಮ್ರಶಾಸನ.—ಇದು ಮಾಧವನ ಆಳಿಕೆಯ ೧೩ನೆಯ ವರ್ಷದ ಫಾಲ್ಗುಣ ಶುಕ್ಲ ಪಂಚಮಿಯ ದಿನ ಹುಟ್ಟಿತು. ಈ ದಿನ ಮಾಧವನು ಆಚಾರ್ಯ ವೀರದೇವನ ಉಪದೇಶದ ಮೇರೆಗೆ ಮುದುಕೊಟ್ಟೂರು ವಿಷಯದ ಪೆಬ್ಬೊರ್ಳಲ್ ಗ್ರಾಮದಲ್ಲಿದ್ದ ಅರ್ಹದ್ದೇವಾಲಯಕ್ಕೆ ಕುಮಾರಪುರಗ್ರಾಮವನ್ನೂ ಕೆರೆಯ ಕೆಳಗಿನ ಭೂಮಿಯನ್ನೂ ದಾನಮಾಡಿದನು.

೩. ಮೆಳೆಕೋಟೇ ತಾಮ್ರಶಾಸನ.[2]— ಇದರ ೫ ಪತ್ರಗಳಲ್ಲಿ ೨ನೆಯ ಪತ್ರವು ನಷ್ಟವಾಗಿದೆ. ಅದರಲ್ಲಿ ತಿಥಿನಿರ್ದೇಶವೂ ದಾನಭಾಗದ ವಿವರಗಳೂ ಇದ್ದಿರಬಹುದು. 'ಗಾಂಗೇಯ ರಾಜ್ಯ' ದಲ್ಲಿ ಮಾಧವವರ್ಮನು ಬುದ್ಧಸತ್ವವಿಹಾರಕ್ಕೆ ದಾನಮಾಡಿದನು. ಅದೇ ವಿಹಾರಕ್ಕೆ ರಕ್ತತಟಾಕದ ಕೆಳಗೆ ೩ ಖಂಡುಗ ಬೀಜವರಿ ಭೂಮಿಯನ್ನೂ ಶಾಕ್ಯಶಿಲೆಯ ಪೂರ್ವದಿಕ್ಕಿನಲ್ಲಿ ೧೨ ಖಂಡುಗ ಬೀಜವರಿ ಭೂಮಿಯನ್ನೂ ಕೊಟ್ಟಂತೆ ಹೇಳಿದೆ. ದಾನಭಾಗದಲ್ಲಿ ಪೇರೂರ ವಾಸ್ತವ್ಯರಾದ ಧನವಂತರೂ ಮಣಿಗ್ರಾಮದ ಸೆಟ್ಟಿಗಳೂ ಉಕ್ತರಾಗಿದ್ದಾರೆ. ಈ ಶಾಸನದ ಕಾಲವು ಸುಮಾರು ಕ್ರಿ. ಶ. ೪೦೦ ಇರಬೇಕೆಂದು ಶ್ರೀಮಾನ್ ನರಸಿಂಹಾಚಾರ್ಯರು ಬರೆದಿದ್ದಾರೆ. ಫ್ಲೀಟರು ಲಿಪಿಸ್ವರೂಪದ ಪರಿಶೀಲನೆಯಿಂದ

---

[1] *Ep. Car.* Vol. VII, SK. 52.  [2] M. A. R. 1910.

ಅದನ್ನು ೧೦೦ ವರ್ಷ ಮುಂದಕ್ಕೆ ಹಾಕಬೇಕೆಂದು ಹೇಳಿದ್ದಾರೆ.[1] ಆದುದರಿಂದ ಈ ಶಾಸನದ ಕಾಲವು ಸು. ಕ್ರಿ. ಶ. ೫೦೦ ಇರಬೇಕು.

ಮಾಧವನ ತರುವಾಯ ಅವನ ಮಗನಾದ ಅವಿನೀತನು ಕ್ರಿ. ಶ. ೪೯೫ರಲ್ಲಿ ಪಟ್ಟಕ್ಕೆ ಬಂದನು. ತಾಯಿಯ ತೊಡೆಯ ಮೇಲಿದ್ದಾಗಲೇ ಇವನಿಗೆ ರಾಜ್ಯಾಭಿಷೇಕವಾಯಿತು. ಬೆಂಗಳೂರು ರೆಸಿಡೆನ್ಸಿ ಶಾಸನದಲ್ಲಿ ಅವಿನೀತನು ಶೈಶವಕಾಲದಲ್ಲಿಯೇ ಅಭಿಷಿಕ್ತನಾದನೆಂದು ಬರೆದಿದೆ. ನೊಣಮಂಗಲ[2] ಶೃಂಗೇರಿ ತಾಮ್ರಶಾಸನಗಳು ಅನುಕ್ರಮವಾಗಿ ಅವಿನೀತನ ಆಳಿಕೆಯ ೧ನೆಯ ಮತ್ತು ೨ನೆಯ ವರ್ಷಗಳಲ್ಲಿ ಕೊರೆಯಲ್ಪಟ್ಟಿವೆ. ಆವೆರಡರಲ್ಲಿಯೂ ಅವನು 'ಲಲನಾನಯನ ಭ್ರಮರಾವಳೀ ನಿತ್ಯ ಕೃತಾನುಯಾತ್ರ'ನೂ 'ಆಖಂಡ ಲವಿಡಂಬಿ ಶೌರ್ಯ ವೀರ್ಯ ಧೈರ್ಯ ಯಶೋಧಾಮಭೂತ'ನೂ 'ಗಜಧುರಿ ಹಯಪೃಷ್ಠೇ ಕಾರ್ಮ್ಮುಕೇ ಚ ಅದ್ವಿತೀಯ'ನೂ ಆಗಿದ್ದನೆಂದು ವರ್ಣಿಸಲ್ಪಟ್ಟಿದ್ದಾನೆ. ಈ ಶಾಸನಗಳಲ್ಲಿ ನಿರ್ದೇಶಿಸಿದ ಕಾಲವನ್ನು (೧ನೆಯ ಮತ್ತು ೨ನೆಯ ವರ್ಷಗಳನ್ನು) ಅವನ ರಾಜ್ಯಾಭಿಷೇಕದ ದಿನದಿಂದ ಎಣಿಸಿದರೆ ಅವಿನೀತನು ತಾಯಿಯ ತೊಡೆಯಮೇಲಿನ ಶಿಶುವಾಗಿದ್ದಾಗಲೇ ಆನೆ ಕುದುರೆಗಳ ಮೇಲೆ ಕುಳಿತು ಯುದ್ಧಮಾಡುವುದರಲ್ಲಿಯೂ ಧನುರ್ವಿದ್ಯೆಯಲ್ಲಿಯೂ ಅತಿ ನಿಪುಣನಾಗಿದ್ದನಲ್ಲದೆ ಲಲನೆಯರ ಮನಸ್ಸನ್ನು ಎಳೆಯುತ್ತಿದ್ದನೆಂದು ಹೇಳಬೇಕಾಗುತ್ತದೆ. ಇದು ತೀರ ಅಸಂಭವವಾದಕಾರಣದಿಂದ ಅವನು ಪ್ರಾಪ್ತವಯಸ್ಕನಾಗಿ ತಾನೇ ರಾಜ್ಯಸೂತ್ರಗಳನ್ನು ವಹಿಸಿದಂದಿನಿಂದ ತನ್ನ ಹೆಸರಿನಿಂದ ಕೊರೆಯಿಸಿದ ಶಾಸನಗಳಲ್ಲಿ ಆಳಿಕೆಯ ಕಾಲವನ್ನು ಎಣಿಸಲಾರಂಭಿಸಿದನೆಂದು ತಿಳಿಯಬೇಕು. ಇದುವರೆಗೆ ಸಿಕ್ಕಿರುವ ಇವನ ಶಾಸನಗಳಲ್ಲಿ ೨೯ನೆಯ ವರ್ಷದಲ್ಲಿ ಹುಟ್ಟಿದ ಮಲ್ಲೊಹಳ್ಳಿ ತಾಮ್ರಶಾಸನವೇ ಕಡೆಯದು. ಇಲ್ಲಿಂದಾಚೆಗೆ ಸುಮಾರು ೫-೬ ವರ್ಷಗಳ ಕಾಲ ಅವಿನೀತನು ರಾಜ್ಯಭಾರ ಮಾಡಿದನೆಂದು ತಿಳಿದರೆ ತಪ್ಪಾಗಲಿಕ್ಕಿಲ್ಲ. ಇವನ ೨ನೆಯ ವರ್ಷದ ಶೃಂಗೇರಿ ಶಾಸನದಲ್ಲಿ ಅವನೀತನ ಬೃಹದ್ದೇವಿ (ಅಗ್ರಮಹಿಷಿ) ಯು ದಾನಮಾಡಿದಂತೆ ಹೇಳಿದೆ. ಬೃಹದ್ದೇವಿ ಎಂಬ ಪದಪ್ರಯೋಗದಿಂದ ಅವಿನೀತನಿಗೆ ಬೇರೆ ರಾಣಿಯಾಗಲಿ ರಾಣಿಯರಾಗಲಿ ಇದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಇದರಿಂದ ರಾಜ್ಯದಾಡಳತೆಯನ್ನು ತನ್ನ ವಶಕ್ಕೆ ತೆಗೆದುಕೊಂಡಾಗ ಇವನು ೨೦ ವರ್ಷದವನಾದರೂ ಇದ್ದಿರಲಿಕ್ಕೆ ಬೇಕು. ಈ ಗಣನೆಯಂತೆ ಲೆಕ್ಕಹಾಕಿ ಅವಿನೀತನಿಗೆ

---

[1] M. A. R. 1921, p. 27. [2] *Ep. Car.* Vol. X. Mr. 72.

ರಾಜ್ಯಾಭಿಷೇಕದ ಕಾಲದಿಂದ ಸುಮಾರು ೬೦ ವರ್ಷಗಳ ಆಳಿಕೆಯನ್ನು (ಕ್ರಿ. ಶ. ೪೯೫–೫೫೫) ಕೊಟ್ಟಿದ್ದೇವೆ.

ಇವನು ಶೌರ್ಯಸಾಹಸಗಳಿಂದ ಉನ್ಮತ್ತ ಶತ್ರುಗಳನ್ನು ಅನೇಕ ಸಮರಗಳಲ್ಲಿ ಸೋಲಿಸಿ ಅವರನ್ನು ತನ್ನ ಆಜ್ಞಾನುವರ್ತಿಗಳನ್ನಾಗಿ ಮಾಡಿದನು. ಬೆಂಗಳೂರು ರೆಸಿಡೆನ್ಸಿ ಶಾಸನದಲ್ಲಿ[1] ಅವಿನೀತನು ಅನಾಯಾಸದಿಂದ ಸಾಮಂತರನ್ನು ಬಗ್ಗುಬಡಿದನೆಂದು ಹೇಳಿದೆ ಇದರಿಂದ ಈ ಶಾಸನದ ಕಾಲ ಅಂದರೆ ಅವನ ಆಳಿಕೆಯ ೨೫ನೆಯ ವರ್ಷದ ಪೂರ್ವದಲ್ಲಿ ಗಂಗರ ಮಾಂಡಲಿಕರು ದಂಗೆಯೆಬ್ಬಿಸಿದ್ದರೆಂದು ಊಹಿಸಬಹುದು. ಇವನು ಪ್ರಭುಮಂತ್ರೋತ್ಸಾಹ ಶಕ್ತಿಗಳಿಂದ ರಾಜ್ಯವೈಭವವನ್ನು ವೃದ್ಧಿಗೊಳಿಸುತ್ತ ಪ್ರಜೆಗಳನ್ನು ಬಹು ಪ್ರೀತಿಯಿಂದ ಪರಿಪಾಲಿಸುತ್ತಿದ್ದನು. ಅಪರಾಧಿಗಳನ್ನು ಯಥಾರ್ಹ ದಂಡಿಸಿ ದೇಶದಲ್ಲಿ ಧರ್ಮವನ್ನು ನೆಲೆಗೊಳಿಸಿ ಕಲಿಯುಗ ಯುಧಿಷ್ಠಿರನೆಂದು ಪ್ರಖ್ಯಾತಿಯನ್ನು ಪಡೆದನು. ವಿದ್ವಜ್ಜನರಲ್ಲಿ ಅಗ್ರಗಣ್ಯನಾಗಿದ್ದನು. ಇವನ ಮಗನಾದ ದುರ್ವಿನೀತನು ಪುನ್ನಾಟರಾಜನಾದ ಸ್ಕಂದವರ್ಮನ ಮಗಳ ಮಗನೆಂದೂ 'ಜ್ಯೇಷ್ಠಾತನಯ' ನೆಂದೂ ಹೇಳಿಕೊಂಡಿದ್ದಾನೆ. ಇದರಿಂದ ದುರ್ವಿನೀತನ ತಾಯಿಯ ಹೆಸರು ಜ್ಯೇಷ್ಠಾದೇವಿಯೆಂದು ಹೇಳಬಹುದು. ಈಕೆಯೇ ಶೃಂಗೇರಿ ಶಾಸನದಲ್ಲಿ ಉಕ್ತಳಾದ ಬೃಹದ್ದೇವಿ (ಅಗ್ರಮಹಿಷಿ) ಯಾಗಿರಬಹುದು. ಅವಿನೀತನು ಜ್ಯೇಷ್ಠಾತನಯನಾದ ದುರ್ವಿನೀತನನ್ನು ಬಿಟ್ಟು ಬೇರೊಬ್ಬ ಮಗನಿಗೆ ಪಟ್ಟವನ್ನು ಕಟ್ಟಲು ಯತ್ನಿಸಿದ್ದರೂ ರಾಜ್ಯಲಕ್ಷ್ಮಿಯು ತಾನೇ ದುರ್ವಿನೀತನನ್ನು ವರಿಸಿದಳೆಂದು ಶಾಸನಗಳು ಹೇಳುವುದರಿಂದ ಅವನೀತನಿಗೆ ಜ್ಯೇಷ್ಠಾದೇವಿಯಲ್ಲದೆ ಇನ್ನೊಬ್ಬ ಹೆಂಡತಿಯೂ ಆಕೆಯ ಹೊಟ್ಟೆಯಿಂದ ಒಬ್ಬ ಮಗನೂ ಇದ್ದರೆಂದು ತಿಳಿಯುತ್ತದೆ. ನಲ್ಲಾಲ ಶಾಸನದಲ್ಲಿ[2] ದುರ್ವಿನೀತನು ತನ್ನ ಮಲತಮ್ಮ (ವೈಮಾತ್ರೇಯಾನುಜ) ನ ವಶಕ್ಕೆ ಹೋಗಿದ್ದ ರಾಜ್ಯವನ್ನು ಸೆಳೆದುಕೊಂಡನೆಂದು ಹೇಳಿರುವುದರಿಂದ ಮೇಲಿನ ವಿಧಾನವು ಬಲಪಡುತ್ತದೆ.

### ಅವಿನೀತನ ಶಾಸನಗಳು :

೧. ನೊಣಮಂಗಲ ತಾಮ್ರಶಾಸನ.[3]— ಅವಿನೀತನು ತನ್ನ ಆಳಿಕೆಯ ೧ನೆಯ ವರ್ಷದ ಫಾಲ್ಗುಣಮಾಸ ಶುಕ್ಲಪಕ್ಷ ಪಂಚಮಿಯ ದಿನ ತನ್ನ ಗುರುವಾದ ವಿಜಯಕೀರ್ತಿಯ ಉಪದೇಶದ ಮೇರೆಗೆ, ಚಂದ್ರಣಂದಿಯು

---

[1] M. A. R. 1911.
[2] M. A. R. 1924, p. 69.
[3] *Ep. Car.* Vol. X, Mr. 72.

ಉರನೂರಲ್ಲಿ ಕಟ್ಟಿಸಿದ ಜಿನಾಲಯಕ್ಕೆ ಕೊರಿಕುಂದ ವಿಷಯದಲ್ಲಿದ್ದ ವೆನ್ನೆಲ್ಕರನಿ ಎಂಬ ಗ್ರಾಮವನ್ನು ಕೊಟ್ಟನು. ಮತ್ತು ಪೇರೂರಲ್ಲಿದ್ದ ಏವಾನಡಿಗಳ ಜಿನಾಲಯಕ್ಕೆ ಸುಂಕಾದಾಯದ ೩ ಭಾಗವನ್ನು ದಾನಮಾಡಿದನು. ಈ ಪೇರೂರು ಕಡಪಾಜಿಲ್ಲೆಯಲ್ಲಿರುವ ಗಂಗ-ಪೇರೂರೆಂದು ರಾಯಿಸರು ಹೇಳಿದ್ದಾರೆ.

೨. ಶೃಂಗೇರಿ ತಾಮ್ರಶಾಸನ.[1]— ಇದರಲ್ಲಿ ೨ ದತ್ತಿಗಳು ನಿರ್ದಿಷ್ಟವಾಗಿವೆ. ೧. ಅವಿನೀತನು ತನ್ನ ೨ನೆಯ ವರ್ಷದ ವೈಶಾಖಮಾಸ ಶುಕ್ಲಪಕ್ಷ ಪಂಚಮಿಯ ದಿನ ಕಾಶ್ಯಪಗೋತ್ರ ತೈತ್ತಿರೀಯಚರಣದ ಕೇಶವ ಶರ್ಮ್ಮ ಎಂಬ ಬ್ರಾಹ್ಮಣನಿಗೆ ಮರುಕರ ವಿಷಯದೊಳಗಿನ ಪಾಣಪುರ ಗ್ರಾಮವನ್ನು ದಾನಮಾಡಿದನು. ಈ ಶಾಸನವನ್ನು ಪಾಪಾಜಿತ್ಪಷ್ಟ ಕರನು ಕೊರೆದನು. ೨. ಅದೇ ಸಂವತ್ಸರದ ಪೌಷಮಾಸ ಶುಕ್ಲಪಕ್ಷ ದಶಮಿ ರೋಹಿಣೀ ನಕ್ಷತ್ರದಂದು ಕೊಂಗುಣಿರಾಜನ ಬೃಹದ್ದೇವಿಯು ಮರುಕರ ವಿಷಯದ ಕೊಳ್ಪಳ್ಳಿಗ್ರಾಮದಲ್ಲಿ ವೈಶಕಟ್ಟೆಂಬ ೧೦ ಖಂಡುಗ (ಬೀಜವರಿ) ಭೂಮಿಯನ್ನು ಕಾಶ್ಯಪಗೋತ್ರದ ತೈತ್ತಿರೀಯ ಚರಣದ ಗೋವಿಂದಶರ್ಮ್ಮ ಎಂಬ ಬ್ರಾಹ್ಮಣನಿಗೆ ಬ್ರಹ್ಮದೇಯವಾಗಿ ದಾನ ಮಾಡಿದಳು. ಮರುಕರ ವಿಷಯವು ಅವಿನೀತನ ೨೯ನೆಯ ವರ್ಷದ ಮಲ್ಲೊಹಳ್ಳಿ ತಾಮ್ರಶಾಸನದಲ್ಲಿ[2] ಉಕ್ತವಾಗಿದೆ. ಶ್ರೀಪುರುಷನ ಕಾಲದ ಹಿರೇಗುಂಡಿಗಲ್ಲಿನ ವೀರಗಲ್ಲುಗಳಲ್ಲಿಯೂ[3] ಈ ವಿಷಯವು ಮರುಗರೆ ಮುನ್ನೂರು ಎಂದು ಉಲ್ಲೇಖಿತವಾಗಿದೆ.

೩. ಬೆಂಗಳೂರು ರೆಸಿಡೆನ್ಸಿ ತಾಮ್ರಶಾಸನ.[4]— ಅವಿನೀತನು ತನ್ನ ಆಳಿಕೆಯ ೨೫ನೆಯ ವರ್ಷದ ಕಾರ್ತ್ತಿಕಮಾಸ ಶುಕ್ಲಪಕ್ಷ ಪಂಚಮಿ ಉತ್ತ್ರಾಷಾಢ ನಕ್ಷತ್ರದಲ್ಲಿ. ಮೌದ್ಗಲ್ಯಗೋತ್ರದ ತೈತ್ತಿರೀಯ ಚರಣದ ಆಪಸ್ತಂಬ ಸೂತ್ರದ ತೊಟ್ಟಿಗ್ರಾಮವಾಸ್ತವ್ಯನಾದ ಮಾದಿಶರ್ಮ್ಮನಿಗೆ ಪರುವಿವಿಷಯಾಂತರ್ಗತವಾದ ಮಲ್ಲಿಗೂರು ಗ್ರಾಮಕ್ಕೆ ಸೇರಿದ್ದ ಪೊನ್ನು ಮುರಿಗ್ರಾಮವನ್ನು ದಾನಮಾಡಿದನು. ಈ ಶಾಸನವನ್ನು ಸುವರ್ಣ ಕಾರಾಚಾರ್ಯನ ಮಗನಾದ ಮಾರ್ಗಿಯು ಕೊರೆದನು. ಪರುವಿ

---

[1] M. A. R. 1916.
[2] *Ep. Car.* Vol. IX, DB. 67
[3] M. A. R. 1911.
[4] M. A. R. 1911.

ವಿಷಯವು ಬೆಂಡಿಗಾನಹಳ್ಳಿ ಶಾಸನದಲ್ಲಿಯೂ ಪೆಸುಗೊಂಡೆ ಶಾಸನದಲ್ಲಿಯೂ ಉಕ್ತವಾಗಿದೆ.

೪. ಮಲ್ಲೊಹಳ್ಳಿ ತಾಮ್ರಶಾಸನ.[1]—ತನ್ನ ೨೯ನೆಯ ವರ್ಷದಲ್ಲಿ ಅವನೀತನು ತಿಪ್ಪೂರು ಕಾಡಸ್ವಾಮಿಗೆ ಮೇಲೂರು ತಟಾಕದ ಕೆಳಭಾಗದಲ್ಲಿದ್ದ ಭೂಮಿಯನ್ನು ಶತಾಯುನಕ್ಷತ್ರದ ಮುಹೂರ್ತದಲ್ಲಿ ದಾನಮಾಡಿದನು.

೫-೬. ಮಡಿಕೇರಿ[2] ಕೋದುಂಜೆಟ್ಟುವು[3] ತಾಮ್ರಶಾಸನಗಳು.— ಇವೆರಡೂ ಕೃತಕವೆಂಬಲ್ಲಿ ಸಂದೇಹವಿಲ್ಲ. ಮಡಿಕೇರಿ ಶಾಸನದ ಅಕ್ಷರಗಳು ೯ನೆಯ ಶತಮಾನಕ್ಕಿಂತ ಮುಂಚಿನವಲ್ಲ. ಭಾಷೆಯೂ ಬರೆವಣಿಗೆಯೂ ತೀರ ಅಶುದ್ಧವಿರುತ್ತವೆ. ಅಕಾಲವರ್ಷ ಪೃಥ್ವೀವಲ್ಲಭನ ಮಂತ್ರಿಯು ಅವಿನೀತ ಮಹಾರಾಜನಿಂದ ಪುನ್ನಾಡು ೬೦೦೦ ದೊಳಗಣ ಎಡೆನಾಡ-೭೦ರಲ್ಲಿದ್ದ ಬದನೆಗುಪ್ಪೆಗ್ರಾಮವನ್ನು ಪಡೆದು ಅದನ್ನು ತಲವನನಗರದ ಶ್ರೀವಿಜಯ ಜಿನಾಲಯಕ್ಕೆ ಶಕ ೩೮೮ ರ ಮಾಘಮಾಸ ಸೋಮವಾರ ಸ್ವಾತಿ ನಕ್ಷತ್ರ ಶುದ್ಧ ಪಂಚಮಿ ದಿನ ಕೊಟ್ಟನೆಂದು ಹೇಳಿದೆ. ಅವಿನೀತನ ಕಾಲದಲ್ಲಿ ರಾಷ್ಟ್ರಕೂಟ ರಾಜರೇ ಇದ್ದಿಲ್ಲ. ತಿಥಿಯು ಪಂಚಾಂಗಕ್ಕೆ ಹೊಂದುವುದಿಲ್ಲ. ಆದರ ನಿರ್ದೇಶಕ ಕ್ರಮವೂ ಸಂಶಯಾಸ್ಪದವಿರುತ್ತದೆ. ಶಾಸನದ ಕೊನೆಗೆ ಕೊಟ್ಟ ಸಾಕ್ಷಿಗಳು ಪ್ರಾಯಃ ಶಕ ೧೮೮ (!) ರ ಹರಿವರ್ಮ್ಮನ ಕೂಡಲೂರು ಶಾಸನದಲ್ಲಿದ್ದಂತೆ ಇರುತ್ತವೆ. ಕೋದುಂಜೆಟ್ಟುವು ಶಾಸನದ ಅಕ್ಷರಗಳು ಕ್ರಿ. ಶ. ೮ನೆಯ ಶತಮಾನಕ್ಕಿಂತ ಮೊದಲಿನವಲ್ಲ. ಬರೆವಣಿಗೆಯೂ ಅಶುದ್ಧವಿದೆ. ಸಾಕ್ಷಿಗಳ ಹೆಸರುಗಳು ಸಾಮಾನ್ಯವಾಗಿ ಮೇಲ್ಕಂಡ ಶಾಸನಗಳಲ್ಲಿದ್ದಂತೆಯೇ ಇರುತ್ತವೆ. ಅವಿನೀತ ಮಹಾರಾಜನು ತನ್ನ ೨೫ನೆಯ ವರ್ಷದ ಭಾದ್ರಪದ ಮಾಸ ಶುಕ್ಲಪಕ್ಷ ದಶಮೀ ಬೃಹಸ್ಪತಿವಾರ ಪೂರ್ವಾಭಾದ್ರಪದ ನಕ್ಷತ್ರದಂದು ಸುಗತ್ತೂರು ಗ್ರಾಮದ ೭೪ ಜನ ಬ್ರಾಹ್ಮಣರಿಗೆ ಪುದೇಲಿ ವಿಷಯದಲ್ಲಿದ್ದ ಕೋದುಂಜೆಟು ಗ್ರಾಮವನ್ನು ದಾನಮಾಡಿದನು. ಗುಮ್ಮರೆಡ್ಡಿಪುರಶಾಸನದಲ್ಲಿ ದುರ್ವಿನೀತನು ಪುದಲ್ನಾಡು ರಾಷ್ಟ್ರದಲ್ಲಿದ್ದ ಕೋದುಂಜೆರುವು ಗ್ರಾಮವನ್ನು ಕೊಟ್ರುತ್ತೂರ ಇಬ್ಬರು ಬ್ರಾಹ್ಮಣರಿಗೆ ದಾನಮಾಡಿದನೆಂದು ಹೇಳಿದೆ. ಚುಕುಟ್ಟೂರು ಶಾಸನ

[1] *Ind. Ant.* Vol. V, p. 136. [2] *Coorg Inscriptions*. p. 1.
[3] M. A. R. 1929.

ವನ್ನು ಬರೆದ ಬಾಣಪುರಾಧೀಶನಾದ ಅಪಾಪನೇ ಈ ಶಾಸನವನ್ನು ಬರೆದ ವನು. ಚುಕುಟ್ಟೂರು ಶಾಸನದಲ್ಲಿದ್ದಂತೆಯೇ ಇಲ್ಲಿಯೂ ೭೪ ಜನ ಪ್ರತಿಗ್ರಹಹೀತೃಗಳಿದ್ದಾರೆ. ಚುಕುಟ್ಟೂರು ಗುಮ್ಮರೆಡ್ಡಿಪುರ ಶಾಸನ ಗಳನ್ನು ಮುಂದಿಟ್ಟುಕೊಂಡು ಈ ತಾಮ್ರಪಟ್ಟಿಕೆಯನ್ನು ಸೃಷ್ಟಿಸಿದಂತೆ ತೋರುತ್ತದೆ.

ಅವಿನೀತನಿಗೆ ಜ್ಯೇಷ್ಠಾದೇವಿಯ ಹೊಟ್ಟೆಯಲ್ಲಿ ಹುಟ್ಟಿದ ದುರ್ವಿನೀತನು ಕ್ರಿ. ಶ. ೫೫೫ರಲ್ಲಿ ಪಟ್ಟಕ್ಕೆ ಬಂದನು. ಗಂಗರ ಶಾಸನಗಳು 'ತಂದೆಯು ಎರಡ ನೆಯ ಮಗನಿಗೆ ಕೊಟ್ಟಿದ್ದ ರಾಜ್ಯಲಕ್ಷ್ಮಿಯು ತಾನೇ ದುರ್ವಿನೀತನ ವಿಪುಲ-ವಕ್ಷಸ್ಥಳದಲ್ಲಿ ನೆಲಸಿದಳು' ಎಂದೂ 'ಮಲತಮ್ಮನ ತೋಳುಗಳಿಂದ ಗಾಢವಾಗಿ ಅಪ್ಪಿಕೊಳ್ಳಲ್ಪಟ್ಟಿದ್ದ ರಾಜ್ಯಲಕ್ಷ್ಮಿಯನ್ನು ತನ್ನ ಭುಜಬಲಪರಾಕ್ರಮದಿಂದ ಕಚವನ್ನು ಹಿಡಿದು ಎಳೆದುತಂದು ತನ್ನ ವಿಪುಲ ವಕ್ಷಸ್ಥಳದಲ್ಲಿ ಶಾಶ್ವತ ಸುಖದಿಂದ ಇರುವಂತೆ ಮಾಡಿದನು' ಎಂದೂ ದುರ್ವಿನೀತನನ್ನು ಕುರಿತು ಹೇಳುತ್ತವೆ. ಇದರಿಂದ ಅವನೀತನು ಹಿರಿಯಮಗನಾದ ದುರ್ವಿನೀತನನ್ನು ಬಿಟ್ಟು ಕಿರಿಯ ಹೆಂಡತಿಯ ಮಗನಿಗೆ ರಾಜ್ಯವನ್ನು ಕೊಟ್ಟಿದ್ದನೆಂದೂ ದುರ್ವಿನೀತನು ಬಹು ಸಾಹಸದಿಂದ ಅದನ್ನು ತನ್ನ ತಮ್ಮನ ಕೈಯಿಂದ ಸೆಳೆದೊಯ್ದು ರಾಜ್ಯದ ಮೇಲೆ ನ್ಯಾಯವಾಗಿದ್ದ ತನ್ನ ಬಾಧ್ಯತೆಯನ್ನು ಸ್ಥಿರಪಡಿಸಿಕೊಂಡನೆಂದೂ ವ್ಯಕ್ತ-ವಾಗುತ್ತದೆ.

ದುರ್ವಿನೀತನ ಕಾಲವನ್ನು ಬೇರೆ ಬೇರೆ ಪಂಡಿತರು ಬೇರೆಬೇರೆಯಾಗಿ ಕೊಟ್ಟಿದ್ದಾರೆ. ರಾಯಿಸರು ಕ್ರಿ. ಶ. ೪೮೨ರಿಂದ ೫೧೭ ಎಂದೂ[1] ಡುಬ್ರಾಯಿಲರು ಕ್ರಿ. ಶ. ೬೦೫ ರಿಂದ ೬೫೦ ಎಂದೂ[2] ಹೇಳಿದ್ದಾರೆ. ನರಸಿಂಹಚಾರ್ಯರು ಮೊದಲು ರಾಯಿಸರನ್ನನುಸರಿಸಿದ್ದು 'ಅವಂತಿಸುಂದರೀ ಕಥಾ' ಎಂಬ ಗ್ರಂಥವು ದೊರೆತ ಮೇಲೆ ಡುಬ್ರಾಯಿಲರು ನಿರ್ಧರಿಸಿದ ಕಾಲವನ್ನು ಒಪ್ಪಿ ಕೊಂಡರು. ಈ ವಿಮರ್ಶಕರ ಅಭಿಪ್ರಾಯಗಳು ಸಮಂಜಸವಲ್ಲವೆಂದು ಇಲ್ಲಿ ವಿವೇಚಿಸಿ ತೋರಿಸುತ್ತೇವೆ. ರಾಯಿಸರು ಕೃತಕಶಾಸನಗಳನ್ನು ಆಧಾರ ವಾಗಿಟ್ಟುಕೊಂಡು ಅವಿನೀತನನ್ನು ೫ನೆಯ ಶತಮಾನಕ್ಕೆ ಒಯ್ದಿದ್ದಾರೆ. ಅವನ ಆಳಿಕೆಯ ೨೯ನೆಯ ವರ್ಷದ ಮಲ್ಲೋಹಳ್ಳಿ ಶಾಸನದಲ್ಲಿ ಕೊಟ್ಟಿದ್ದ 'ಜಯ' ಎಂಬ ಪದವನ್ನು ಸಂವತ್ಸರದ ಹೆಸರೆಂದು ತಿಳಿದು ಅವನ ಮೊದಲನೆಯ ವರ್ಷವು

---

[1] *Mysore and Coorg from Inscriptions*, p. 49.

[2] *Ancient History of the Deccan*, p. 107.

ಕ್ರಿ. ಶ. ೪೩೦ ಎಂದು ಬರೆದಿದ್ದಾರೆ. ಇವನಿಗೆ ೫೨ ವರ್ಷಗಳ ಆಳಿಕೆಯನ್ನು ಕೊಟ್ಟು ಅಲ್ಲಿಂದ ಮುಂದೆ ಅಂದರೆ ಕ್ರಿ. ಶ. ೪೮೨ರಿಂದ ಗುಮ್ಮರೆಡ್ಡಿಪುರ ಶಾಸನದ ೪೦ನೆಯ ವರ್ಷವೇ ಕಡೆಯದೆಂದೆಣಿಸಿ ೫೨೨ರ ವರೆಗೆ ದುರ್ವಿನೀತನು ರಾಜ್ಯಭಾರ ಮಾಡಿದನೆಂದು ಹೇಳಿದ್ದಾರೆ. ಆದರೆ ಕೃತಕಶಾಸನಗಳಲ್ಲಿ ಕೊಟ್ಟಿರುವ ಕಾಲವು ವಿಶ್ವಸನೀಯವಲ್ಲ. ಕದಂಬ ೧ನೆಯ ಕೃಷ್ಣವರ್ಮನ ತಂಗಿಯನ್ನು ೩ನೆಯ ಮಾಧವನು ೫ನೆಯ ಶತಮಾನದ ೩ನೆಯ ಪಾದದಲ್ಲಿ ಮದುವೆಯಾದುದು ಈ ವಿಷಯದಲ್ಲಿ ನಿರ್ಧಾರಕವಾದ ಒಂದು ಮೆಟ್ಟು. ಆದುದರಿಂದ ಕ್ರಿ. ಶ. ೪೩೦ರಲ್ಲಿ ಅವಿನೀತನ ತಾಯಿಯೇ ಹುಟ್ಟಿರುವುದು ಸಂಭವವಿಲ್ಲ. ಮಲ್ಲೋಹಳ್ಳಿ ಶಾಸನದಲ್ಲಿರುವ 'ಏಕೋನವಿಂಶ ವಿಜಯಸಂವತ್ಸರೇ' ಎಂಬಲ್ಲಿ ವಿಜಯವು ಸಂವತ್ಸರದ ಹೆಸರಲ್ಲ. ಅದು ಕೇವಲ ಅಭ್ಯುದಯಸೂಚಕ ಪದವು. ಶ್ರೀಪುರುಷನು ಹಲ್ಲೂರು ಶಾಸನದ ಕಾಲವಾದ ಕ್ರಿ. ಶ. ೭೮೮ರಲ್ಲಿ ಆಳುತ್ತಿದ್ದುದರಿಂದ ಅವನ ಅಜ್ಜ ಭೂವಿಕ್ರಮನು ಕ್ರಿ. ಶ. ೭೦೦ರಿಂದ ೭೨೫ರವಗೆ ಆಳಿದನೆಂದು ಡುಬ್ರಾಯಿಲರು ಊಹಿಸಿದ್ದಾರೆ. ಇವನ ತಂದೆ ಅಜ್ಜಂದಿರಾದ ಶ್ರೀವಿಕ್ರಮ ಮುಷ್ಕರರಿಗೆ ತಲೆಯೊಂದಕ್ಕೆ ೨೫ ವರ್ಷಗಳ ಲೆಕ್ಕದಂತೆ ಆಳಿಕೆಯನ್ನು ಕೊಟ್ಟು ಮುಷ್ಕರನ ತಂದೆಯಾದ ದುರ್ವಿನೀತನ ಕಡೆಯ ವರ್ಷವು ೬೫೦ ಎಂದು ಬರೆದಿದ್ದಾರೆ. ಇವನ ೪೦ನೆಯ ವರ್ಷದ ಶಾಸನವು ದೊರೆತಿರುವುದರಿಂದ ೪೫ ವರ್ಷಗಳ ಆಳಿಕೆಯನ್ನು (ಕ್ರಿ. ಶ. ೬೦೫–೬೫೦) ಇವನಿಗೆ ಕೊಟ್ಟಿದ್ದಾರೆ. ಆದರೆ ಶ್ರೀಪುರುಷನ ಜಾವಳಿ ದೇವರಹಳ್ಳಿ ಶಾಸನಗಳ ಆಧಾರದಿಂದ ಅವನ ಮೊದಲನೆಯ ವರ್ಷವು ಕ್ರಿ. ಶ. ೭೨೬ ಎಂದು ಗೊತ್ತಾಗಿದೆ. ಇದೇ ವರ್ಷವು ೧ನೆಯ ಶಿವಮಾರನ ಕಡೆಯದಾಗುತ್ತದೆ. ಆದುದರಿಂದ ೧ನೆಯ ಶಿವಮಾರನ ಅಣ್ಣನಾದ ( ತಂದೆಯೆಂದು ಡುಬ್ರಾಯಿಲರು ಹೇಳಿದ್ದಾರೆ! ) ಭೂವಿಕ್ರಮನ ಕಡೆಯ ವರ್ಷವು ೭೨೫ ಎಂದು ಸ್ಥೂಲವಾಗಿ ಹೇಳಿದುದು ಖಂಡಿತವಾಗಿಯೂ ತಪ್ಪು. ಇವರ ವಿಧಾನವನ್ನು ವಿವೇಚಿಸಿ ನೋಡಿದಲ್ಲಿ ಶಿವಮಾರನು ಆಳಲೇ ಇಲ್ಲವೆಂದು ಅರ್ಥವಾಗುತ್ತದೆ. ಇಷ್ಟೇ ಅಲ್ಲ. ದುರ್ವಿನೀತನಿಗೆ ಪೊಲವೀರನೆಂಬ ೨ನೆಯ ಮಗನು ಇದ್ದುದಾಗಲಿ ಅವನು ರಾಜ್ಯಭಾರವನ್ನು ಮಾಡಿದುದಾಗಲಿ ಡುಬ್ರಾಯಿಲರಿಗೆ ಗೊತ್ತಿರಲಿಲ್ಲವೆಂದು ತೋರುತ್ತದೆ.

ಶ್ರೀಪುರುಷನ ಮೊದಲನೆಯ ವರ್ಷವು ಕ್ರಿ. ಶ. ೭೨೬. ಅವನ ಹಿಂದಿನ ಅರಸನಾದ ೧ನೆಯ ಶಿವಮಾರನು ಕ್ರಿ. ಶ. ೬೭೯ ರಲ್ಲಿ ಪಟ್ಟಕ್ಕೆ ಬಂದನೆಂದು ಹಳ್ಳೀಗೇರಿ ಶಾಸನದಿಂದ ಗೊತ್ತಾಗುವುದರಿಂದ ಅವನು ೬೭೯ ರಿಂದ ೭೨೬ ರ ವರೆಗೆ ರಾಜ್ಯಭಾರಮಾಡಿರಬೇಕು. ಇವನ ಅಣ್ಣನಾದ ಭೂವಿಕ್ರಮನ ಆಳಿಕೆಯ

ಕಾಲಮಾನವು ತಿಳಿದಿಲ್ಲವಾದರೂ ಅಣ್ಣಾತಮ್ಮಂದಿರಲ್ಲಿ ತಮ್ಮನು ಸುಮಾರು ಅರ್ಧಶತಮಾನಕಾಲ ಆಳಿದ ಕಾರಣದಿಂದ ಅಣ್ಣನಿಗೆ ಅಲ್ಪಕಾಲ ಆಳಿಕೆಯನ್ನು ಕೊಡುವುದೇ ಸುಸಂಗತವಾಗುತ್ತದೆ. ಇವನು ಸು. ೧೦ ವರ್ಷ ಆಳಿದನೆಂದು ಭಾವಿಸಿದರೆ ಇವನು ಕ್ರಿ. ಶ. ೬೬೯ ರಲ್ಲಿ ಆಳತೊಡಗಿರಬೇಕು. ಶ್ರೀವಿಕ್ರಮನ ಕಾಲವೂ ನಿಶ್ಚಿತವಾಗದಿರುವುದರಿಂದ ವಾಡಿಕೆಯಂತೆ ಅವನಿಗೆ ೨೫ ವರ್ಷ ಕೊಟ್ಟರೆ ಇವನ ಚಿಕ್ಕಪ್ಪನಾದ ಪೊಲವೀರನ ಆಳಿಕೆಯು ಕ್ರಿ. ಶ. ೬೪೪ ರಲ್ಲಿ ಕೊನೆಗಂಡಿರಬೇಕು. ಪೊಲವೀರ ಮುಷ್ಕರರಿಬ್ಬರು ಅಣ್ಣಾತಮ್ಮಂದಿರ ಆಳಿಕೆಯು ಸು. ೪೦ ವರ್ಷವಿತ್ತೆಂದು ಗಣಿಸಿದರೆ ದುರ್ವಿನೀತನ ಕಡೆಯ ವರ್ಷವು ಕ್ರಿ. ಶ. ೬೦೫ ಆಗುತ್ತದೆ. ಹೀಗೆ ೭೫ ವರ್ಷಗಳ ಅವಧಿಯಲ್ಲಿ ( ಕ್ರಿ. ಶ. ೬೦೫–೬೭೯) ನಾಲ್ಕು ಜನ ರಾಜರು ಇರಬೇಕಾದುದರಿಂದ ದುರ್ವಿನೀತನು ಸು. ಕ್ರಿ. ಶ. ೬೦೫ ಆದಮೇಲೆ ಇದ್ದಿರುವುದು ಸಂಭವವಲ್ಲ. ಮತ್ತು ಅವನು ೬೦೫ ಕ್ಕಿಂತ ಬಹಳ ಮುಂಚೆಯೇ ಸತ್ತನೆಂದೂ ಹೇಳಲಿಕ್ಕಾಗದು. ಇತ್ತೀಚೆಗೆ ದೊರೆತ 'ಅವಂತಿ ಸುಂದರೀ ಕಥಾ' ಎಂಬ ಗ್ರಂಥದಿಂದ ಈ ವಿಷಯಕ್ಕೆ ಉಪಯುಕ್ತವಾದ ಕೆಲ ಅಂಶಗಳು ತಿಳಿದಿರುತ್ತವೆ:—ಅಚಲಪುರದ ಕೌಶಿಕಗೋತ್ರದ ದಾಮೋದರನೆಂಬ ಬ್ರಾಹ್ಮಣಕವಿಯು ಭಾರವಿಯ ಕೃಪೆಯಿಂದ 'ರಾಜಸೂನು' ವಿಷ್ಣುವರ್ಧನನ ಸಖ್ಯವನ್ನು ಸಂಪಾದಿಸಿ ಅವನೊಡನೆ ಕಾಡಿನಲ್ಲಿ ಬೇಟೆಯಾಡಲು ಹೋದಾಗ ಉಪಾಯವಿಲ್ಲದೆ ಮಾಂಸಭಕ್ಷಣವನ್ನು ಮಾಡಿದನು. ಈ ಅಭಕ್ಷ್ಯಭಕ್ಷಣದ ಪ್ರಾಯಶ್ಚಿತ್ತಕ್ಕಾಗಿ ಕ್ಷೇತ್ರಯಾತ್ರೆಯನ್ನು ಮಾಡುತ್ತಿರುವ ಕಾಲದಲ್ಲಿ ಅವನು 'ಗಾಂಗೇಯ ಕುಲಧ್ವಜ' ನಾದ ದುರ್ವಿನೀತನನ್ನು ಕಂಡನು. ಈ ರಾಜನು ದಾಮೋದರನ ವಿದ್ವತ್ತೆಗೆ ಮೆಚ್ಚಿ ಅವನನ್ನು ಆದರದಿಂದ ತನ್ನ ಆಸ್ಥಾನಕ್ಕೆ ಕರೆ ದೊಯ್ದನು. ಅಲ್ಲಿ ಇದ್ದಾಗ ಅವನು ರಚಿಸಿದ ಒಂದು ಶ್ಲೋಕವನ್ನು ಕಾಂಚೀಪುರಾಧೀಶನಾದ ಸಿಂಹವಿಷ್ಣು ಕೇಳಿ ಚಕಿತಾಂತಃಕರಣನಾಗಿ ಅವನನ್ನು ತನ್ನ ಸಭೆಗೆ ಬರಮಾಡಿಕೊಂಡನು. ಈ ಕಥೆಯಿಂದ ಚಾಲುಕ್ಯ ವಿಷ್ಣುವರ್ಧನ, ದುರ್ವಿನೀತ, ಸಿಂಹವಿಷ್ಣು ಈ ಮೂವರು ಸಮಕಾಲೀನರಾಗಿದ್ದರೆಂದು ಗೊತ್ತಾಗುತ್ತದೆ. 'ಅವಂತಿಸುಂದರೀ ಕಥೆ' ಯಲ್ಲಿ ಉಕ್ತವಾದ ಸಂಗತಿಗಳಿಗೆ ಇತಿಹಾಸದಲ್ಲಿ ವಿರೋಧವಾವುದೂ ಇಲ್ಲದಿರುವುದರಿಂದ ಅವುಗಳನ್ನು ನಂಬ ಬಹುದು. ೨ನೆಯ ಪುಲಕೇಶಿಯು ಕ್ರಿ. ಶ. ೬೦೯–೧೨ ರ ಮಧ್ಯದಲ್ಲಿ ಆದ ದಿಗ್ವಿಜಯದಲ್ಲಿ ಸೋಲಿಸಿದ ಪಲ್ಲವರಾಜನು ೧ನೆಯ ಮಹೇಂದ್ರವಿಕ್ರಮನು. ಇವನ ಮಗನಾದ ೧ನೆಯ ನರಸಿಂಹವರ್ಮ್ಮನು ಸು. ೬೧೫ ರಲ್ಲಿ ಪಟ್ಟವೇರಿರು ವುದರಿಂದ ಅವನ ಆಳಿಕೆಯು ಅಲ್ಲಿಗೆ ಮುಗಿದಿರಬೇಕು. ಇವನ ತಂದೆಯಾದ

ಸಿಂಹವಿಷ್ಣುವೇ 'ರಾಜಸೂನು' ವಿಷ್ಣುವರ್ಧನನ ಸಮಕಾಲೀನನೆಂದು ಮೇಲಿನ ಗ್ರಂಥದಲ್ಲಿ ಹೇಳಿಯೇ ಇದೆ. ಈ ಸಿಂಹವಿಷ್ಣುವಿನ ಕೊನೆಯ ವರ್ಷವನ್ನು ಕ್ರಿ. ಶ. ೬೦೫ ಕ್ಕಿಂತ ಮುಂದಕ್ಕೆ ಒಯ್ಯುವುದಾಗುವುದಿಲ್ಲ. ದಾಮೋದರನು ದುರ್ವಿನೀತನ ಆಸ್ಥಾನದಿಂದ ಸಿಂಹವಿಷ್ಣುವಿನ ಬಳಿಗೆ ಹೋದುದರಿಂದ ದುರ್ವಿನೀತನು ೬೦೫ ಕ್ಕಿಂತ ೧-೨ ವರ್ಷ ಮೊದಲು ಬದುಕಿರಲಿಕ್ಕೇಬೇಕು. ಭಾರವಿಯು ದಾಮೋದರನಿಗೆ ವಿಷ್ಣುವರ್ಧನನ ಪರಿಚಯವನ್ನು ಮಾಡಿಕೊಟ್ಟುದೂ ದಾಮೋದರವಿಷ್ಣುವರ್ಧನರು ಬೇಟೆಗೆ ಹೋದುದೂ ಕ್ರಿ. ಶ. ೫೯೯-೬೦೦ ಕ್ಕೆ ಮೊದಲು ಆಗಿರಲಾರವು. ಏತಕ್ಕೆಂದರೆ ಕ್ರಿ. ಶ. ೫೯೬-೯೭ರಲ್ಲಿ ಮಂಗಲೇಶನು ಪಟ್ಟಕ್ಕೆ ಬರುವಾಗ ಪುಲಿಕೇಶಿಯು ರಾಜ್ಯಸೂತ್ರಗಳನ್ನು ವಹಿಸುವಷ್ಟು ಪ್ರೌಢವಯಸ್ಕನಾಗಿದ್ದಿಲ್ಲ. ಅವನು ಆಗ ಸು. ೧೪ ವರ್ಷದವನಿದ್ದನೆಂದು ಭಾವಿಸಿದರೆ ಅವನ ತಮ್ಮನಾದ ವಿಷ್ಣುವರ್ಧನನು ಸು. ೧೨ ವರ್ಷದವನಿದ್ದಿರಬಹುದು. ದಾಮೋದರನನ್ನು ಬೇಟೆಗೆ ಕರೆದುಕೊಂಡು ಹೋದ ವರ್ಷವು ಕ್ರಿ. ಶ. ೫೯೯ ತ್ತಾದರೂ ಆಗಿರಲಿಕ್ಕೆ ಬೇಕು. ಅಂದರೆ ಆಗ ವಿಷ್ಣುವರ್ಧನನು ಬೇಟೆಯಾಡಲಿಕ್ಕೆ ಹೋದುದು ಸಂಭಾವ್ಯವಾಗುತ್ತದೆ. ದಾಮೋದರನು ಪ್ರಾಯಶ್ಚಿತ್ತಯಾತ್ರೆಯಲ್ಲಿ ದುರ್ವಿನೀತನನ್ನು ಕಂಡು ಅವನ ಆಸ್ಥಾನಕ್ಕೆ ಹೋದುದು ಕ್ರಿ. ಶ. ೬೦೦ ರ ನಂತರ ಸ್ವಲ್ಪಕಾಲದಲ್ಲಿ ಜರುಗಿರಬೇಕು. ಮತ್ತು ದುರ್ವಿನೀತನ ಆಶ್ರಯದಲ್ಲಿ ಅವನು ಕೆಲವು ಕಾಲವಿದ್ದನೆಂದು ಅದೇ ಗ್ರಂಥದಲ್ಲಿ ಹೇಳಿರುವುದರಿಂದ ಇದಕ್ಕೆ ೧-೨ ವರ್ಷ ಅವಕಾಶವನ್ನು ಕೊಡಬೇಕಾಗುತ್ತದೆ. ಅಂದರೆ ದುರ್ವಿನೀತನು ಕ್ರಿ. ಶ. ೬೦೪-೫ ರ ವರೆಗಾದರೂ ಇರಲಿಕ್ಕೇ ಬೇಕು. ಈ ವಿವೇಚನೆಯಿಂದ ದುರ್ವಿನೀತನು ಕ್ರಿ. ಶ. ೬೦೫ರ ವರೆಗೆ ರಾಜ್ಯಭಾರ ಮಾಡಿರಬೇಕೆಂಬುದು ಸಿದ್ಧವಾಗುತ್ತದೆ.

ದುರ್ವಿನೀತನು ಒಳ್ಳೇ ಶೂರನಾದ ರಾಜನು. ಇವನು ಅಂದರಿ ಅಲತ್ತೂರು ಪೊರುಳಱೆ ಪೆರ್ನಗರ ಮೊದಲಾದ ಸಮರಮುಖಗಳಲ್ಲಿ ಶತ್ರುಗಳನ್ನು ಯಮಲೋಕಕ್ಕೆ ಅಟ್ಟಿದನು.[1] ಈ ಯುದ್ಧಗಳಲ್ಲಿ ಇವನು ಸೋಲಿಸಿದ ವೈರಿಗಳು ಯಾರೆಂಬುದನ್ನು ನಿರ್ಧರಿಸಲು ಸಾಧನಗಳಿಲ್ಲ. ಚಳುಕ್ಯ ೧ನೆಯ ಕೀರ್ತಿವರ್ಮನು ( ಕ್ರಿ. ಶ. ೫೬೭-೫೯೭ ) ಗಂಗರನ್ನು ಸೋಲಿಸಿದನೆಂದು ಚಳುಕ್ಯ ಶಾಸನಗಳಿಂದ ತಿಳಿಯುತ್ತದೆ. ಈ ಕಾಲದ ಗಂಗರಾಜನಾದ ದುರ್ವಿನೀತನು 'ದಕ್ಷಿಣಾಂ ದಿಶಮಭಿಗೋಪ್ತುಂ ಪರ್ಯಾಪ್ತವತಾ' ( ದಕ್ಷಿಣ ದಿಕ್ಕನ್ನು

---

1 ಗುಮ್ಮರೆಡ್ಡಿಪುರ ಶಾಸನ ( M. A. R 1912 ).

ಸಂರಕ್ಷಿಸಲು ಸಮರ್ಥನಾದವನು ) ಎಂದು ತನ್ನನ್ನು ಹೇಳಿಕೊಳ್ಳುವುದರಿಂದ[1] ದಕ್ಷಿಣದಲ್ಲಿದ್ದ ತನ್ನ ದೇಶಕ್ಕೆ ಉಂಟಾಗಿದ್ದ ವಿಪತ್ತನ್ನು ದೂರಮಾಡಿ ಆ ದೇಶವನ್ನು ಕಾಪಾಡಿದನೆಂದು ಊಹಿಸಬಹುದು. ಈ ವಿಪತ್ತು ಮೇಲೆ ಹೇಳಿದಂತೆ ಚಳುಕ್ಯರಾಜನಿಂದ ಸಂಭವಿಸಿದ್ದಿರಬೇಕು. ದುರ್ವಿನೀತನು ಪಾಣ್ನಾಡ ಪುಣ್ನಾಡಾಧಿಪತಿಯಾಗಿದ್ದನು.[2] ಪಾಣ್ನಾಡದೇಶವಾವುದೆಂಬುದು ನಿರ್ಧಾರವಾಗಿಲ್ಲ.[3] ಪುಣ್ನಾಡದೇಶವು ಕಾವೇರೀ ಕಪಿನೀನದಿಗಳಿಂದ ಪಾವನವಾದುದೆಂದು ಮಾಂಬಳ್ಳಿ ತಾಮ್ರಶಾಸನದಿಂದ ತಿಳಿಯುತ್ತದೆ.[4] ಇದಕ್ಕೆ ಪುಂರಾಷ್ಟ್ರವೆಂಬ ಹೆಸರು ಇತ್ತು. ಮೈಸೂರು ಜಿಲ್ಲೆಯ ಪಶ್ಚಿಮಭಾಗದಲ್ಲಿ ಅಂದರೆ ಹೆಗ್ಗಡದೇವನ ಕೋಟೆ ತಾಲೂಕಿನಲ್ಲಿದ್ದ ಕಿತ್ತೂರು ( ಕೀರ್ತಿಪುರ ) ಇದರ ರಾಜಧಾನಿಯಾಗಿತ್ತು. ಈ ರಾಷ್ಟ್ರವು ಪ್ರಾಚೀನಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದಿತ್ತು. ಭದ್ರಬಾಹುವೆಂಬ ಜೈನಮುನಿಯು ಉತ್ತರದೇಶದಿಂದ ಸಂಘದೊಡನೆ ಪುನ್ನಾಡರಾಷ್ಟ್ರಕ್ಕೆ ಬಂದನೆಂದು ಹರಿಷೇಣನ ಬೃಹತ್ಕಥಾ ಕೋಶದಿಂದ ತಿಳಿಯುತ್ತದೆ. ಕ್ರಿ. ಶ. ೨ನೆಯ ಶತಮಾನದಲ್ಲಿದ್ದ ಟಾಲೋಮಿ (Ptolomey) ಯು ಈ ದೇಶವನ್ನು ವೈಡೂರ್ಯದ ಕಣಿಯೆಂದು ಬಣ್ಣಿಸಿದ್ದಾನೆ. ಸು. ಕ್ರಿ. ಶ. ೬ನೆಯ ಶತಮಾನದ ಮಾಂಬಳ್ಳಿ ತಾಮ್ರಶಾಸನವು ಈ ರಾಷ್ಟ್ರವನ್ನು ಹೀಗೆ ಬಣ್ಣಿಸುತ್ತದೆ. ' ಈ ದೇಶವು ಎಮ್ಮೆ, ಆಕಳು, ಕುದುರೆಗಳಿಂದಲೂ ಉಣ್ಣೆಯ ಬಟ್ಟೆ, ರತ್ನ, ಬಂಗಾರ, ಬೆಳ್ಳಿ, ಮುತ್ತು, ಹವಳಗಳ ಸಂಪತ್ತುಳ್ಳ ಜನರಿಂದಲೂ ಬಹು ಶೋಭಾಯಮಾನವಾಗಿತ್ತು. ಭತ್ತ, ಗೋಧಿ, ಜವೆಗೋಧಿ, ರಾಡಾಕ ( ? ) ಗಳು ಪ್ರತಿವರ್ಷವೂ ಹುಲುಸಾಗಿ ಬೆಳೆಯುತ್ತಿದ್ದವು. ಜನರು ನಿತ್ಯದಲ್ಲಿಯೂ ವಿವಾಹ ನರ್ತನಾದಿ ಉತ್ಸವಗಳಿಂದ ಆನಂದಗೊಳ್ಳುತ್ತಿದ್ದರು. ಬಾಳೆ, ಅಡಕೆ, ತೆಂಗು, ಕಬ್ಬು, ಹಲಸು, ಸಂಪಗೆ, ವೀಳ್ಯದೆಲೆ, ಬಕುಲ, ಅಶೋಕ, ಪುನ್ನಾಗ ಮೊದಲಾದ ಗಿಡಬಳ್ಳಿಗಳುಳ್ಳ ತೋಟಗಳಿಂದ ಕಂಗೊಳಿಸುವ ತಟಗಳುಳ್ಳ ಕಾವೇರೀ ಕಪಿನೀ ನದಿಗಳಿಂದ ಅಲಂಕೃತವಾಗಿತ್ತು. ಮತ್ತು ವಿದೇಹ ದೇಶದಂತೆ ಸೊಬಗಿನ ಬೀಡಾಗಿ ಶೋಭಿಸುತ್ತಿತ್ತು' ಹೀಗೆ ಮೆರೆಯುತ್ತಿದ್ದ ಈ ಪುನ್ನಾಡರಾಷ್ಟ್ರವು ಗಂಗರಾಜ್ಯಕ್ಕೆ ಯಾವಾಗ ಸೇರಿತೆಂಬುದು ತಿಳಿದಿಲ್ಲ. ದುರ್ವಿನೀತನ ತಾಯಿಯಾದ ಜ್ಯೇಷ್ಠಾದೇವಿಯು ಪುನ್ನಾಡ ಸ್ಕಂದವರ್ಮನ ' ಪುತ್ರಿಕೆ ' ಎಂದು ಹೇಳಿರುವುದರಿಂದ ಸ್ಕಂದವರ್ಮನಿಗೆ

---

[1] ಗುಮ್ಮರೆಡ್ಡಿಪುರ ಶಾಸನ (M.A.R. 1912). [2] M. A. R. 1916.
[3] ಇದು ಬಾಣನಾಡಾಗಿರಬಹುದು. [4] M. A. R. 1917, p. 33.

ಪುತ್ರಸಂತಾನವಿದ್ದಿಲ್ಲವೆಂದು ಊಹಿಸಬಹುದು. ಈಕೆಯನ್ನು ಅವಿನೀತನು ಮದುವೆಯಾದುದರಿಂದ ದೌಹಿತ್ರನಾದ ದುರ್ವಿನೀತನಿಗೆ ಪುನ್ನಾಡಾಧಿಪತ್ಯವು ದೊರೆತಿರಬಹುದು.[1]

ಕ್ರಿ. ಶ. ೧೦೭೭ ರ ನಗರ ಶಾಸನದಲ್ಲಿ ದುರ್ವಿನೀತನು ಕಾಡುವೆಟ್ಟಿ-ಯನ್ನು ಸೋಲಿಸಿ ತನ್ನ ಮಗಳ ಮಗನನ್ನು ಜಯಸಿಂಹವಲ್ಲಭನ ಪರಂಪರಾ ಪ್ರಾಪ್ತವಾದ ಸಿಂಹಾಸನದ ಮೇಲೆ ಕುಳ್ಳಿರಿಸಿದನೆಂದು ಹೇಳಿದೆ.[2] ರಾಯಿಸ ರನ್ನು ಅನುಸರಿಸಿ ನರಸಿಂಹಾಚಾರ್ಯರೂ ದುರ್ವಿನೀತನು ಪಲ್ಲವರನ್ನು ಸೋಲಿಸಿ ೧ನೆಯ ಪುಲಿಕೇಶಿಯ ಅಜ್ಜನಾದ ಜಯಸಿಂಹನನ್ನು ಚಳುಕ್ಯ ಸಿಂಹಾಸನದ ಮೇಲೆ ಕುಳ್ಳಿರಿಸಿದನೆಂದು ಬರೆದಿದ್ದಾರೆ.[3] ಇದು ತಪ್ಪು. ೨ನೆಯ ಪುಲಿಕೇಶಿಯ ತಮ್ಮ ವಿಷ್ಣುವರ್ಧನನ ಸಮಕಾಲೀನನಾದ ದುರ್ವಿನೀತನು ಅವನಿಂದ ೫ ತಲೆ ಗಳು ಹಿಂದೆ ಇದ್ದ ಜಯಸಿಂಹನ ಅಜ್ಜನಾಗುವುದು ಅಶಕ್ಯವು. ದುರ್ವಿನೀತ ನಿಗೂ ಚಳುಕ್ಯರಿಗೂ ಬಾಂಧವ್ಯವಿದ್ದುದು ಆ ಕಾಲದ ಉಭಯ ಮನೆತನದ ಶಾಸನಗಳಲ್ಲೆಲ್ಲಿಯೂ ಹೇಳಿಲ್ಲ. ಇದಲ್ಲದೆ ಮೇಲಿನ ಶಾಸನದಲ್ಲಿ ಹೇಳಿದ ಸಂಗತಿಗಳು ತತ್ಕಾಲೀನ ಲಿಪಿಗಳಲ್ಲಿ ಉಕ್ತವಾಗಿಲ್ಲ. ಆದುದರಿಂದ ಈ ವಿಧಾನ ಗಳಿಗೆ ೭ನೆಯ ಶತಮಾನದ ಇತಿಹಾಸರಚನೆಯಲ್ಲಿ ಪ್ರಾಮಾಣ್ಯವು ದೊರೆಯು-ಲಾರದು.

ಡಾ. ವೆಂಕಟರಮಣಯ್ಯನವರು ನಗರಶಾಸನದ ಶ್ಲೋಕದಲ್ಲಿ ದುರ್ವಿ-ನೀತನು ರಾವಣನಂತೆ ಕ್ರೂರನಾಗಿದ್ದ ಕಾಡುವೆಟ್ಟಿಯನ್ನು ಸೋಲಿಸಿ ಜಯ ಸಿಂಹವಲ್ಲಭನ ಪರಂಪರಾಪ್ರಾಪ್ತವಾದ ಸಿಂಹಾಸನದಮೇಲೆ ತನ್ನ ಮಗಳನ್ನು ಕುಳ್ಳಿರಿಸಿದನೆಂದು ಬರೆದಿದೆಯೆಂದೂ ಕಾಡುವೆಟ್ಟಿಯು ಪಲ್ಲವ ೧ನೆಯ ಮಹೇಂದ್ರ ವಿಕ್ರಮನ ಮಗನಾದ ೧ನೆಯ ನರಸಿಂಹವಿಕ್ರಮವರ್ಮನೆಂದೂ ದುರ್ವಿನೀತನ ಮಗಳ ಮಗನು ೨ನೆಯ ಪುಲಿಕೇಶಿಯ ಮಗನಾದ ೧ನೆಯ ವಿಕ್ರಮಾದಿತ್ಯ-

---

[1] ಅಪುತ್ರೋऽನೇನ ವಿಧಿನಾ ಸತಾಂ ಕುರ್ವೀತ ಪುತ್ರಿಕಾಂ ।
ಯದಪತ್ಯಂ ಭವೇದಸ್ಯಾಂ ತನ್ಮಮ ಸ್ಯಾತ್ಸ್ವಧಾಕರಂ ॥
—ಮನುಸ್ಮೃತಿ ೭ನೆಯ ಅಧ್ಯಾಯ ೧೨೭ನೆಯ ಶ್ಲೋಕ.
ದೌಹಿತ್ರೋऽಹ್ಯಖಿಲಂ ರಿಕ್ಥಮಪುತ್ರಸ್ಯ ಪಿತುರ್ಹರೇತ್ ।
—*Ibid* 132.

[2] *Ep. Car.* Vol. VIII, Nagar 35.

[3] *Mysore Arch. Report,* 1912.

ನಾಗಿರಬೇಕೆಂದೂ ಬರೆದಿದ್ದಾರೆ.[1] 'ಅವನಿಪತಿ ತ್ರಿತಯಾಂತರಿತ' ವಾಗಿದ್ದ ಚಳುಕ್ಯರಾಜ್ಯವನ್ನು ಪಲ್ಲವ ನರಸಿಂಹವರ್ಮನಿಂದ ಕಸಿದು ಸು. ೬೫೫ರಲ್ಲಿ ೧ನೆಯ ವಿಕ್ರಮಾದಿತ್ಯನಿಗೆ ಗಂಗರಾಜನು ತಿರುಗಿ ಕೊಟ್ಟು ಪಟ್ಟಗಟ್ಟಿದನೆಂದೂ ಅವರು ಪ್ರತಿಪಾದಿಸಿದ್ದಾರೆ. ಕ್ರಿ. ಶ. ೬೭೪ರ ಗದ್ವಾಲ ಶಾಸನದಲ್ಲಿ ಗಂಗ ಮಹಾದೇವಿಯ ವಿಜ್ಞಾಪನೆಯ ಮೇರೆಗೆ ವಿಕ್ರಮಾದಿತ್ಯನು ದಾನಮಾಡಿದ ನೆಂದು ಬರೆದಿರುವುದರಿಂದ ಈ ಗಂಗಮಹಾದೇವಿಯೇ ದುರ್ವಿನೀತನ ಮಗಳೂ ವಿಕ್ರಮಾದಿತ್ಯನ ತಾಯಿಯೂ ಆಗಿರಬಹುದೆಂದು ಅವರ ಅಭಿಪ್ರಾಯವು. ಆದರೆ ಈ ವಿಚಾರಸರಣಿಯು ತಪ್ಪು. 'ಅವಂತಿಸುಂದರೀ ಕಥೆ' ಯ ಆಧಾರದಿಂದಲೂ ಶ್ರೀಪುರುಷನ ಹಿಂದಿನ ರಾಜರ ಕಾಲಮಾನದ ವಿವೇಚನೆಯಿಂದಲೂ ದುರ್ವಿನೀತನ ಕಡೆಯ ವರ್ಷವು ಸು. ಕ್ರಿ. ಶ. ೬೦೫ ಆಗಿರಬೇಕೆಂದು ನಿರ್ಧರಿಸಿದ್ದೇವೆ. ಅವನು ಸು. ಕ್ರಿ. ಶ. ೬೫೫ರಲ್ಲಿ ಬದುಕಿರುವುದು ಸಂಭಾವ್ಯವಿಲ್ಲ. ಅವನು ಪಲ್ಲವರನ್ನು ಸೋಲಿಸಿ ಚಳುಕ್ಯರಾಜ್ಯ ಪ್ರತಿಷ್ಠಾಪನೆಯನ್ನು ಮಾಡಿದ್ದುದು ನಿಜವಾಗಿದ್ದರೆ ತನ್ನ ಶಾಸನಗಳಲ್ಲಿ ಈ ಅದ್ಭುತ ವಿಕ್ರಮವನ್ನು ಹೊಗಳಿಕೊಳ್ಳದೆ ಇರುತ್ತಿದ್ದಿಲ್ಲ. ವಿಕ್ರಮಾದಿತ್ಯನಿಗೆ ವಿಜ್ಞಾಪನೆ ಮಾಡಿಕೊಂಡ ಗಂಗಮಹಾದೇವಿಯು ಅವನ ಹೆಂಡತಿಯಾಗಿರಬೇಕಲ್ಲದೆ ತಾಯಿಯಾಗಿರಲಾರಳು.[2]

ದುರ್ವಿನೀತನು ಕಾವ್ಯಕಥಾನಾಟಕಗಳನ್ನು ರಚಿಸುವುದರಲ್ಲಿ ಒಳ್ಳೇ ಸಾಮರ್ಥ್ಯವುಳ್ಳವನಾಗಿದ್ದನು. ಗುಮ್ಮರೆಡ್ಡಿ ಪುರಶಾಸನದಲ್ಲಿ ಇವನು ಶಬ್ದಾವ ತಾರಕಾರನೂ ವಡ್ಡ ಕಥೆಯನ್ನು ಸಂಸ್ಕೃತ ಭಾಷೆಯಲ್ಲಿ ಬರೆದವನೂ ಕಿರಾತಾರ್ಜುನೀಯದ ೧೫ ಸರ್ಗಗಳ ( ಅಥವಾ ೧೫ನೆಯ ಸರ್ಗದ ) ಮೇಲೆ ಟೀಕೆಯನ್ನು ರಚಿಸಿದವನೂ ಎಂದು ವರ್ಣಿಸಲ್ಪಟ್ಟಿದ್ದಾನೆ. ಶಬ್ದಾವತಾರವು ವ್ಯಾಕರಣಕ್ಕೆ ಸಂಬಂಧಿಸಿದ ಒಂದು ಗ್ರಂಥವು. ವಡ್ಡಕಥೆಯು ಗುಣಾಢ್ಯನು ಪೈಶಾಚ ಭಾಷೆಯಲ್ಲಿ ಬರೆದ ಬೃಹತ್ಕಥೆಯು. ಕಿರಾತಾರ್ಜುನೀಯವು ಪ್ರಸಿದ್ಧ ಕವಿಯಾದ ಭಾರವಿಯಿಂದ ರಚಿತವಾದುದು. ಈ ಭಾರವಿಯು ಸು. ಕ್ರಿ. ೫೯೮ರಲ್ಲಿ 'ರಾಜಸೂನು' ವಿಷ್ಣುವರ್ಧನನಿಗೆ ನಾಸಿಕ್ಯದೇಶದಲ್ಲಿದ್ದ ಅಚಲಪುರದ ದಾಮೋದರನನ್ನು ಪರಿಚಯಮಾಡಿ ಕೊಟ್ಟನೆಂದು ಮೇಲೆ ಹೇಳಿದ್ದೇವೆ. ಕ್ರಿ. ಶ. ೬ನೆಯ ಶತಮಾನದ ಕಡೆಯ ಭಾಗದಲ್ಲಿ ಭಾರವಿಯು ಚಳುಕ್ಯ ಆಸ್ಥಾನದಲ್ಲಿ ಒಳ್ಳೇ ಮನ್ನಣೆಯನ್ನು ಪಡೆದ ಪ್ರಸಿದ್ಧ ಕವಿಯಾಗಿದ್ದಿರಬೇಕು. ದುರ್ವಿ

---

[1] '*Durvinita and Vikramāditya*', *Trivēṇi*.

[2] ಚಳುಕ್ಯ ಪ್ರಕರಣದಲ್ಲಿ ವಿಶೇಷಾಂಶವನ್ನು ನೋಡಿರಿ.

ನೀತನ ೨೦ನೆಯ ವರ್ಷದ ಉತ್ತನೂರು ತಾಮ್ರಶಾಸನದಲ್ಲಿ ಇವನ ಕಿರಾತಾರ್ಜುನೀಯಕ್ಕೆ ಟೀಕೆಯು ದುರ್ವಿನೀತನಿಂದ ಬರೆಯಲ್ಪಟ್ಟಿತ್ತೆಂದು ಹೇಳಿರುವುದರಿಂದ ಕ್ರಿ. ಶ. ೫೭೫ ಕ್ಕಿಂತ ಪೂರ್ವದಲ್ಲಿಯೇ ಈ ಕಾವ್ಯವು ಪ್ರಚಾರದಲ್ಲಿದ್ದಿರಬೇಕು. ಕ್ರಿ. ಶ. ೬೩೪ ರ ಐಹೊಳ್ಳಿ ಶಿಲಾಶಾಸನದಲ್ಲಿ ರವಿಕೀರ್ತಿಯು 'ಕವಿತಾಶ್ರಿತ ಕಾಳಿದಾಸ ಭಾರವಿಕೀರ್ತಿಃ' ಎಂದು ತನನ್ನು ಹೇಳಿಕೊಂಡಿದ್ದಾನೆ. ಇಷ್ಟರಲ್ಲಿ ಭಾರವಿಯು ಕಾಳಿದಾಸನಿಗೆ ಸಮಾನವಾದ ಪ್ರಖ್ಯಾತಿಯನ್ನು ಪಡೆದಿರಬೇಕು. ನೃಪತುಂಗನ 'ಕವಿರಾಜಮಾರ್ಗ'ದಲ್ಲಿ (ಕ್ರಿ. ಶ. ೯ನೆಯ ಶತಮಾನ) ಗದ್ಯಕರ್ತೃಗಳ ನಾಮಾವಳಿಯಲ್ಲಿ ದುರ್ವಿನೀತನ ಹೆಸರು ಬಂದಿರುವುದರಿಂದ ಅವನು ಕನ್ನಡ ಭಾಷೆಯಲ್ಲಿಯೂ ಗದ್ಯಗ್ರಂಥ ಕರ್ತನಾಗಿದ್ದನೆಂದು ಗೊತ್ತಾಗುತ್ತದೆ. ಇವನು ರಚಿಸಿದ ಗ್ರಂಥಗಳಾವುವೂ ಇದುವರೆಗೆ ದೊರೆತಿಲ್ಲ. ದುರ್ವಿನೀತನು ನೀತಿಶಾಸ್ತ್ರದ ಪ್ರವಚನದಲ್ಲಿಯೂ ಪ್ರಯೋಗದಲ್ಲಿಯೂ ಸಾಕ್ಷಾತ್ ವಿಷ್ಣುಗುಪ್ತನಾಗಿದ್ದನು. ಗಾಂಧರ್ವವಿದ್ಯೆ ನಾಟ್ಯಶಾಸ್ತ್ರಗಳ ವಿನಿಯೋಗ ವ್ಯಾಖ್ಯಾನಗಳಲ್ಲಿ ತುಂಬುರು ನಾರದ ಭರತರೇವ ಕಂಬಲಾಚಾರ್ಯರನ್ನು ಮೀರಿಸಿದ್ದನು. ಹಸ್ತಿ ಶಿಕ್ಷಾವಿಜ್ಞಾನದಲ್ಲಿಯೂ ಅದರ ವಿನಿಯೋಗದಲ್ಲಿಯೂ ರಾಜಪುತ್ರ ಶಾಲಿಹೋತ್ರನಾಗಿದ್ದನು. ಆಸ್ತ್ರೋಪಾಸ್ತ್ರಾದಿ ಆಯುಧಗಳ ಅಭಿಯೋಗದಲ್ಲಿ ಸಾಕ್ಷಾತ್ ಪರಶುರಾಮನಾಗಿದ್ದನು. ಪುರುಷ ಲಕ್ಷಣ (ಸಾಮುದ್ರಿಕ) ಶಾಸ್ತ್ರದಲ್ಲಿ ಸಾಕ್ಷಾತ್ ಸಮುದ್ರ ಸೂರಿಯಾಗಿದ್ದನು. ಆಯುರ್ವೇದ ವಿಜ್ಞಾನದಲ್ಲಿ ಅತ್ರಿ, ಚರಕ, ಧನ್ವಂತರಿಗಳಿಗೆ ಸಮಾನನಾಗಿದ್ದನು. ಕೌಟಿಲ್ಯ ಅರ್ಥಶಾಸ್ತ್ರದ ಕರ್ತನೂ ಮೌರ್ಯಚಂದ್ರಗುಪ್ತನ ಮುಖ್ಯಮಂತ್ರಿಯೂ ಆದ ಚಾಣಕ್ಯನೇ ವಿಷ್ಣುಗುಪ್ತನು.

ದುರ್ವಿನೀತನಿಗೆ ನಿರ್ವಿನೀತನೆಂಬ ಹೆಸರೂ ಇತ್ತು. ಈ ಹೆಸರುಗಳು ವಿಪರೀತ ಅರ್ಥದ್ಯೋತಕಗಳೆಂದು ಕಂಡುಬಂದರೂ ಇವುಗಳ ನಿಜವಾದ ಅರ್ಥವನ್ನು ಶಾಸನಗಳೇ ಕೊಟ್ಟಿವೆ. ಪೊಲವೀರನ ತಗರೇ ತಾಮ್ರಶಾಸನದಲ್ಲಿ 'ಸಂಯತಿ ಅರಿನರಪ ನಿರ್ವಿನೀತಃ' (ಯುದ್ಧದಲ್ಲಿ ಶತ್ರು ರಾಜನಿಗೆ ಬಗ್ಗದವನು) ಎಂದೂ ಶ್ರೀಪುರುಷನ ನರಸಿಂಹರಾಜಪುರ ಶಾಸನದಲ್ಲಿ 'ದುರ್ವಿನೀತ ಕಲೌ ದುರ್ವಿನೀತಃ' (ದುಷ್ಟ ಕಲಿಗೆ ದುಷ್ಟನು) ಎಂದೂ ದುರ್ವಿನೀತನು ವರ್ಣಿಸಲ್ಪಟ್ಟಿದ್ದಾನೆ. ಗುಮ್ಮರೆಡ್ಡಿಪುರ ಶಾಸನದಲ್ಲಿ ಇವನಿಗೆ 'ಅವಿನೀತಸ್ಥಿರಪ್ರಜಾಲಯ'ನೆಂಬ ಹೆಸರು ಕೊಟ್ಟಿದೆ. ಇವನು ವೃಷ್ಣಿಕುಲ ತಿಲಕ ಕೃಷ್ಣಸಮನೂ ಕೃಷ್ಣಕುಲನೂ ಎಂದು ಹೊಗಳಲ್ಪಟ್ಟಿದ್ದಾನೆ.

ಸಿಗರ್ಗುಂದ ಶಿಲಾಶಾಸನದಿಂದ ದುರ್ವಿನೀತನಿಗೆ ಮೂರು ಜನ ಮಕ್ಕಳಿದ್ದ ರೆಂದು ಗೊತ್ತಾಗುತ್ತದೆ. ಮುಷ್ಕರನು ದುರ್ವಿನೀತನ ಮಗನೆಂದೂ ಅವನ ಸಂತತಿಯಲ್ಲಿಯೇ ಗಂಗರಾಜ್ಯವು ಉಳಿಯಿತೆಂದೂ ಶಾಸನಗಳಿಂದ ತಿಳಿಯುತ್ತದೆ. ತಗರೇ ತಾಮ್ರಲಿಪಿಯಲ್ಲಿ 'ಸಂಯುತ್ಯರಿಸರಪನಿರ್ವಿನೀತಃ ಶ್ರೀಮತ್ಕೊಂಗುಳಿ-ಮಹಾರಾಜಸ್ಯಾತ್ಮಜೇನ ........ ಪೊಲವೀರನಾಮ್ನಾ ಕಾನ್ಯಾವಿನೀತಾ [ಂ*]ಕಿತೇನ ಶ್ರೀಮತ್ಕೊಂಗುಣಿ ಮಹಾರಾಜೇನ' ಎಂದು ಬರೆದಿರುವುದರಿಂದ ದುರ್ವಿನೀತನಿಗೆ ಪೊಲವೀರನೆಂಬ ಮಗನಿದ್ದನೆಂದು ಗೊತ್ತಾಗುತ್ತದೆ. ಈ ಪೊಲವೀರನು ಮುಷ್ಕರನಿಂದ ಭಿನ್ನನೆಂದು ಹಿಂದೆ ತೋರಿಸಿದ್ದೇವೆ. ಮೂರನೆಯ ಮಗನ ವಿಷಯಕ್ಕೆ ಯಾವ ಸಂಗತಿಗಳೂ ಗೊತ್ತಿಲ್ಲ.

**ದುರ್ವಿನೀತನ ಶಾಸನಗಳು:**

೧. ಬೆಂಗಳೂರು ಮ್ಯೂಜಿಯಂ ತಾಮ್ರಶಾಸನ.—[1] ಕೊಂಗುಣಿವರ್ಮ ಮಹಾರಾಜನು ತನ್ನ ಆಳಿಕೆಯ ೩ನೆಯ ವರ್ಷದಲ್ಲಿ ಸೋಮಯಾಜಿವಾಸ ಶರ್ಮನಿಗೆ ಭೂದಾನಮಾಡಿದನೆಂದು ಬರೆದಿದೆ. ಇವನು ಅವಿನೀತನ ಮಗನಾದ ದುರ್ವಿನೀತನೆಂದು ಅಲ್ಲಿ ಕೊಟ್ಟ ವಂಶಾವಳಿಯಿಂದ ತಿಳಿಯುತ್ತದೆ. 'ಪರಿಣತವಯೋವಿಲಾಸೇನಾಪ್ಯ ಪರಿಣತ ಸತ್ವಸಂಪದಾ' (ವಯಸ್ಸಿನಲ್ಲಿ ಹಿರಿಯನಾಗಿದ್ದರೂ ಸತ್ವಸಂಪತ್ತಿನಲ್ಲಿ ಹರೆಯದವನು) ಎಂದು ವರ್ಣಿತನಾಗಿದ್ದಾನೆ.

೨. ಕಡಗತ್ತೂರು (ಮದ್ದಗಿರಿ) ತಾಮ್ರಶಾಸನ:—[2] ಕೊಂಗುಣಿ ಮಹಾರಾಜನು ತನ್ನ ಆಳಿಕೆಯ ೪ನೆಯ ವರ್ಷದ ಮಾಘ ಶುಕ್ಲಪಕ್ಷದಲ್ಲಿ ರೇವತೀ ನಕ್ಷತ್ರದ ಶುಭ ಮುಹೂರ್ತದಲ್ಲಿ ವನ್ನೇವಿಷಯದಲ್ಲಿ ಪೇರೂರ ಸಮೀಪದಲ್ಲಿದ್ದ ತಿಪ್ಪೇರೂರ್ ನಾಮ ಗ್ರಾಮವನ್ನು ಭಾರದ್ವಾಜ ಗೋತ್ರದ ಆಪಸ್ತಂಬ ಸೂತ್ರದ ತೈತ್ತಿರೀಯ ಚರಣದ ಸ್ಕಂದಶರ್ಮನೆಂಬ ಬ್ರಾಹ್ಮಣನಿಗೆ ಧಾರಾಪೂರ್ವಕವಾಗಿ ಎರೆದು ಕೊಟ್ಟನು. ಕೊಂಗುಣಿ ಮಹಾರಾಜನು ದುರ್ವಿನೀತನು.

೩. ಉತ್ತನೂರು ತಾಮ್ರಶಾಸನ:—[3] ತನ್ನ ೨೦ನೆಯ ವರ್ಷದ ಕಾರ್ತಿಕ ಮಾಸ ಪೌರ್ಣಿಮಾಸೆ, ಕೃತ್ತಿಕಾನಕ್ಷತ್ರದ ಅಭಿಜನ್ಮುಹೂರ್ತದಲ್ಲಿ

---

[1] *Ind. Ant.* Vol. VII, p. 174. [2]. *Ep. Carn.* XII, Mi. 110.
[3] *M. A. R.* 1916.

ದುರ್ವಿನೀತನು ಭಾರದ್ವಾಜ-ವಾತ್ಸ್ಯ-ಕೌಶಿಕಗೋತ್ರದ ತೈತ್ತಿರೀಯ ಚರಣದ ಪ್ರಾವಚನ ಆಪಸ್ತಂಬಸೂತ್ರದ ಅವಿಚ್ಛಿನ್ನ ಸೋಮಪೀತಿಗಳೂ ಷಟ್ಕರ್ಮನಿರತರೂ ಆದ ೪೮ ಜನ ಬ್ರಾಹ್ಮಣರಿಗೆ ಪುದಲ್ನಾಡ ರಾಷ್ಟ್ರದಲ್ಲಿದ್ದ ಕೊಳಿಂತೂರು ಎಂಬ ಗ್ರಾಮವನ್ನು ಸರ್ವಬಾಧಾಪರಿಹಾರವಾಗಿ ದಾನ ಮಾಡಿದನು. ರೇಡಿಯೂರುಗ್ರಾಮದ ಭತ್ತದ ಗದ್ದೆಗಳಲ್ಲಿ ಕೊಳಿಂತೂರು ಗ್ರಾಮದ ಕೆರೆಯ ನೀರು ಎಷ್ಟು ಭೂಮಿಯನ್ನು ಉಣ್ಣುತ್ತದೋ ಅಷ್ಟು ಮಾತ್ರ ಕೊಟ್ಟನು. ಇದಕ್ಕೆ ಸಾಕ್ಷಿಗಳು ಗಂಗರಾಜಕುಲದ ಸಮಸ್ತ ಆಸ್ಥಾಯಿಕರು ಮತ್ತು ಬ್ರಾಹ್ಮಣರು. ಈ ತಾಮ್ರಶಾಸನವನ್ನು ಕೂಣಾಚಾರ್ಯಾನ್ವಯದ ಕೊಂಗುಣಿ ಪೆಂಡಟ್ಕಾರನು ಬರೆದನು.

೪. ಗುಮ್ಮರೆಡ್ಡಿಪುರಶಾಸನ.[1]— ದುರ್ವಿನೀತನು ತನ್ನ ೪೦ನೆಯ ವರ್ಷದ ಮಾಘಮಾಸ ಕೃಷ್ಣಪಕ್ಷ ದ್ವಾದಶಿ ಬುಧವಾರ ದಿನ ತನ್ನ ಜನ್ಮನಕ್ಷತ್ರವೂ ವರ್ಷವರ್ಧನ ಮಹಾಮಹವೂ ಕೂಡಿದಾಗ ಪುದಲ್ನಾಡರಾಷ್ಟ್ರದಲ್ಲಿ ಕೋದಂಜೆರುವು ಎಂಬ ಗ್ರಾಮವನ್ನು ಕೊರಟ್ಟೂರು ವಾಸ್ತವ್ಯರಾದ ಭಾರದ್ವಾಜಗೋತ್ರದ ಪ್ರಾವಚನಕಲ್ಪದಯಜ್ಞವಿದ್ಯಾಪಾರಗರೂ ಅವಿಚ್ಛಿನ್ನ ಸೋಮಪೀತಿಗಳೂ ಷಟ್ಕರ್ಮನಿರತರೂ ಷಡಂಗವಿದರ ವೃತ್ತಿಯುಳ್ಳವರೂ ಆದ ಭವಶರ್ಮ್ಮ ಅಗ್ನಿಶರ್ಮ್ಮ ಎಂಬ ಬ್ರಾಹ್ಮಣರಿಗೆ ಸರ್ವಬಾಧಾಪರಿಹಾರವಾಗಿ ಕೊಟ್ಟನು. ಈ ಶಾಸನವನ್ನು ಕೂನಾಚಾರ್ಯಾನ್ವಯದ ಕೊಂಗುಣಿ ಪೆರ್ದ್ದಟ್ಟಕಾರನು ಬರೆದನು. ಅವಿನೀತನ ಒಂದು ಕೃತಕಶಾಸನದಲ್ಲಿ ಕೋದುಂಜೆಱು ಗ್ರಾಮವು ದತ್ತಿಯ ವಿಷಯವಾಗಿದೆ.

೫. ನಲ್ಲಾಲ ತಾಮ್ರಶಾಸನ.[2]— ದುರ್ವಿನೀತನು ತನ್ನ ೪೦ನೆಯ ವರ್ಷದ ವೈಶಾಖಮಾಸ ಶುಕ್ಲಪಕ್ಷ ಬುಧವಾರ ವಿಶಾಖಾ ನಕ್ಷತ್ರದ ಪರ್ವಕಾಲದಂದಿನ ಬ್ರಾಹ್ಮಮುಹೂರ್ತದಲ್ಲಿ ಭಾರದ್ವಾಜಗೋತ್ರದ ತೈತ್ತಿರೀಯ ಚರಣದ ಪ್ರಾವಚನಕಲ್ಪದ ಯಜನಾದಿ ಷಟ್ಕರ್ಮ್ಮನಿರತರಾಗಿದ್ದ ಶ್ಯೇನಶರ್ಮ್ಮರೆಂಬ ತಂದೆಮಕ್ಕಳಿಬ್ಬರಿಗೆ ಕೊಱಿಕುಂದ ವಿಷಯದಲ್ಲಿ ನಲ್ಲಾಲವೆಂಬ ಗ್ರಾಮವನ್ನು ಸರ್ವಪರಿಹಾರವಾಗಿ ಕೊಟ್ಟನು. ಮಣಿಯಟಿಗುರೆ, ಅಸಿಂಬಾಲ, ನಂದಿಯಾಲ ಮೊದಲಾದ ಮಹಾಜನರ

[1] M. A. R. 1912.

[2] Ibid, 1924, p. 69.

ಸಮಕ್ಷವಾಗಿಯೂ ಸಕಲ ಚಾತುರ್ವಿದ್ಯರ ಸಮಕ್ಷವಾಗಿಯೂ ಈ ದಾನವು ಮಾಡಲ್ಪಟ್ಟಿತು. ಈ ಶಾಸನವನ್ನು ಘಸಂಬಾಚಾರ್ಯನು ಬರೆದನು. ಕೋಜೀಕುಂದಾಳ್ಕೆ ೩೦೦ ಯೆಂಬ ಪ್ರಾಂತವು ಶ್ರೀಪುರುಷನ ಒಂದು ಶಾಸನದಲ್ಲಿ [1] ಉಕ್ತವಾಗಿದೆ.

೬. ಉತ್ತನೂರು ಕೃತಕಶಾಸನ. [2]— ಈ ಶಾಸನವು ೨೦ನೆಯ ವರ್ಷದ್ದು. ಇದರಲ್ಲಿ ಕಾಲದ ಬಗ್ಗೆ ಇದ್ದ ವಿವರಗಳೂ ರಾಜರ ವರ್ಣನಾಂಶಗಳೂ ಮೇಲಿನ ಉತ್ತನೂರು ಶಾಸನದಲ್ಲಿದ್ದಂತೆಯೇ ಇರುತ್ತವೆ. ಪುದಲ್ನಾಡ ರಾಷ್ಟ್ರದಲ್ಲಿದ್ದ ಕೊಳತ್ತೂರು ಗ್ರಾಮವನ್ನು ಅವೇ ಗೋತ್ರಾದಿಗಳುಳ್ಳ ೬೦ ಜನ ಬ್ರಾಹ್ಮಣರಿಗೆ ದುರ್ವಿನೀತನು ದಾನಮಾಡಿದಂತೆ ಹೇಳಿದೆ. ಶಾಸನದ ಲೇಖಕನ ಹೆಸರೂ ಅಲ್ಲಿದ್ದಂತೆಯೇ ಇದೆ. ಗ್ರಾಮದ ಮೇರೆಯನ್ನು ಕೊಡುವ ಭಾಗವು ಕನ್ನಡದಲ್ಲಿದೆ. ಈ ಶಾಸನದ ಅಕ್ಷರಗಳು ಅದರ ಸೃಷ್ಟಿಸ್ವರೂಪವನ್ನು ವ್ಯಕ್ತಪಡಿಸದೆ ಇರಲಾರವು. ಇದಲ್ಲದೆ ಒಂದೇ ತಿಥಿಯಲ್ಲಿ ಅದೇ ರಾಜನು ಅದೇ ಗ್ರಾಮವನ್ನು ( ಕೊಳಿಂತೂರೇ ಕೊಳತ್ತೂರು ) ಒಂದರಲ್ಲಿ ೪೮ ಜನರಿಗೆ ಮತ್ತೊಂದರಲ್ಲಿ ೬೦ ಜನರಿಗೆ ಕೊಟ್ಟಿರುವುದು ಶಕ್ಯವಿಲ್ಲ. ಆದುದರಿಂದಲೂ ಭಾಷೆಯ ಅಶುದ್ಧತೆ ಲಿಪಿಯ ಅರ್ವಾಚೀನತೆಗಳಿಂದಲೂ ಶಾಸನವು ಕೃತಕವೆಂದೇ ಹೇಳಬೇಕಾಗುತ್ತದೆ. ಹೀಗಿದ್ದರೂ ಶ್ರೀಮಾನ್ ನರಸಿಂಹಾಚಾರ್ಯರು ಇದನ್ನು ನಿಜ ( Genuine ) ವೆಂದು ಬಗೆದುದು ಆಶ್ಚರ್ಯವೇ ಸರಿ.

೭. ಮಲ್ಲೊಹಳ್ಳಿ ತಾಮ್ರಶಾಸನ. [3]— ಇದಾದರೂ ಸೃಷ್ಟಿಯೆಂದು ಲಿಪಿಯನ್ನು ಪರೀಕ್ಷಿಸಿದರೆ ತಿಳಿಯುತ್ತದೆ. ಶ್ರೀಮದ್ವಲ್ಮೀಕಿ ಕುಲವರ್ಧನನೂ ವಾಜಸನೇಯ್ಯನುಯಾಯಿಯೂ ಕಾಶ್ಯಪಗೋತ್ರದವನೂ ಆದ ದೇವಶರ್ಮಾಪರನಾಮಧೇಯನಾದ ಮಹಾದೇವನೆಂಬ ಬ್ರಾಹ್ಮಣನಿಗೆ ದುರ್ವಿನೀತನು ತನ್ನ ಆಳಿಕೆಯ ೩೫ನೆಯ ವರ್ಷದಲ್ಲಿ ಬೆಂಪೂರೀಶ್ವರಸ್ಥಾನ ಅಥವಾ ಕೆಳಲೆಯನ್ನು ದಾನಮಾಡಿದನು.

ದುರ್ವಿನೀತನ ಮಕ್ಕಳಾದ ಮುಷ್ಕರ ಪೊಲವೀರರಲ್ಲಿ ಯಾರು ಹಿರಿಯರೆಂಬುದು ತಿಳಿದಿಲ್ಲ. ಮುಷ್ಕರನ ಸಂತತಿಯ ರಾಜರೇ ಕೊಂಗುಣಿಪಟ್ಟವನ್ನು

---

[1] *Ep. Car.* Vol. IX, Hoskote 86. [2] M. A. R. 1917.
[3] *Ep. Car.* Vol. X, DB 68.

ವಹಿಸಿದುದರಿಂದ ಅವರು ಹಿರಿಯ ಮನೆತನಕ್ಕೆ ಸೇರಿದವರಿರಬಹುದೆಂದು ತಿಳಿದು ಮುಷ್ಕರನೇ ದೊಡ್ಡವನೆಂದು ವಂಶಾವಳಿಯಲ್ಲಿ ತಾತ್ಪೂರ್ತಿಕವಾಗಿ ಹಿಡಿದಿದ್ದೇವೆ. ಮುಷ್ಕರನನ್ನು ಮೊಕ್ಕರನೆಂದೂ ಕರೆಯುತ್ತಿದ್ದರು. ಇವನ ಶಾಸನಗಳಾವುವೂ ದೊರೆತಿಲ್ಲ. ಇವನು ಸಿಂಧುರಾಜನ ಮಗಳನ್ನು ಮದುವೆಯಾಗಿದ್ದನು. ಅನೇಕ ರಾಜರು ಇವನಿಗೆ ಸಾಮಂತರಾಗಿದ್ದರೆಂದು ಜಾವಳಿ ಶಾಸನದಲ್ಲಿ ಹೇಳಿದೆ. ಪೊಲವೀರನಿಗೆ 'ಕಾಂತಾವಿನೀತ' ಎಂಬ ಬಿರುದು ಇತ್ತು. ಇವನ ತಗರೇಶಾಸನದಲ್ಲಿ ಕೊಂಗುಣಿ ಮಹಾರಾಜನಾದ ಪೊಲವೀರನು ಕೌಶಿಕಗೋತ್ರದ ತೈತ್ತಿರೀಯ ಚರಣದ ನಾಗಶವರ್ಮ್ಮನೆಂಬ ಬ್ರಾಹ್ಮಣನಿಗೆ ಸೇಂದ್ರಕ ವಿಷಯದಲ್ಲಿದ್ದ ವಳ್ಳಾವಿದೇಶದಲ್ಲಿ ಪಲಚ್ಚೊಗೆ ಎಂಬ ಗ್ರಾಮವನ್ನು ಉದಕಪೂರ್ವಕವಾಗಿ ಕೊಟ್ಟನೆಂದು ಬರೆದಿದೆ. ಸೇಂದ್ರಕ ವಿಷಯವು ಕದಂಬ ೨ನೆಯ ಕೃಷ್ಣವರ್ಮ್ಮನ ಬೆಣ್ಣೂರು ಶಾಸನದಲ್ಲಿ ಉಕ್ತವಾಗಿದೆ. ಅದೇ ರಾಜನ ಬನ್ನಹಳ್ಳಿ ಶಾಸನದಲ್ಲಿ ವಳ್ಳಾವಿದೇಶವು ಬರುತ್ತದೆ. ಸಿಗುರ್ಂದದ ಶಿಲಾಶಾಸನದಲ್ಲಿ 'ನಿರ್ವಿನೀತರ ಕಿಱಿಯ ಮಗನ್ನಿರ್ಕಾಡುವಟ್ಟಿಯರಿನ್ದಂ ವಲ್ಲವರಸರಿನ್ದ-ಜಕ್ಕೊಂಗೊಣಿಪಟ ಸೂಡಿದೊರಾ ಅನುಜೊ ಇನ್ದು ಕನಲ್ಗೊಳಿ ನನ್ದಿಯಾಲರಾ ಏಟ್ಟದು' ಎಂದು ಬರೆದಿದೆ. ದುರ್ವಿನೀತನ ಕಿಱಿಯ ಮಗನು ಕಾಡುವಟ್ಟಿ (ಪಲ್ಲವ) ರಾಜರಿಂದ ಮತ್ತು ವಲ್ಲವರಸ (ವಲ್ಲಭ ಅಥವಾ ವಲ್ಲವರಸ ಎಂಬ ಹೆಸರಿದ್ದ ರಾಜ) ನಿಂದ ಕೊಂಗುಣಿಪಟ್ಟವನ್ನು ಪಡೆದನೆಂದೂ ಅವನಿಗೆ ಒಬ್ಬ ಅನುಜನಿದ್ದನೆಂದೂ ಹೇಳಬಹುದು. ಹರಿವರ್ಮ್ಮ ಮಾಧವರಿಗೆ ಪಲ್ಲವರಾಜರು ಪಟ್ಟಗಟ್ಟಿದ್ದರೆಂಬುದು ಗೊತ್ತಿದ್ದರೂ ದುರ್ವಿನೀತನ ಮಗನಾದ ಪೊಲವೀರನಿಗೆ ಯಾವ ಪಲ್ಲವರಾಜನು ಪಟ್ಟಬಂಧವನ್ನು ಮಾಡಿದನೆಂಬುದು ತಿಳಿಯಬಂದಿಲ್ಲ. ಮತ್ತು ವಲ್ಲರಸ ಎಂಬ ಪದಕ್ಕೆ ವಲ್ಲಭರಸ ಎಂದು ಅರ್ಥಮಾಡಿದರೆ ಈಗಿನ ಕಾಲದ ವಲ್ಲಭರೆಂದರೆ ಚಳುಕ್ಯರೇ. ಪಲ್ಲವರಿಗೂ ಚಳುಕ್ಯರಿಗೂ ಈಗ ಬದ್ಧವೈರವಿತ್ತೆಂದು ತಿಳಿದಿರುವುದರಿಂದ ಅವರಿಬ್ಬರೂ ಸೇರಿ ಪಟ್ಟಬಂಧಮಾಡುವುದು ಸಂಭವನೀಯವಾಗಿ ತೋರುವುದಿಲ್ಲ. ವಲ್ಲವರಸ ಎಂಬ ಹೆಸರಿನ ರಾಜನಿದ್ದುದಾದರೆ ಅವನಾರೆಂಬುದು ಇತಿಹಾಸದಲ್ಲಿ ಹೊರಬಿದ್ದಿಲ್ಲ. ಮುಷ್ಕರ ಪೊಲವೀರರು ಕ್ರಿ. ಶ. ೬೦೫ ರಿಂದ ೬೪೪ರ ವರೆಗೆ ಆಳಿರಬೇಕೆಂದು ಹಿಂದೆ ತೋರಿಸಿದ್ದೇವೆ.

ಪೊಲವೀರನಾದ ಮೇಲೆ ಮುಷ್ಕರನ ಮಗನಾದ ಶ್ರೀವಿಕ್ರಮನು ಪಟ್ಟಕ್ಕೆ ಬಂದನು. ಇದುವರೆಗೆ ಸಿಕ್ಕಿರುವ ಇವನ ಶಾಸನವು ಕಲ್ಲೂರಲ್ಲಿ ದೊರೆತ ವೀರ-

ಗಲ್ಲೊಂದೆ.[1] ಇದರಲ್ಲಿ ತಿಥಿನಿರ್ದೇಶವಿರದಿದ್ದರೂ ಇದರ ಕಾಲವು ೭ನೆಯ ಶತಮಾನದ ಮಧ್ಯಭಾಗವೆಂದು ಲಿಪಿಶೋಧನೆಯಿಂದ ನರಸಿಂಹಾಚಾರ್ಯರು ಹೇಳಿದುದು ಸರಿ. ಶ್ರೀವಿಕ್ರಮನು ಸಿಂಧುರಾಜನ ಮಗಳ ಮಗನು. ಇವನಿಗೆ ಘನವಿನೀತ ಎಂಬ ಬಿರುದು ಇತ್ತು. ಇವನು ೧೪ ವಿದ್ಯೆಗಳಲ್ಲಿ ಪಾರಂಗತನಾಗಿದ್ದನು. ಸಮಗ್ರ ನೀತಿಶಾಸ್ತ್ರದ ಪ್ರವಚನ ಪ್ರಯೋಗಗಳಲ್ಲಿ ವಿಶೇಷವಾದ ನೈಪುಣ್ಯವನ್ನು ಸಂಪಾದಿಸಿದ್ದನು. ಶ್ರೀವಿಕ್ರಮನು ತನ್ನ ಪರಾಕ್ರಮದಿಂದ ಅನೇಕ ಜನಪದಗಳನ್ನು ಸ್ವಾಧೀನಪಡಿಸಿಕೊಂಡನೆಂದೂ ಪ್ರತಾಪದಿಂದ ಸಕಲ ಸಾಮಂತರನ್ನು ಬಗ್ಗಿಸಿದನೆಂದೂ ಕುಳಗಾಣ ಶಾಸನದಲ್ಲಿ[2] ಹೇಳಿದೆ. ಇವನು ಸಂಪಾದಿಸಿದ ಜನಪದಗಳಾವುವೆಂದಾಗಲಿ ಸೋಲಿಸಿದ ಸಾಮಂತರಾರೆಂಬುದಾಗಲಿ ಗೊತ್ತಿಲ್ಲ. ಶ್ರೀವಿಕ್ರಮನ ಆಳ್ವಿಕೆಯಲ್ಲಿ ಪಬ್ಬ ಎಂಬವನು ರಕ್ಕಸನೂರನ್ನು ಹಿಡಿದುಕೊಳ್ಳುವಾಗ ಪಾರ್ವರರೆಲ್ಲಿ ಪೆರಾಣ್ಕ್ಕೋವನು ಮಡಿದನೆಂದು ನರಸಿಂಹಾಚಾರ್ಯರು ಕಲ್ಲೂರ ವೀರಗಲ್ಲಿನ ಶಾಸನದ ಅರ್ಥವನ್ನು ಕೊಟ್ಟಿದ್ದಾರೆ. ಶ್ರೀವಿಕ್ರಮನು ಕ್ರಿ. ಶ. ೬೪೪ರಿಂದ ೬೬೯ರವರೆಗೆ ಆಳಿರಬಹುದು.

ಶ್ರೀವಿಕ್ರಮನ ಹಿರಿಯ ಮಗನಾದ ಭೂವಿಕ್ರಮನು ಕ್ರಿ. ಶ. ೬೬೯ರಲ್ಲಿ ಪಟ್ಟವೇರಿರಬಹುದು. ಇವನ ತಮ್ಮನಾದ ನವಕಾಮ ಶಿವಮಾರನ ಮೊದಲನೆಯ ವರ್ಷವು ೬೭೯ತ್ತೊಂದು ಅವನ ೩೪ನೆಯ ವರ್ಷವಾದ ಶಕ ೬೩೫ ( ಕ್ರಿ. ಶ. ೭೧೩) ರಲ್ಲಿ ಹೊರಟ ಹಳ್ಳೀಗೇರಿ ತಾಮ್ರಶಾಸನದಿಂದ[3] ತಿಳಿಯುವುದರಿಂದ ಭೂವಿಕ್ರಮನ ಆಳ್ವಿಕೆಯು ಕ್ರಿ. ಶ. ೬೭೯ರಲ್ಲಿ ಕೊನೆಗಂಡಿರಬೇಕು. ಇವನು ಬಹುಪರಾಕ್ರಮಶಾಲಿಯು. ನೂರಾರು ಸಮರಾಂಗಣಗಳಲ್ಲಿ ಶತ್ರುರಾಜರನ್ನು ಸೋಲಿಸಿ ವಿಜಯಲಕ್ಷ್ಮಿಯನ್ನು ವಶಮಾಡಿಕೊಂಡಿದ್ದನು. ಅತಿಭೀಕರವಾದ ವಿಳಂದೆ ಯುದ್ಧದಲ್ಲಿ ಪಲ್ಲವರಾಜನನ್ನು ಹೊಡೆದೋಡಿಸಿ ಅವನನ್ನು ಕೋಟೆಯೊಳಗೆ ಅವಿತುಕೊಳ್ಳುವಂತೆ ಮಾಡಿದನು. ಜಯಶಾಲಿಯಾದ ಗಂಗರಾಜನು ಅಂತಃಪುರದ ಸ್ತ್ರೀಯರನ್ನು ಸೆರೆಹಿಡಿದುದಲ್ಲದೆ ಪಲ್ಲವರಾಜ್ಯವನ್ನಾಕ್ರಮಿಸಿಕೊಂಡನೆಂದು ಹೆಬ್ಬೂರು ಶಾಸನದಲ್ಲಿ[4] ಹೇಳಿದೆ. ಈ ಯುದ್ಧವು ಯಾವಾಗ ಯಾವ ಪಲ್ಲವರಾಜನೊಡನೆ ಸಂಭವಿಸಿತೆಂಬುದನ್ನು ಹೇಳಲಿಕ್ಕಾಗದು. ಗಂಗರು ಚಳುಕ್ಯರಿಗೆ ಅಧೀನರಾಗಿದ್ದರೆಂದು ಗೊತ್ತಿದೆ. ಈ ಕಾಲದ ಚಳುಕ್ಯ ಅರಸನಾದ ೧ನೆಯ ವಿಕ್ರಮಾದಿತ್ಯನು ಕ್ರಿ. ಶ. ೬೭೪ರಲ್ಲಿ ಪಲ್ಲವರೊಡನೆ ಯುದ್ಧಮಾಡುವ ಪ್ರಸಂಗ

---

[1] *M. A. R.* 1917
[2] *Ibid*, 1927.
[3] *Ep. Car.* Vol. III, p. 107.
[4] *Ep. Car.* vol. XII, Tm. 23.

ದಲ್ಲಿ ಚೋಳಿಕ ವಿಷಯದಲ್ಲಿದ್ದ ಉರಗಪುರದಲ್ಲಿ ಬೀಡುಬಿಟ್ಟಿದ್ದನೆಂದು ಗದ್ವಾಲ ಶಾಸನವು ಹೇಳುತ್ತದೆ. ಈ ಯುದ್ಧದಲ್ಲಿ ಭೂವಿಕ್ರಮನು ತನ್ನ ಸಾರ್ವಭೌಮನ ನೆರವಿಗಾಗಿ ದಂಡೆತ್ತಿ ಬಂದು ಪಲ್ಲವ ಈಶ್ವರ ಪೋತವರ್ಮನನ್ನು ವಿಳಂದೆಯಲ್ಲಿ ಸೋಲಿಸಿರಬಹುದು. ಇವನು ಶ್ರೀವಲ್ಲಭ ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದನು. ಇವನಿಗೆ 'ಮನೋವಿನೀತ' ಎಂಬ ಬಿರುದು ಇತ್ತೆಂದು ಕುಳಗಾಣ ಶಾಸನದಿಂದ ತಿಳಿಯುತ್ತದೆ. ಅದೇ ಶಾಸನವು ಇವನನ್ನು 'ಪಾಣ್ಣಾಟ ಪುಣ್ಣಾಟಾದ್ಯನೇಕ ಜನಪದಾಧಿಪತಿ' ಯೆಂದು ಹೊಗಳುತ್ತದೆ. ಇತ್ತೀಚೆಗೆ ದೊರೆತ ಅವನ ಬಿದಿರೂರು ತಾಮ್ರಶಾಸನದಲ್ಲಿ[1] ಭೂವಿಕ್ರಮನು ಕರಿಕಾಲಕುಲದ ಚೋಳ-ರಾಜಪುತ್ರಿಯ ಮಗನೆಂದೂ ಕೊವಳಾಲಪುರದಲ್ಲಿದ್ದಾಗ ತನ್ನ ಆಳಿಕೆಯ ೨೫ನೆಯ ವರ್ಷವಾದ ಶಕ ೫೫೬ ಚೈತ್ರಶುದ್ಧ ದಶಮಿ ಬೃಹಸ್ಪತಿವಾರ ಮಘಾ ನಕ್ಷತ್ರದ ಮುಹೂರ್ತದಲ್ಲಿ ಕೋಳಾಲವಿಷಯಾಧಿಪನಾದ ಸತ್ಶೂದ್ರ ವಿಕ್ರ-ಮಾದಿತ್ಯ ಗಾವುಂಡನಿಗೆ ಹೊದಲಿ ವಿಷಯದಲ್ಲಿ ಬೆದಿರೂರು ಗ್ರಾಮವನ್ನು ದಾನಮಾಡಿದನೆಂದೂ ಹೇಳಿದೆ. ಈ ಶಾಸನದ ಭಾಷೆ, ಲಿಪಿಸ್ವರೂಪಗಳನ್ನು ಪರಿಶೀಲಿಸಿದರೆ ಅದು ಸೃಷ್ಟಿಯೆಂದು ಸ್ಪಷ್ಟವಾಗುತ್ತದೆ. ಇದರಲ್ಲಿ ಬ, ಖ, ನ ಮೊದಲಾದ ಅಕ್ಷರಗಳು ತೀರ ಇತ್ತೀಚಿನವಿರುತ್ತವೆ. ಭಾಷೆಯಂತೂ ಅರ್ವಾಚೀನ ಕಾಲದ್ದಿರುತ್ತದೆ. ಇನ್ನು, ಈ ಶಾಸನದಂತೆ ಶಕ ೫೫೬, ಭೂವಿಕ್ರಮನ ೨೫ನೆಯ ವರ್ಷವಾಗಿದ್ದರೆ ಅವನು ಶಕ ೫೩೧–೩೨ (ಕ್ರಿ. ಶ. ೬೦೯–೬೧೦)ರಲ್ಲಿ ಪಟ್ಟಕ್ಕೆ ಬಂದಿರಬೇಕಾಗುತ್ತದೆ. ದುರ್ವಿನೀತನ ಆಳಿಕೆಯು ಕ್ರಿ. ಶ. ೬೦೫ರಲ್ಲಿ ಮುಗಿಯಿತೆಂದು ಮೇಲೆ ತೋರಿಸಿದ್ದೇವೆ. ಅವನ ಬಳಿಕ ಅವನಿಬ್ಬರು ಮಕ್ಕಳೂ ಶ್ರೀವಿಕ್ರಮನೂ ಕ್ರಿ. ಶ. ೬೦೫–೬೦೯ರ ಮಧ್ಯದಲ್ಲಿ ಆಳಿ ಸತ್ತಿರುವುದು ಅಸಂಭವ.

ಭೂವಿಕ್ರಮನ ತಮ್ಮನಾದ ಶಿವಮಾರನು ಕ್ರಿ. ಶ. ೬೭೯ರಲ್ಲಿ ಪಟ್ಟವೇರಿದನು. ಇವನಿಗೆ 'ಶಿಷ್ಟಪ್ರಿಯ' ಎಂಬ ಬಿರುದು ಇತ್ತು. ನವಕಾಮ ಎಂಬುದು ಇವನ ಹೆಸರೆಂದೂ ಶಿವಮಾರ (ಕೆಲವೆಡೆಯಲ್ಲಿ ಶಿವಕುಮಾರ) ಎಂಬುದು ಪ್ರತಿನಾಮವೆಂದೂ ಬ್ರಿಟಿಶ್ ಮ್ಯೂಜಿಯೆಂ, ಹೊಸೂರು ಮೊದಲಾದ ಶಾಸನಗಳಿಂದ ತಿಳಿಯುತ್ತದೆ. ಇವನಿಗೆ ಅವನಿಮಹೇಂದ್ರ, ಸ್ಥಿರವಿನೀತ, ಲೋಕ-ಧೂರ್ತ, ದೇವರಾಜ ಎಂಬ ಬಿರುದುಗಳಿದ್ದವೆಂದು ಶಾಸನಗಳಲ್ಲಿ ಹೇಳಿದೆ. ಶಿವಮಾರನು 'ಲಕ್ಷ್ಮ್ಯಾಃ ಸ್ವಯಂವೃತಪತಿ' ಎಂದು ವರ್ಣಿಸಲ್ಪಟ್ಟಿರುವುದರಿಂದ

---

[1] *M. A. R.* 1927

ಇವನಿಗೆ ಬಾಧ್ಯತೆಯಿಲ್ಲದಿದ್ದರೂ ಗಂಗಸಿಂಹಾಸನವು ತಾನಾಗಿಯೇ ಇವನ ವಶಕ್ಕೆ ಬಂದಿತೆಂದು ಹೇಳಬಹುದು. ಇದು ಯಾವ ಪರಿಸ್ಥಿತಿಗಳಲ್ಲಿ ಸಂಭವಿಸಿತೆಂಬುದು ತಿಳಿದಿಲ್ಲ. ಭೂವಿಕ್ರಮನಿಗೆ ಮಕ್ಕಳಿರಲಿಲ್ಲವೋ ಏನೋ !

ಶಿವಮಾರನ ಶಾಸನಗಳಲ್ಲಿಯಾಗಲಿ ಗಂಗಮನೆತನದ ಬೇರೆ ಶಾಸನಗಳಲ್ಲಿಯಾಗಲಿ ಶಿವಮಾರನ ಆಳಿಕೆಯಲ್ಲಿ ನಡೆದ ಮಹತ್ವದ ಸಂಗತಿಗಳಾವುವೂ ನಿರ್ದಿಷ್ಟವಾಗಿಲ್ಲ. ಶತ್ರುಗಳನ್ನು ನಿರ್ಮೂಲನಾಶಮಾಡಿ ಯಶಸ್ಸನ್ನು ಸಂಪಾದಿಸಿದ್ದನೆಂದೂ ಪಾಣ್ನಾಟ ಪುಣ್ನಾಟಾದ್ಯನೇಕ ಜನಪದಾಧಿಪತಿಯೆಂದೂ ಕುಳಗಾಣ ಶಾಸನದಲ್ಲಿ ಇವನು ವರ್ಣಿಸಲ್ಪಟ್ಟಿದ್ದಾನೆ. ಇವನ ಮಾಂಡಲಿಕನಾದ ಎಱೆಗಂಗನು ಕೊಂಗಲ್ನಾಡು–೨೦೦೦, ತೊಱೆನಾಡು–೫೦೦, ಮಲೆ–೧೦೦೦ ದೇಶಗಳನ್ನು ಆಳುತ್ತಿದ್ದನು[1]. ಹಳ್ಳೀಗೇರಿ ಶಾಸನದಿಂದ ಪಲ್ಲವ ಯುವರಾಜನ ಮಕ್ಕಳಾದ ಪಲ್ಲವಾಧಿರಾಜ ಜಸು ಮತ್ತು ವೃದ್ಧ ಎಂಬವರು ಶಿವಮಾರನ ಅಧೀನರಾಗಿದ್ದಂತೆ ತಿಳಿಯುತ್ತದೆ. ಇವರು ಯಾವ ಭಾಗದಲ್ಲಿ ಆಳುತ್ತಿದ್ದರೆಂಬುದು ಗೊತ್ತಿಲ್ಲ. ಶಿವಮಾರನಿಗೆ ಪಲ್ಲವೇಳಾರಸ, ತುಪ್ಪುರಾಳರಸರೇ ಮೊದಲಾದ ಚಿಕ್ಕ ಮಾಂಡಲಿಕರೂ ಇದ್ದರು. ಪಲ್ಲವೇಳಾರಸರು ಪೃಥುವೀಕೊಂಗುಣಿ ಮುತ್ತರಸರ ಅನುಮತದಿಂದ ಚೈತ್ಯಾಲಯಕ್ಕೆ ಭೂದಾನಮಾಡಿದನೆಂದು ಕುಳಗಾಣ ಶಾಸನದಲ್ಲಿ ಬರೆದಿದೆ. ಈ ಮುತ್ತರಸನು ಪೃಥವೀಕೊಂಗುಣಿವೃದ್ಧರಾಜ ಶಿವಕುಮಾರ (೧ನೆಯ ಶಿವಕುಮಾರ) ನೆಂದು ಅದೇ ಶಾಸನದ ಸಂಸ್ಕೃತ ಭಾಗದಲ್ಲಿ ವರ್ಣಿಸಲ್ಪಟ್ಟಿದ್ದಾನೆ. ಇದರಿಂದ ಮುತ್ತರಸ ಎಂಬುದು ವೃದ್ಧರಾಜ ಎಂಬ ಶಬ್ದದ ಕನ್ನಡ ಭಾಷಾಂತರವೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಮುತ್ತರಸನ ಹೆಸರು ಬಂದಲ್ಲೆಲ್ಲ ಶ್ರೀಪುರುಷನೇ ನಿರ್ದೇಶಿಸಲ್ಪಟ್ಟಿದ್ದಾನೆಂದು ತಿಳಿಯುವುದು ಸರಿಯಲ್ಲ. ಅವಿನೀತನಿಗೆ ಕೊಂಗುಣಿ ಮಹಾಧಿರಾಜನೆಂದೂ ದುರ್ವಿನೀತ ಮುಷ್ಕರರಿಗೆ ಕೊಂಗುಣಿವೃದ್ಧರಾಜ ಎಂದೂ ಹೆಸರಿತ್ತೆಂದು ನಲ್ಲಾಲ, ಗುಮ್ಮರೆಡ್ಡಿಪುರ, ಉತ್ತನೂರು, ಕುಳಗಾಣ ಮೊದಲಾದ ತಾಮ್ರಶಾಸನಗಳಲ್ಲಿ ಹೇಳಿದೆ. ಶ್ರೀವಿಕ್ರಮ ಭೂವಿಕ್ರಮ, ಶಿವಮಾರರಿಗೆ ಪೃಥಿವೀಕೊಂಗುಣಿ ವೃದ್ಧರಾಜ ಎಂದು ಹೆಸರಿತ್ತು. ಆದುದರಿಂದ ದುರ್ವಿನೀತನಿಂದ ಶ್ರೀಪುರುಷನ ವರೆಗಿದ್ದ ರಾಜರಲ್ಲಿ ಯಾರಿಗಾದರೂ ಮುತ್ತರಸನೆಂಬ ಹೆಸರು ಅನ್ವಯಿಸಬಹುದು.

---

[1] ಬ್ರಿಟಿಶ್ ಮ್ಯೂಜಿಯಂ ಶಾಸನ.

ಶಿವಮಾರನಿಗೆ ಎಷ್ಟು ಜನ ಮಕ್ಕಳಿದ್ದರೆಂಬುದು ಗೊತ್ತಿರದಿದ್ದರೂ ಶ್ರೀ-ಪುರುಷನು ಅವನ ಮೊಮ್ಮಗನೆಂದು ಶಾಸನಗಳು ಹೇಳುವುದರಿಂದ ಅವನಿಗೆ ಒಬ್ಬನಾದರೂ ಮಗನಿದ್ದಿರಬೇಕು. ಅವನು ಶಿವಮಾರನ ಜೀವಮಾನದಲ್ಲಿಯೇ ಸತ್ತಿರಬೇಕು.

**ಶಿವಮಾರನ ಶಾಸನಗಳು :**

೧. ಹಳ್ಳೀಗೇರಿ ತಾಮ್ರಶಾಸನ.[1]— ಶಿವಮಾರನು ತನ್ನ ೩೪ನೆಯ ವರ್ಷವಾದ ಶಕ ೭೩೫ರಲ್ಲಿ ಪಲ್ಲವ ಯುವರಾಜನ ಮಕ್ಕಳಾದ ಪಲ್ಲವಾಧಿರಾಜ ಜಯ ಮತ್ತು ವೃಧ್ಧಿ ಎಂಬ ಮಾಂಡಲಿಕರ ವಿಜ್ಞಾಪನೆಯ ಮೇರೆಗೆ ತಲ-ವನಪುರದಲ್ಲಿದ್ದಾಗ ಭೂದಾನಮಾಡಿದಂತೆ ಬರೆದಿದೆ. ಈ ಶಾಸನದಿಂದ ಶಿವಮಾರನ ೧ನೆಯ ವರ್ಷವು ಕ್ರಿ. ಶ. ೭೭೯ತ್ತೆಂದು ನಿರ್ಧಾರವಾಗು-ತ್ತದೆ.

೨. ಹೆಬ್ಬೂರು ತಾಮ್ರಶಾಸನ.[2]— ಈ ಶಾಸನದಲ್ಲಿ ರಾಜರ ವರ್ಣನಾಂಶವುಳ್ಳ ತಗಡುಗಳು ಮಾತ್ರ ಸಿಕ್ಕಿವೆ. ದಾನಭಾಗವನ್ನೂ ತಿಥಿಯನ್ನೂ ಒಳಕೊಂಡ ಪಟಗಳು ದೊರೆತಿಲ್ಲ.

೩. ಕುಳಗಾಣಶಾಸನ.[3]— ಇದರಲ್ಲಿ ತಿಥಿ ನಿರ್ದೇಶವಿಲ್ಲ. ಭಾಷೆಯೂ ಲಿಪಿ ಸ್ವರೂಪವೂ ಯಾವ ಆಕ್ಷೇಪಗಳಿಗೂ ಅವಕಾಶ ಕೊಡುವಂತಿಲ್ಲ. ಈ ಶಾಸನವು ೫ ತಗಡುಗಳ ಮೇಲೆ ಬರೆಯಲ್ಪಟ್ಟಿದೆ. ೫ನೆಯ ತಗಡಿನ ಮೇಲಿನ ಬರೆಹವು ಮೊದಲಿನ ನಾಲ್ಕು ತಗಡುಗಳ ಮೇಲೆ ಇರುವ ಶಾಸನದ ಭಾಗವಲ್ಲ. ಒಂದೇ ಶಾಸನದ ಎರಡು ಪ್ರತಿಗಳು ಮಾಡಲ್ಪಟ್ಟಿದ್ದು ಒಂದು ಚೈತ್ಯಾಲಯಕ್ಕೂ ಇನ್ನೊಂದು ಅದರ ಸ್ಥಾನಾಚಾರ್ಯರಾದ ಚಂದ್ರಸೇನಾಚಾರ್ಯರಿಗೂ ಕೊಡಲ್ಪಟ್ಟಿರಬೇಕು. ಮೊದಲಿನ ನಾಲ್ಕು ತಗಡುಗಳ ಮೇಲಿದ್ದ ಶಾಸನವು ಚೈತ್ಯಾಲಯಕ್ಕೆ ಕೊಟ್ಟುದು. ಅದು ಸಂಪೂರ್ಣವಾಗಿದ್ದಂತೆ ತೋರುತ್ತದೆ. ಸ್ಥಾನಾಚಾರ್ಯರಿಗೆ ಕೊಟ್ಟ ಪ್ರತಿಯಲ್ಲಿ ಮೊದಲನೆಯ ಭಾಗವು ನಷ್ಟವಾಗಿ ಶ್ರೀವಲ್ಲಭನ ವರ್ಣನಾಂಶದಿಂದ ದಾನವನ್ನು ನಿರ್ದೇಶಿಸುವ ವಾಕ್ಯದ ವರೆಗಿನ ಭಾಗವು

[1] *Ep. Car.* vol. III, p. 107. [2] *Ep. Car.* vol. XII, TM. 23.
[3] *Mysore Arch. Report,* 1927.

ಮಾತ್ರ ಸಿಕ್ಕಿದೆ. ಇದು ಮೇಲಿನ ಶಾಸನಕ್ಕೆ ಸೇರಿದ್ದೆಂಬ ತಪ್ಪು ತಿಳುವಳಿಕೆಯಿಂದ ಯಾರೋ ಇದನ್ನು ಅದಕ್ಕೆ ಜೋಡಿಸಿದ್ದಾರೆ. ಈ ಶಾಸನವನ್ನು ಮೈಸೂರು ಆರ್ಕಿಲಾಜಿಕಲ್ ರಿಪೋರ್ಟಿನಲ್ಲಿ ಪ್ರಸಿದ್ಧಪಡಿಸಿದ ಡಾ. ಶಾಮಾಶಾಸ್ತ್ರಿಗಳು ಈ ತಪ್ಪನ್ನು ಕಂಡುಹಿಡಿದಿಲ್ಲ. ಇದಲ್ಲದೆ ಅವರು ಕೆಲ್ಲಿಪುಸೂರ ಚೇದಿಯಕ್ಕೆ (ಅಂದರೆ ಚೈತ್ಯಕ್ಕೆ) ಈ ದಾನವು ಕೊಡಲ್ಪಟ್ಟದ್ದೆಂದು ಹೇಳದೆ ಚೇದಿಯಕ್ಕೆ ಎಂಬ ಪದವನ್ನು ದತ್ತ ಭೂಮಿಯ ಹೆಸರೆಂದು ತಿಳಿದುಕೊಂಡಿದ್ದಾರೆ; ಇದು ತಪ್ಪು.

ಪೃಥಿವೀಕೊಂಗುಣಿ ಮುತ್ತರಸ (ವೃದ್ಧರಾಜ) ನಾದ ಶಿವಮಾರನು ಪೃಥಿವಿಯನ್ನು ಪರಿಪಾಲಿಸುತ್ತಿದ್ದಾಗ ಅವನ ಅನುಮತದಿಂದ ಪಲ್ಲವೇಳಾರಸರೇ ಮೊದಲಾದ ಕೆಲಜನರು ಕೊಡಗುಂನ್ನಾಡ (ಅಥವಾ ಕೊಡಗೂರ ವಿಷಯದ) ಕೆಲ್ಲಿಪುಸೂರು ಗ್ರಾಮದಲ್ಲಿದ್ದ ಚೈತ್ಯಾಲಯಕ್ಕೆ ಭೂದಾನ ಮಾಡಿದರೆಂದು ಈ ಶಾಸನದಲ್ಲಿ ಬರೆದಿದೆ. ಶ್ರೀವಲ್ಲಭೇ **ಸಕಲ ಪಾಣ್ಣಾಟ ಪುಣ್ಣಾಟಾದ್ಯನೇಕಜನಪದಾಧಿಪತೌ** ಮನೋವಿನೀತಸ್ಯ ಭ್ರಾತಾ ಶಿವಕುಮಾರ ಶ್ರೀಮತ್ಪೃಥಿವೀ ಕೊಂಗುಣಿವೃದ್ಧರಾಜಃ . . . . ಪೃಥಿವೀಂ ಪರಿಪಾಲಯತಿ' ಎಂದು ಇದರಲ್ಲಿದ್ದ ವರ್ಣನೆಯಲ್ಲಿ 'ಶ್ರೀವಲ್ಲಭ', 'ಅಧಿಪತಿ' ಪದಗಳು ಷಷ್ಠೀವಿಭಕ್ತಿಗೆ ಬದಲು ಸಪ್ತಮೀ ವಿಭಕ್ತಿಯಲ್ಲಿದ್ದುದು ಸ್ಖಲಿತವೆಂದು ತೋರುತ್ತದೆ.

ದುರ್ವಿನೀತನೇ ಮೊದಲು ಪಾಣ್ಣಾಟ ಪುಣ್ಣಾಟಾಧಿಪತಿಯಾದನೆಂದು ಮೇಲೆ ಹೇಳಿದ್ದೇವೆ. ಶ್ರೀವಿಕ್ರಮನು ಅನೇಕ ಜನಪದಗಳನ್ನು ಗೆದ್ದ ಮೇಲೆ ಅವನ ಮಕ್ಕಳಿಬ್ಬರೂ ಪಾಣ್ಣಾಟಪುಣ್ಣಾಟಾದ್ಯ**ನೇಕ ಜನಪದ**ಗಳಿಗೆ ಅಧಿಪತಿಗಳೆಂದು ಹೇಳಿಕೊಂಡಿರಬಹುದು. ಈ ವಿಭಕ್ತಿವ್ಯತ್ಯಾಸವನ್ನು ಸಂದರ್ಭಕ್ಕೆ ತಕ್ಕಂತೆ ಸರಿಪಡಿಸಿಕೊಳ್ಳಬೇಕು.

೪. ಬ್ರಿಟಿಶ್ ಮ್ಯೂಜಿಯಂ ಶಾಸನ.[1] — ಲಿಪಿಸ್ವರೂಪದ ದೃಷ್ಟಿಯಿಂದ ಈ ಶಾಸನವು ಕೃತಕವೆಂದು ಹೇಳಲಿಕ್ಕಾಗದಿದ್ದರೂ ಭಾಷೆ ಬರೆವಣಿಗೆಗಳಲ್ಲಿ ತಪ್ಪುಗಳು ತುಂಬಿರುವುದರಿಂದ ಇದನ್ನು ನಂಬುವುದು ಯುಕ್ತವಲ್ಲ. ಮತ್ತು ರಾಜರ ವರ್ಣನಾಭಾಗದಲ್ಲಿ ಹಿಂದಿನ ರಾಜರನ್ನು ಮುಂದೆ ಮುಂದಿನ ರಾಜರನ್ನು ಹಿಂದೆ ಹೀಗೆ ವಿಪರೀತ ಕ್ರಮದಿಂದ ಕೊಟ್ಟಿದೆ.

---

[1] *Ind. Ant.* vol. XIV, p. 230.

ಉದಾ: ಮುಷ್ಕರ, ಮಾಧವ, ಹರಿವರ್ಮ್ಮ, ವಿಷ್ಣುಗೋಪ, ಶ್ರೀವಿಕ್ರಮ ಇತ್ಯಾದಿ. ಎಱೆಗಂಗನು ಒಂದು ಹಳ್ಳಿಯನ್ನು ದಾನಮಾಡಿದನೆಂದು ಮಾತ್ರ ಅರ್ಥ ಮಾಡಿಕೊಳ್ಳಬಹುದು. ಈ ಅಶುದ್ಧ ಶಾಸನದಲ್ಲಿ ಬೇರೆ ಯಾವ ಅಂಶಗಳೂ ಹೊರಡುವಂತಿಲ್ಲ. ಎಱೆಗಂಗನು ಶಿವಮಾರನ ಮಾಂಡಲಿಕನೋ ಆ ಪ್ರತಿನಾಮವುಳ್ಳ ಶಿವಮಾರನೋ ಎಂಬುದಾದರೂ ಸ್ಪಷ್ಟವಿಲ್ಲ.

೧ನೆಯ ಶಿವಮಾರನ ತರುವಾಯ ಅವನ ಮೊಮ್ಮಗನಾದ ಶ್ರೀಪುರುಷನು ರಾಜನಾದನು. ವಳ್ಳಿಮಲೆ ಶಿಲಾಶಾಸನದಲ್ಲಿಯೂ ಬೂತುಗನ ಸೂಡಿಯ ಕೃತಕಶಾಸನದಲ್ಲಿಯೂ ಶ್ರೀಪುರುಷನು ಶಿವಮಾರನ ಮಗನೆಂದು ಬರೆದಿದೆ. ಶ್ರೀಪುರುಷನ ನರಸಿಂಹರಾಜಪುರ ಶಾಸನದಲ್ಲಿ[1] ಅವನು ಶ್ರೀವಿಕ್ರಮನ ಮಗನೆಂದು ಹೇಳಿದೆ. ಈ ವಿಧಾನಗಳು ಉಳಿದ ಎಲ್ಲ ಶಾಸನಗಳಿಗೆ ವಿರುದ್ಧವಾಗಿರುವುದರಿಂದ ಅವನ್ನು ತಪ್ಪೆಂದು ಭಾವಿಸಬೇಕು. ಶ್ರೀಪುರುಷನ ೨೫ನೆಯ ವರ್ಷವಾದ ಶಕ ೬೭೨ ( ಕ್ರಿ. ಶ. ೭೫೦ ) ರಲ್ಲಿ ಹುಟ್ಟಿದ ಜಾವಳಿ ಶಾಸನದಿಂದ ಇವನ ಮೊದಲನೆಯ ವರ್ಷವನ್ನು ಕ್ರಿ. ಶ. ೭೨೬ ಎಂದು ನಿರ್ಧರಿಸಬಹುದು. ೫೦ನೆಯ ವರ್ಷವಾದ ಶಕ ೬೯೮ರಲ್ಲಿ ಹೊರಟ ದೇವರಹಳ್ಳಿ ಶಾಸನವು ಈ ನಿರ್ಧಾರಕ್ಕೆ ಬಲಕೊಡುತ್ತದೆ. ಹಲ್ಕೂರು ಶಿಲಾಶಾಸನದಿಂದ[2] ಶ್ರೀಪುರುಷನು ಶಕ ೭೧೦ ಅಂದರೆ ಕ್ರಿ. ಶ. ೭೮೮ರಲ್ಲಿ ರಾಜ್ಯಭಾರ ಮಾಡುತ್ತಿದ್ದನೆಂದೂ ತಿಳಿಯುತ್ತದೆ. ರಾಷ್ಟ್ರಕೂಟ ೩ನೆಯ ಗೋವಿಂದನು ( ಕ್ರಿ. ಶ. ೭೯೩—೮೧೪ ) ಧ್ರುವನಿಂದ ಬಂಧಿಸಲ್ಪಟ್ಟಿದ್ದ ಗಂಗರಾಜನಾದ ಶಿವಮಾರನನ್ನು ಬಿಡುಗಡೆ ಮಾಡಿದನಾದುದರಿಂದ ಶ್ರೀಪುರುಷನ ಮಗನಾದ ಶಿವಮಾರನು ಕ್ರಿ. ಶ. ೭೯೩ ಕ್ಕೆ ಮುಂಚೆಯೇ ಪಟ್ಟಕ್ಕೆ ಬಂದಿರಬೇಕು. ಆದುದರಿಂದ ಕ್ರಿ. ಶ. ೭೮೮ ಟೇ ಬಹುಶಃ ಶ್ರೀಪುರುಷನ ಕಡೆಯ ವರ್ಷವಾಗಿರಬೇಕು.

ಶ್ರೀಪುರುಷನು ದುರ್ಧರವಾದ ಅನೇಕ ಯುದ್ಧಗಳಲ್ಲಿ ಶತ್ರುಗಳ ಗಜಘಟೆಗಳಿಗೆ ಸಿಂಹಪ್ರಾಯನಾಗಿದ್ದುದರಿಂದ ಇವನಿಗೆ ರಾಜಕೇಸರಿ ಎಂಬ ಅನ್ವರ್ಥನಾಮವಿತ್ತು. ಇವನು ಮಹಾ ಪ್ರಬಲನಾದ ಪಲ್ಲವರಾಜನೊಡನೆ ಕಾದಾಡಿದನೆಂದು ತುಮಕೂರು ಜಿಲ್ಲೆಯ ಹಿರೇಗುಂಡಿಗಲ್ಲು, ಬೆಂಗಳೂರು ಜಿಲ್ಲೆಯ ಹೊಸಕೋಟೆಗಳಲ್ಲಿದ್ದ ವೀರಗಲ್ಲುಗಳಿಂದ[3] ಸ್ಪಷ್ಟವಾಗುತ್ತದೆ. ಹಿರೇಗುಂಡಿಗಲ್ಲಿನ ವೀರಗಲ್ಲಿನಲ್ಲಿ ಶ್ರೀವಲ್ಲವನು ರಾಜ್ಯಗೆಯ್ಯುತ್ತಿದ್ದಾಗ ಸಿಯಗೆಲ್ಲನು ಕೆಸುಮಣ್ಣು

---

[1] *M. A. R.* 1920. [2] *M. A. R.* 1918.

[3] *M.A.R.* 1911., *Ep. Car.* vol. IX, Hoskote 21, 22,36,55,86.

ನಾಡನ್ನು ಆಳುತ್ತಿರಲು ಪೆಪ್ಪೀಳಸಲ್ಲಕ್ಕಳ್ ಎಂಬ ವೀರನು ಕಾಡುವಟ್ಟಿಯೊಡನೆ ಕಾದಿ ಮಡಿದನೆಂದು ಹೇಳಿದೆ. ಹೊಸಕೋಟೆಯ ವೀರಗಲ್ಲುಗಳಲ್ಲಿ ಕೊಂಗುಣಿ ಮುತ್ತರಸರ ಬೆಸದಿಂದ ಶ್ರೀಯಪಲ್ಲರಸನು ಕಾಡುವೆಟ್ಟಿಯ ದಂಡನ್ನು ಕೊವ-ಳಾಲದಲ್ಲಿ ಇರಿದು ಮಡಿದನೆಂದು ಹೇಳಿದೆ. ಹಿರೇಗುಂಡಿಗಲ್ಲಿನ ವೀರಗಲ್ಲು ಇದೇ ಯುದ್ಧದಲ್ಲಿ ಮಡಿದ ಒಬ್ಬ ಬಂಟನ ಸ್ಮಾರಕವೋ ಹಿರೇಗುಂಡಿಗಲ್ಲಿನ ಹತ್ತಿರ ಇನ್ನೊಂದು ಕಾಳಗವಾಗಿ ಅಲ್ಲಿ ಸತ್ತ ವೀರನ ಸ್ಮಾರಕವೋ ಹೇಳಲಿಕ್ಕಾಗದು. ಪಲ್ಲವರು ಗಂಗರಾಜ್ಯದಲ್ಲಿ ಮುಖ್ಯಪಟ್ಟಣವಾಗಿದ್ದ ಕೊವಳಾಲ (ಕೊಲಾರ)ದ ವರೆಗೆ ದಂಡೆತ್ತಿ ಹೋಗಿದ್ದರೆಂದು ಸ್ಪಷ್ಟವಾಗುತ್ತದೆ. ಆದರೆ ಶ್ರೀಪುರುಷನ ಆಳಿಕೆಯ ಕಡೆಯ ವರೆಗೂ ತುಮಕೂರು ಕೋಲಾರ ಜಿಲ್ಲೆಗಳು ಗಂಗರ ವಶದಲ್ಲಿಯೇ ಇದ್ದುದರಿಂದ ದಂಡೆತ್ತಿ ಬಂದಿದ್ದ ಪಲ್ಲವರು ಹಿಂದಿರುಗಿ ಹೋದ-ರೆಂದು ಹೇಳಬೇಕಾಗುತ್ತದೆ. ಕ್ರಿ. ಶ. ೬೯೬ ರಿಂದ ೭೬೧ ರವರೆಗೆ ಆಳಿದ ಪಲ್ಲವ ರಾಜನಾದ ನಂದಿವರ್ಮ್ಮ ಪಲ್ಲವಮಲ್ಲನ ೫೮ನೆಯ ವರ್ಷದ ತಂಡಾಂತೋಟ್ಟಂದ ತಾಮ್ರಲಿಪಿಯಲ್ಲಿ[1] ಅವನು ಉಗ್ರೋದಯವೆಂಬ ರತ್ನದಿಂದ ಖಚಿತವಾದ ಕಂಠಾಭರಣವನ್ನು ಗಂಗರಾಜನಿಂದ ಕಿತ್ತುಕೊಂಡನೆಂದು ಹೇಳಿದೆ. ಇದರಿಂದ ಗಂಗರಿಗೂ ಪಲ್ಲವರಿಗೂ ತುಮುಲವಾದ ಯುದ್ಧವಾಯಿತೆಂದೂ ಶ್ರೀಪುರುಷ ನೊಡನೆ ಹೋರಾಡಿದ ಪಲ್ಲವನು ನಂದಿವರ್ಮ್ಮ ಪಲ್ಲವಮಲ್ಲನೆಂದೂ ಹೇಳ-ಬಹುದು. ಮತ್ತು ಈ ಯುದ್ಧವು ಕ್ರಿ. ಶ. ೭೫೪ ( ತಂಡಾಂತೋಟ್ಟಂಶಾಸನದ ಕಾಲ )ಕ್ಕಿಂತ ಮೊದಲು ಸಂಭವಿಸಿರಬೇಕು. ಗಂಗರ ಪ್ರಭುವಾದ ಚಳುಕ್ಯ ೨ನೆಯ ವಿಕ್ರಮಾದಿತ್ಯನು (೭೩೩–೭೪೬) ತುಂಡಾಕ ವಿಷಯದಲ್ಲಿ ನಂದಿವರ್ಮ್ಮ ಪಲ್ಲವಮಲ್ಲನನ್ನು ಸೋಲಿಸಿದನೆಂದು ಅವನ ಶಾಸನಗಳಿಂದ ತಿಳಿಯುವುದರಿಂದ ಚಳುಕ್ಯಪಲ್ಲವರ ನಡುವೆ ಆದ ಯುದ್ಧದಲ್ಲಿ ಗಂಗರು ಚಳುಕ್ಯಸಾರ್ವಭೌಮನ ಪಕ್ಷವನ್ನು ಹಿಡಿದು ಹೋರಾಡಿರಬಹುದು. ಅಂದರೆ ಗಂಗರಾಜನಿಗೂ ಪಲ್ಲವ-ನಿಗೂ ನಡೆದ ಯುದ್ಧವು ವಿಕ್ರಮಾದಿತ್ಯನು ನಂದಿವರ್ಮ್ಮನ ಮೇಲೆ ಹೂಡಿದ್ದ ಸಮರದ ಒಂದು ಪ್ರಸಂಗವಾಗಿರಬಹುದು.[2]

---

[1] S. I. I. Vol. II.

[2] ಶ್ರೀಪುರುಷನು ವಿಕ್ರಮಾದಿತ್ಯನಿಗೆ ಪಲ್ಲವಯುದ್ಧದಲ್ಲಿ ಸಹಾಯಮಾಡಿದುದು ಎಲ್ಲಿಯೂ ತಿಳಿದಿಲ್ಲ. ಅಲ್ಲದೆ ವಿಕ್ರಮಾದಿತ್ಯನು ತುಂಡಾಕ ವಿಷಯದ ಮೇಲೆ ಹೋದಾಗ ಎದುರಿಸಬಂದ ನಂದಿವರ್ಮ್ಮನನ್ನು ಸೋಲಿಸಿದನೆಂಬುದೂ ಗಂಗಕಾಡುವೆಟ್ಟಿಯರ ಯುದ್ಧವು ಕೊವಳಾಲದಲ್ಲಿ ನಡೆಯಿತೆಂಬುದೂ ಗೊತ್ತಿವೆ. ಒಮ್ಮೆ ನಂದಿವರ್ಮ್ಮನು ಚಳುಕ್ಯನಿಂದ ತನ್ನ ರಾಜ್ಯದಲ್ಲಿಯೇ ಸೋತನೆಂದೂ ಮತ್ತೊಮ್ಮೆ ತಾನೇ ಗಂಗರಾಜ್ಯದ ಮೇಲೆ ದಾಳಿಯಿಟ್ಟಿದ್ದನೆಂದೂ ಹೇಳಬೇಕಾಗುತ್ತದೆ. ಆದುದರಿಂದ ಇವೆರಡೂ ಸಮರ ಗಳು ಬೇರೆ ಬೇರೆ ಕಾಲಗಳಲ್ಲಿ ಜರುಗಿದ್ದರೂ ಜರುಗಿರಬಹುದು.

ಕ್ರಿ. ಶ. ೧೦೭೭ರ ನಗರತಾಮ್ರಶಾಸನದಲ್ಲಿ ಶ್ರೀವಲ್ಲಭ ( ಶ್ರೀಪುರುಷ )ನು ಪಲ್ಲವರನ್ನು ವಿಳರ್ದೆಯಲ್ಲಿ ಸೋಲಿಸಿ ಅವರಿಂದ ಪೆರ್ಮಾನಡಿಯೆಂಬ ಬಿರುದನ್ನು ಕಿತ್ತುಕೊಂಡನೆಂದು ಹೇಳಿದೆ. ಈ ಸಂಗತಿಯು ಗಂಗರ ಆಳ್ವಿಕೆಯು ಇರುವ ವರೆಗಿನ ಅಂದರೆ ೧೦ ನೆಯ ಶತಮಾನದ ವರೆಗಿನ ಲಿಪಿಗಳಲ್ಲೆಲ್ಲಿಯೂ ಉಕ್ತವಾಗಿಲ್ಲ. ೧ ನೆಯ ಶಿವಮಾರನ ಅಣ್ಣನಾದ ಭೂವಿಕ್ರಮನಿಗೆ ಶ್ರೀವಲ್ಲಭ ಎಂಬ ಹೆಸರಿದ್ದುದೂ ಅವನು ಪಲ್ಲವರನ್ನು ವಿಳಂದೆಯ ಭೀಕರವಾದ ಸಂಗ್ರಾಮದಲ್ಲಿ ಸೋಲಿಸಿದುದೂ ಅದೇ ಕಾಲದ ಶಾಸನಗಳಿಂದ ಗೊತ್ತಾಗುತ್ತದೆ. ಭೂವಿಕ್ರಮನ ಈ ಪರಾಕ್ರಮವು ನಗರಶಾಸನದಲ್ಲಿ ಹೇಳಲ್ಪಟ್ಟಿಲ್ಲ. ಆದುದರಿಂದ ೧೧ ನೆಯ ಶತಮಾನದಲ್ಲಿ ಹುಟ್ಟಿದ ಈ ಶಾಸನವು ಭೂವಿಕ್ರಮ ಶ್ರೀಪುರುಷರಿಬ್ಬರಿಗೂ ಶ್ರೀವಲ್ಲಭನೆಂಬ ಹೆಸರಿದ್ದುದರಿಂದ ಭೂವಿಕ್ರಮನ ಪೌರುಷವನ್ನು ಶ್ರೀಪುರುಷನಿಗೆ ತಪ್ಪಿ ಹಚ್ಚಿದಂತೆ ತೋರುತ್ತದೆ. ಪಲ್ಲವರಿಂದ ಪೆರ್ಮಾನಡಿಯೆಂಬ ಬಿರುದನ್ನು ಕಿತ್ತುಕೊಂಡ ರಾಜನು ಭೂವಿಕ್ರಮನೇ ಆಗಿರಬಹುದು. ಆದರೆ ಈ ವಿಷಯವು ಆ ಕಾಲದ ಶಾಸನಗಳಲ್ಲಿ ಉಕ್ತವಾಗಿಲ್ಲ.

ಪಾಂಡ್ಯರಾಜನಾದ ಪರಾಂತಕನೆಡುಂಜಡೈಯನ ೩ ನೆಯ ವರ್ಷದ ವೆಳ್ವಿಕುಡಿ ತಾಮ್ರಶಾಸನದಲ್ಲಿ[1] ( ಕ್ರಿ. ಶ. ೭೭೦ ) ಅವನ ತಂದೆಯಾದ ತೇರ್ಮಾರನು ಗಂಗರಾಜನೊಡನೆ ಸಂಬಂಧವನ್ನು ಬೆಳೆಯಿಸಿದನೆಂದು ಹೇಳಿದೆ. ಅದೇ ಶಾಸನದ ಕೊನೆಗೆ 'ಪೂರ್ವರಾಜರು' ಗಂಗರಾಜನ ಕನ್ಯಾರತ್ನವನ್ನು ಎತ್ತಿಕೊಂಡು ಬಂದು ಕೊಂಗಕೋನ ( ಪಾಂಡ್ಯರಾಜ ) ನಿಗೆ ಕೊಟ್ಟ ಸಮಯದಲ್ಲಿ ಇವರ ಮೇಲೆ ಯುದ್ಧಕ್ಕೆ ಬಂದ ವಲ್ಲಭನನ್ನು ವೆಣ್ಬೈಯಲ್ಲಿ ಸೋಲಿಸಿದಾಗ ಅಜ್ಞಪ್ತಿ ಮಾರಂಗಾರಿಯು ಪೂರ್ವರಾಜರ ಪಕ್ಷದಲ್ಲಿ ಕಾದಿದನೆಂದು ಹೇಳಿದೆ. ಇದರಿಂದ 'ಪೂರ್ವರಾಜ'ರು ಪಾಂಡ್ಯಪಕ್ಷಕ್ಕೆ ಸೇರಿದವರೆಂದೂ ಅವರು ಬಲುಮೆಯಿಂದ ಗಂಗರಾಜನ ಮಗಳನ್ನು ಎತ್ತಿಕೊಂಡು ಬರಲು ವಲ್ಲಭರು ಗಂಗರಾಜನ ಸಹಾಯಕ್ಕೆ ಬಂದು ಯುದ್ಧ ಮಾಡಿದರೆಂದೂ ಹೇಳಬಹುದು. 'ಪೂರ್ವರಾಜ' ರಾರೆಂಬುದು ತಿಳಿದಿಲ್ಲ. ತೇರ್ಮಾರನ ಕಾಲದ ಗಂಗರಾಜನು ಶ್ರೀಪುರುಷನೇ, ವಲ್ಲಭರೆಂದರೆ ಗಂಗರ ಪ್ರಭುಗಳಾಗಿದ್ದ ಬಾದಾಮಿಯ ಚಳುಕ್ಯರು. ವೆಣ್ಬೈ ಯುದ್ಧದಲ್ಲಿ ಪಾಂಡ್ಯನೊಡನೆ ಹೋರಾಡಿದ ವಲ್ಲಭನು ೨ ನೆಯ ವಿಕ್ರಮಾದಿತ್ಯ ಇಲ್ಲವೆ ೨ ನೆಯ ಕೀರ್ತಿವರ್ಮನಾಗಿರಬಹುದು.

---

[1] *Ep. Ind.* Vol. XVII, P. 291.

ರಾಷ್ಟ್ರಕೂಟರು ೧ನೆಯ ಕೃಷ್ಣರಾಜನ ಕಾಲದಲ್ಲಿ ಚಳುಕ್ಯರ ರಾಜ್ಯವನ್ನೆಲ್ಲ ಕೈವಶಮಾಡಿಕೊಂಡಮೇಲೆ ಅವರ ಮುಖ್ಯ ಮಾಂಡಲಿಕರಾಗಿದ್ದ ಗಂಗರನ್ನು ತಮ್ಮ ಅಧೀನರನ್ನಾಗಿ ಮಾಡಿಕೊಳ್ಳಲು ಪ್ರಯತ್ನಮಾಡಿದರು. ಕ್ರಿ. ಶ. ೭೬೮ ರ ತಳೇಗಾಂವ ಶಾಸನದಲ್ಲಿ ೧ನೆಯ ಕೃಷ್ಣನು ಸೈನ್ಯದೊಂದಿಗೆ ಮಾನ್ಯಪುರ (ಮಣ್ಣೆನಗರ) ದಲ್ಲಿ ಬೀಡು ಬಿಟ್ಟಿದ್ದನೆಂದು ಹೇಳಿರುವುದರಿಂದಲೂ ದಂತಿದುರ್ಗ್ಗನು ಗಂಗರಾಜ್ಯದ ಮೇಲೆ ದಂಡೆತ್ತಿ ಹೋದುದು ಎಲ್ಲಿಯೂ ಉಕ್ತವಾಗಿಲ್ಲವಾದುದರಿಂದಲೂ ಕೃಷ್ಣನೇ ಈ ಪ್ರಯತ್ನಕ್ಕೆ ಮೊದಲು ಮಾಡಿದನೆಂದು ಹೇಳಬಹುದು. ತುಮಕೂರು ಜಿಲ್ಲೆಯ ಮದ್ದಗಿರಿ ಶಿಲಾಶಾಸನದಲ್ಲಿ [1] ರಟ್ಟರು ಗಂಗರ ಮೇಲೆ ದಾಳಿಯಿಟ್ಟರೆಂದು ಬರೆದಿದೆ. ಅದೇ ಜಿಲ್ಲೆಯಲ್ಲಿದ್ದ ಹಿರೇಗುಂಡಗಲ್ಲಿನ ವೀರಗಲ್ಲುಗಳಲ್ಲಿ ಶ್ರೀಪುರುಷನು ರಾಜ್ಯವಾಳುತ್ತಿದ್ದಾಗ ಕೆಲ ವೀರರು ಕನ್ನರಸ (೧ನೆಯ ಕೃಷ್ಣ) ನೊಂದಿಗೆ ಪಿಂಚನೂರು ಸಮರಭೂಮಿಯಲ್ಲಿ ಕಾದಿ ಮಡಿದರೆಂದು ಹೇಳಿದೆ. [2] ಅಲ್ಲಿಯ ಬೇರೆ ಕೆಲ ವೀರಗಲ್ಲುಗಳು ಶ್ರೀಪುರುಷನ ಆಳಿಕೆಯಲ್ಲಿ ಶ್ರೀ ರೇವಮ್ಮ ಮೊದಲಾದ ವೀರರು ಬಾಗೆಯೂರಲ್ಲಿ ಬಲ್ಲಹನೊಂದಿಗೆ ಹೋರಾಡಿ ಮಡಿದರೆಂದು ತಿಳಿಸುತ್ತವೆ. ಈ ಬಲ್ಲಹನು ರಾಷ್ಟ್ರಕೂಟ ೧ನೆಯ ಕೃಷ್ಣನಾಗಿರಬೇಕು. ಅಂತು ರಟ್ಟರು ತುಮಕೂರು ಜಿಲ್ಲೆಯ ಮೇಲಿಂದ ಹಾಯ್ದು ಗಂಗರ ರಾಜಧಾನಿಯಾಗಿದ್ದ ಮಣ್ಣೆಯ ವರೆಗೆ ನುಗ್ಗಿದ್ದರೆಂದು ಹೇಳಬಹುದು. ಆದರೆ ಶ್ರೀಪುರುಷನು ಒಳಹೊಕ್ಕಿದ್ದ ರಟ್ಟರನ್ನು ಅತಿ ಸಾಹಸದಿಂದ ಹೊರದೂಡಿರಬೇಕು. ಕ್ರಿ. ಶ. ೭೮೮ರಲ್ಲಿ ಮಣ್ಣೆಯ ಉತ್ತರದಲ್ಲಿದ್ದ ಸೀರಾ ತಾಲೂಕು ಶ್ರೀಪುರುಷನ ರಾಜ್ಯಕ್ಕೆ ಒಳಪಟ್ಟಿದ್ದುದರಿಂದ ರಾಷ್ಟ್ರಕೂಟರಿಗೆ ಗಂಗರಾಜ್ಯವನ್ನಾಕ್ರಮಿಸಲು ಅನುವು ದೊರೆಯಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದರೆ ಚಿತ್ರದುರ್ಗ ಜಿಲ್ಲೆಗೆ ಸೇರಿದ ಚಳ್ಳಕೆರೆ ತಾಲೂಕಿನಲ್ಲಿದ್ದ ಚಿಕ್ಕಮಧುರೆಯಲ್ಲಿ ರಾಷ್ಟ್ರಕೂಟ ೨ನೆಯ ಗೋವಿಂದನ ಶಿಲಾಶಾಸನಗಳು (ಕ್ರಿ. ಶ. ಸು. ೭೭೦) ಸಿಕ್ಕಿರುತ್ತವೆ.[3] ಅದೇ ತಾಲೂಕಿನಲ್ಲಿ ತಳಕಿನ ಹತ್ತರ ದೊಡ್ಡ ಉಳವರ್ತಿಯಲ್ಲಿ ಶ್ರೀಪುರುಷನ ಒಂದು ಶಾಸನವೂ ಇದೆ.[4] ಇದರಲ್ಲಿ ನೊಳಂಬ ಸಿಂಹಪೋತನು ಪೆರ್ಮ್ಮಾನಡಿಯ ಸಾಮಂತನಾಗಿದ್ದನೆಂದು ಹೇಳಿದೆ. ಈ ಕಾಲದ ಪೆರ್ಮ್ಮಾನಡಿಯು ಶ್ರೀಪುರುಷನೇ ಆಗಿರಬೇಕೆಂದು ನೊಳಂಬ ಪ್ರಕರಣದಲ್ಲಿ ತೋರಿಸಿದ್ದೇವೆ. ಚಿಕ್ಕಮಧುರೆಯ ಶಾಸನಗಳಲ್ಲಿ ಸಿಂಹಪೋತನ ಮಗನಾದ ಚಾರುಪೊನ್ನೇರನು ೨ನೆಯ

[1] *Ep. Car.* Vol. XII, Mc. 99.
[2] M. A. R. 1911.
[3] *Ep. Car.* Vol. XI, ಚಳ್ಳಕೆರೆ ೪೩-೪೪
[4] *Ibid*, ಚಳ್ಳಕೆರೆ ೮.

ಗೋವಿಂದನ ಮಾಂಡಲಿಕನಾಗಿ ನೊಳಂಬಳಿಗೆ—೧೦೦೦, ನಿಗ್ಗುಂದನಾಡು—೩೦೦, ಇರಿಗಳ್ವಾಡಿ—೩೦೦, ಗಂಗವೂರ—೩೦, ನೆಲ್ಲಗುಂಡಿ—೧೨ ನಾಡು ಗಳನ್ನು ಆಳುತ್ತಿದ್ದನೆಂದು ಬರೆದಿದೆ. ಚಿಕ್ಕಮಧುರೆಯು ದೊಡ್ಡ ಉಳವತ್ತಿಯ ದಕ್ಷಿಣಕ್ಕಿರುವುದರಿಂದ ಮೊದಲು ಗಂಗರ ವಶದಲ್ಲಿದ್ದ ಚಳ್ಳಕೆರೆ ತಾಲೂಕಿನ ಈ ಭಾಗಗಳನ್ನು ೧ನೆಯ ಕೃಷ್ಣನು ಪುಣ್ಣೆಯ ಮುತ್ತಿಗೆಯಲ್ಲಿ ಆಕ್ರಮಿಸಿರಬೇಕು.

ಮುಳ್ಬಾಗಿಲ ತಾಲೂಕಿನ ಒಂದು ಶಿಲಾಶಾಸನದಲ್ಲಿ[1] ಶ್ರೀಪುರುಷನ ಮಗನಾದ ದುಗ್ಗಮಾರ ಎಱೆಯಪ್ಪನು ಕೊವಳಾಲನಾಡು ಮೂನ್ನೂರು ಗಂಗಱು ಸಾಸಿರ ಪ್ರಾಂತಗಳನ್ನು ಆಳುತ್ತಿದ್ದಾಗ ಗಂಗ ಸೈನ್ಯವು ಕಂಪಿಲಿಯ ಮೇಲೆ ಹೋಗಿರಲು ಅಲ್ಲಿ ಪಾಂಡಪನೆಂಬವನು ಸತ್ತನೆಂದು ಬರೆದಿದೆ. ಈ ಕಂಪಿಲಿಯು ಬಳ್ಳಾರಿ ಜಿಲ್ಲೆಯಲ್ಲಿ ಹಂಪಿಯ ಹತ್ತಿರಿರುವ ಕಂಪಿಲಿ ಎಂದು ರಾಯಿಸರು ಹೇಳಿದ್ದಾರೆ. ಇದು ಆ ಕಾಲಕ್ಕೆ ರಾಷ್ಟ್ರಕೂಟರ ರಾಜ್ಯಕ್ಕೊಳ ಪಟ್ಟಿತ್ತಾದುದರಿಂದ ಶ್ರೀಪುರುಷನ ದಂಡು ರಟ್ಟರಮೇಲೆ ಹೋಗಿತ್ತೆಂದು ಹೇಳಬೇಕಾಗುತ್ತದೆ. ಮಣ್ಣೆಯವರೆಗೆ ಬಂದಿದ್ದ ರಟ್ಟರನ್ನು ಅಟ್ಟಿಕೊಂಡು ಗಂಗರು ಕಂಪಿಲಿಗೆ ಹೋಗಿರಬಹುದು. ಈ ಕಂಪಿಲಿಯ ಕಾಳೆಗವು ಯಾವಾಗ ನಡೆಯಿತೆಂದಾಗಲಿ ಅದರಲ್ಲಿ ಯಾರು ಜಯಶಾಲಿಗಳಾದರೆಂದಾಗಲಿ ನಿರ್ಧರಿಸಲು ಆಧಾರಗಳಿಲ್ಲ. ಶ್ರೀಪುರುಷನ ೫೦ನೆಯ ವರ್ಷದ ದೇವರಹಳ್ಳಿ ತಾಮ್ರಶಾಸನ ದಲ್ಲಿ (ಕ್ರಿ. ಶ. ೭೭೬) ದತ್ತವಾದ ಗ್ರಾಮವು ನಿಗ್ಗುಂದನಾಡಿಗೆ ಸೇರಿತ್ತೆಂದು ಬರೆದಿರುವುದರಿಂದ ಇಷ್ಟರಲ್ಲಿ ಈ ನಾಡು ರಾಷ್ಟ್ರಕೂಟರ ಕೈಬಿಟ್ಟು ಗಂಗರ ವಶಕ್ಕೆ ಬಂದಿರಬೇಕು. ೯ನೆಯ ಶತಮಾನದ ಆದಿಯಲ್ಲಿ ನೊಳಂಬರು ಗಂಗರ ಸಾಮಂತರಾಗಿದ್ದರೆಂದು ಶಾಸನಗಳಿಂದ ಗೊತ್ತಾಗುವುದರಿಂದ ಸ್ವಲ್ಪಕಾಲ ರಾಷ್ಟ್ರಕೂಟರ ಪ್ರಭುತ್ವವನ್ನು ಒಪ್ಪಿಕೊಂಡಿದ್ದ ನೊಳಂಬರು ೨ನೆಯ ಗೋವಿಂದನ ತರುವಾಯದಲ್ಲಿ ಅಥವಾ ಗೋವಿಂದ ಧ್ರುವರಾಜರಿಗೆ ರಾಷ್ಟ್ರ ಕೂಟ ಪಟ್ಟಕ್ಕಾಗಿ ನಡೆದ ಕಲಹದ ಸಮಯದಲ್ಲಿ ಮೊದಲಿನಿಂದಲೂ ತಮ್ಮ ಮನೆತನದ ಅಧಿಪತಿಗಳಾಗಿದ್ದ ಗಂಗರ ಪಕ್ಷವನ್ನು ಸೇರಿದಂತೆ ತೋರುತ್ತದೆ.

ಶ್ರೀಪುರುಷನ ೧ನೆಯ ವರ್ಷದ ತಳಕಾಡು ಶಿಲಾಶಾಸನದಲ್ಲಿ[2] 'ಷಣ್ಣಾ-ವತಿ ಸಹಸ್ರಪ್ರಕೃತಿಗಳು' ಸಾಕ್ಷಿಯಾಗಿ ನಿರ್ದೇಶಿಸಲ್ಪಟ್ಟಿದ್ದಾರೆ. ಇದರಿಂದ

---

[1] *Ep. Car.* Vol. X, ಮುಳ್ಬಾಗಿಲ ೨೫೫.

[2] *Ep. Car.* Vol. III, Tn. 1.

ಅವನು ಪಟ್ಟಕ್ಕೆ ಬರುವಾಗಲೇ ಗಂಗರಾಜ್ಯವು ೯೬೦೦೦ ಸಂಕೇತವುಳ್ಳದ್ದಾಗಿತ್ತೆಂದು ತಿಳಿಯುತ್ತದೆ. ಈ ವಿಸ್ತಾರವಾದ ರಾಜ್ಯವನ್ನು ಶ್ರೀಪುರುಷನು ಅನೇಕ ಮಾಂಡಲಿಕರ ಮುಖವಾಗಿ ಆಳುತ್ತಿದ್ದನು. ಇವನ ರಾಜ್ಯಕ್ಕೆ ಶ್ರೀರಾಜ್ಯವೆಂಬ ಹೆಸರಿತ್ತೆಂದು ಇದೇ ಶಾಸನದಲ್ಲಿ ಬರೆದಿದೆ. ಸಿಂದರಸ, ದೇವ ಸತ್ತಿಅರಸ, ಮನಸಿಜ, ಪರಮಕೂಳರ ಮಗ ಅರಕೇಸಿಗಳು ಶ್ರೀಪುರುಷನ ಕೈಕೆಳಗೆ ಅಧಿಕಾರಿಗಳಾಗಿದ್ದರು. ಶ್ರೀಪುರುಷನ ಮಗನಾದ ದುಗ್ಗಮಾರ ಎಱೆಯಪ್ಪನು ಕೋವಳಾಲನಾಡು-೩೦೦, ಗಂಗ-೬೦೦೦, . . . . ತಯನಾಡು, ಪನ್ನೆನಾಡು, ಬೆಳತ್ತೂರ್ನಾಡು, ವಿಮಲ. . . . ಯುಂ, ಪುಲ್ವರೆನಾಡು-೧೦೦೦, ಬೇಪೋಡು-೧೦೦೦, ಮ. . . . ನಾಡು-೬೦ ಪ್ರಾಂತಗಳನ್ನು ಆಳುತ್ತಿದ್ದನು. ಇವನ ಕೈಕೆಳಗೆ ಶ್ರೀವಲ್ಲವನು ಕೋರೊ-ಕ್ಕೆ ಒಡೆಯನಾಗಿದ್ದನು. ಈ ಶ್ರೀವಲ್ಲವನು ಕಾಡುವೆಟ್ಟಿಯೊಡನೆ ಯುದ್ಧಮಾಡುವಾಗ ಕೊವಳಾಲದಲ್ಲಿ ಮಡಿದನೆಂದು ಹಿಂದೆ ಹೇಳಿದ್ದೇವೆ. ಶ್ರೀಪುರುಷನ ೪೨ನೆಯ ವರ್ಷದ ಶಿಲಾಶಾಸನದಲ್ಲಿ ದುಗ್ಗಮಾರನು ಕುವಳಾಲನಾಡು-೩೦೦, ಗಂಗನಾಡು-೬೦೦೦ ಪ್ರಾಂತಗಳನ್ನಾಳುತ್ತಿದ್ದನೆಂದೂ ಇವನ ಅರಸಿಯಾದ ಕಂಚಿಯಬ್ಬೆಯು ಆಗಳಿಯನ್ನಾಳುತ್ತಿದ್ದಳೆಂದೂ ಬರೆದಿದೆ.[1] ರಾಜನ ೨೮ನೆಯ ವರ್ಷವೆಂದರೆ ಕ್ರಿ. ಶ. ೭೫೪ರಲ್ಲಿ ಶಿವಮಾರನು ಕದಂಬೂರನ್ನಾಳುತ್ತಿದ್ದನು.[2] ಇವನು ಕುಣಿಗಲ್ನಾಡಿಗೆ ಪ್ರಭುವಾಗಿದ್ದನೆಂದು ಮಾಗಡಿ ತಾಲೂಕಿನ ಕುಪ್ಪೆಪಾಳ್ಯ ವೀರಗಲ್ಲಿನಲ್ಲಿ ಬರೆದಿದೆ. ಇಸ್ಲಾಂಪುರ ತಾಮ್ರಶಾಸನದಿಂದ ಶ್ರೀಪುರುಷನ ೩೦ನೆಯ ವರ್ಷದಲ್ಲಿ (ಕ್ರಿ. ಶ. ೭೫೬) ಅವನ ಮಗನಾದ ವಿಜಯಾದಿತ್ಯನು ಆಸಂದಿನಾಡಿಗೆ ಪ್ರಭುವಾಗಿದ್ದನೆಂದು ಗೊತ್ತಾಗುತ್ತದೆ. ಶ್ರೀಪುರುಷನ ಹಿರಿಯ ಮಗನು (ಹೆಸರು ನಷ್ಟವಾಗಿದೆ) . . . . ಮಾಕೆರೆಯನ್ನಾಳುತ್ತಿದ್ದನು. ಮರುಗರೆನಾಡು-೩೦೦, ಕೆಸುಮಣ್ಣುನಾಡುಗಳನ್ನು ಸಿಯಗೆಲ್ಲನೆಂಬ ಅಧಿಕಾರಿಯು ಆಳುತ್ತಿದ್ದನೆಂದು ಹಿರೇಗುಂಡಿಗಲ್ಲಿನ ವೀರಗಲ್ಲುಗಳಲ್ಲಿ ಹೇಳಿದೆ. ನಿರ್ಗ್ಗುಂದನಾಡು-೩೦೦ ಪ್ರಾಂತವನ್ನು ನಿರ್ಗ್ಗುಂದದ ಅರಸನು ಆಳುತ್ತಿದ್ದನೆಂದು ಚೆನ್ನರಾಯಪಟ್ಟಣ ತಾಲೂಕಿನ ಭರಪೂರ ಶಿಲಾಶಾಸನದಲ್ಲಿ ಬರೆದಿದೆ.[3] ದೇವರಹಳ್ಳಿ ತಾಮ್ರಶಾಸನದಲ್ಲಿ ಶ್ರೀಪುರುಷನು ಪೃಥ್ವೀನಿರ್ಗ್ಗುಂದ ರಾಜನ

---

[1] *Ep. Car.* Vol. X, ಮುಳ್ಬಾಗಿಲ ೮೦.

[2] *Ibid*, ಕೋಲಾರ ೬.

[3] *Ep. Car.* Vol. V, ಚನ್ನರಾಯಪಟ್ಟಣ ೨೦೮.

ವಿಜ್ಞಾಪನೆಯ ಮೇರೆಗೆ ನಿರ್ಗ್ಗುಂದ ವಿಷಯದಲ್ಲಿದ್ದ ಪೊನ್ನಳ್ಳಿ ಗ್ರಾಮವನ್ನು ದಾನಮಾಡಿದನೆಂದು ಹೇಳಿದೆ.

ಕೋಲಾರದ ಒಂದು ಶಿಲಾಶಾಸನದಿಂದ[1] ಲೋಕಾದಿತ್ಯ ಎಳ ಅರಸನು ಕದಂಬೂರನ್ನು ಆಳುತ್ತಿದ್ದನೆಂದು ತಿಳಿಯುತ್ತದೆ. ಶಿವಮಾರನು ಕ್ರಿ.ಶ. ೭೫೪ರಲ್ಲಿ ಈ ಪ್ರಾಂತವನ್ನಾಳುತ್ತಿದ್ದುದರಿಂದ ಅದರ ಒಡೆತನವು ಇವನಿಗೆ ಯಾವಾಗ ಬಂದಿತೋ ತಿಳಿಯದು. ಮಹಾಸಾಮಂತ ಕೊಂಗುಣಿಯದಿ ಅರಸನು ಆರಿದಾಳ್ಕೆ-೭೦ಕ್ಕೆ ಅಧಿಪತಿಯಾಗಿದ್ದನೆಂದು ಸಗೂರ ತಾಮ್ರಶಾಸನದಲ್ಲಿ[2] ಹೇಳಿದೆ. ಬಾಣಕುಲದ ದಿಂಡಿಗರಸನು ಕಬ್ಬಿಪ್ಪು-೧೭೦೦ ಪ್ರಾಂತವನ್ನಾಳುತ್ತಿದ್ದನೆಂದು ಕೊವಳವೆಟ್ಟು ತಾಮ್ರಶಾಸನವು ಹೇಳುತ್ತದೆ. ಶ್ರವಣಬೆಳ್ಗೊಳ ಪರ್ವತದ ಒಂದು ಭಾಗಕ್ಕೆ ಕಬ್ಬಿಪ್ಪು ಗಿರಿ ಅಥವಾ ಕಬ್ಬಿಪ್ಪುತೀರ್ಥ ಎಂದು ಹೆಸರಿತ್ತು.[3] ಇದೇ ಭಾಗವು ಸಂಸ್ಕೃತದಲ್ಲಿ ಕಟವಪ್ರ ಎಂದು ಕರೆಯಲ್ಪಡುತ್ತಿತ್ತು. ಇದರಿಂದ ಕಬ್ಬಿಪ್ಪು-೧೭೦೦ ಪ್ರಾಂತವು ಶ್ರವಣಬೆಳ್ಗೊಳದ ಸುತ್ತಲಿನ ದೇಶವಾಗಿರಬೇಕು. ಕುಂದಸತ್ತಿ ಅರಸನು ಪಡಗರೆ-೩೦೦ ನಾಡನ್ನೂ ಘುಂದಗುಂಡೂರ ಸಿಂಗಡಿ ಅರಸನು ಪೂವಗಾಮವನ್ನೂ ಆಳುತ್ತಿದ್ದರೆಂದು ಮಳವಳ್ಳಿ ತಾಲೂಕಿನ ಪೂರಿಗಾವಿಯ ಶಿಲಾಶಾಸನದಲ್ಲಿ ಉಕ್ತವಾಗಿದೆ. ಪಡಗರೆನಾಡು ಮಳವಳ್ಳಿ ತಾಲೂಕನ್ನೊಳಗೊಂಡಿರಬೇಕು.

ಶ್ರೀಪುರುಷನಿಗೆ ವಿಜಯಮಹಾದೇವಿ, ವಿನೆ.....ತ್ತಿ ನಿಮ್ಮಡಿ ಎಂಬ ಇಬ್ಬರು ರಾಣಿಯರಿದ್ದರೆಂದು ಶಾಸನಗಳಿಂದ ತಿಳಿಯುತ್ತದೆ. ವಿಜಯಮಹಾದೇವಿಯು ಚಳುಕ್ಯವಂಶದವಳೆಂದೂ ಈಕೆಯ ಹೊಟ್ಟೆಯಲ್ಲಿ ವಿಜಯಾದಿತ್ಯನು ಹುಟ್ಟಿದನೆಂದೂ ಇಸ್ಲಾಂಪುರ ಶಾಸನದಲ್ಲಿ ಹೇಳಿದೆ. ಈಕೆಯು ಪೂರ್ವಚಳುಕ್ಯ ಮನೆತನದ .... ನೆಯ ವಿಜಯಾದಿತ್ಯನ ಮಗಳಾಗಿರಬಹುದೆಂದು ಡಾ. ಪಾಠಕರು ಅಭಿಪ್ರಾಯಪಟ್ಟಿದ್ದಾರೆ. ವಿನೆ..ತ್ತಿ ನಿಮ್ಮಡಿಯು ಮಟವೆಳ್ಳೂರನ್ನು ಆಳುತ್ತಿದ್ದಳು. ನೊಳಂಬಸಿಂಹಪೋತ್ತರಸನ ಮಗಳಾದ ನೊಳಂಬ ಮಾದವೆಯ ಮಗಳನ್ನು ಪೆರ್ಮಾನಡಿಯು ಮದುವೆಯಾಗಿದ್ದನೆಂದು ಚಿಕ್ಕ ಮಧುರೆಯ ಶಾಸನದಲ್ಲಿ ( ಕ್ರಿ. ಶ. ೭೭೦ ) ಉಕ್ತವಾಗಿದೆ. ಈ ಕಾಲದ ಪೆರ್ಮಾನಡಿಯು ಶ್ರೀಪುರುಷನಲ್ಲದೆ ಬೇರೆ ಯಾರೂ ಅಲ್ಲ. ಇವನಿಗೆ ದುಗ್ಗವಾರ-

[1] ಕೋಲಾರ ೧೧

[2] ಹೆಗ್ಗಡದೇವನ ಕೋಟೆ ೪

[3] ಕ್ಯಾತನಹಳ್ಳಿ ರಾಮಪುರ ಶಾಸನಗಳು ( *Ep. Car.* Vol. III. *Srom* 147-148 ).

ಎಱೆಯಪ್ಪ, ೨ನೆಯ ಶಿವಮಾರ, ವಿಜಯಾದಿತ್ಯ ಎಂದು ಮೂವರು ಮಕ್ಕಳಿದ್ದರು. ಒಬ್ಬ ಮಗಳೂ ಇದ್ದಂತೆ ತೋರುತ್ತದೆ.

ಶ್ರೀಪುರುಷನು ಬಹುಪರಾಕ್ರಮಿಯಾದ ರಾಜನು. ಇವನು ತನ್ನ ದೀರ್ಘವಾದ ಆಳಿಕೆಯಲ್ಲಿ ದಕ್ಷಿಣದಲ್ಲಿ ಪ್ರಬಲರಾಗಿ ಮೆರೆಯುತ್ತಿದ್ದ ಪಾಂಡ್ಯ ಪಲ್ಲವರಾಜರ ಸೊಕ್ಕನ್ನು ಮುರಿದುದಲ್ಲದೆ ಉತ್ತರದಲ್ಲಿ ಚಳುಕ್ಯರಾಜ್ಯವನ್ನಾಕ್ರಮಿಸಿ ಗಂಗಮಂಡಲವನ್ನೂ ಆಕ್ರಮಿಸಬೇಕೆಂದು ದಾಳಿಯಿಟ್ಟಿದ್ದ ರಾಷ್ಟ್ರಕೂಟರೊಡನೆ ಹೋರಾಡಿ ಅವರ ಅಡಿಯಾಳಾಗದೆ ತನ್ನ ಸ್ವತಂತ್ರತೆಯನ್ನು ಕಾದುಕೊಂಡನು. ಇವನಿಗೆ ರಣಭಾಜನ, ರಾಜಕೇಸರಿ, ಭೀಮಕೋಪ, ಲೋಕಧೂರ್ತ ಎಂಬ ಬಿರುದುಗಳಿದ್ದವು. ಪೆರ್ಮಾನಡಿಯೆಂಬ ಬಿರುದನ್ನು ಹಚ್ಚಿಕೊಂಡ ಗಂಗರಾಜರಲ್ಲಿ ಇವನೇ ಮೊದಲನೆಯವನು. ಹಿಂದಿನವರಂತೆ ಇವನೂ ಕೊಂಗುಣಿಮುತ್ತರಸನೆಂದು ಕರೆದುಕೊಳ್ಳುತ್ತಿದ್ದನು. ರೂಪದಲ್ಲಿ ಕಾಮನೂ, ಧನುರ್ಯುದ್ಧಮಾಡುವುದರಲ್ಲಿ ರಾಮಚಂದ್ರನೂ ವಿಕ್ರಮದಲ್ಲಿ ಪರಶುರಾಮನೂ ಐಶ್ವರ್ಯದಲ್ಲಿ ದೇವೇಂದ್ರನೂ, ಪ್ರತಾಪದಲ್ಲಿ ಸೂರ್ಯನೂ ಪ್ರಭುತ್ವದಲ್ಲಿ ಕುಬೇರನೂ ಆಗಿದ್ದು ಪ್ರಜಾಪರಿಪಾಲನಕ್ಕಾಗಿಯೇ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದ್ದನೆಂದು ಕವಿಗಳು ಶ್ರೀಪುರುಷನನ್ನು ಬಣ್ಣಿಸಿದ್ದಾರೆ. ಇವನು ಗಜಶಾಸ್ತ್ರವೆಂಬ ಗ್ರಂಥವನ್ನು ರಚಿಸಿದ್ದನೆಂದು ೧೧ನೆಯ ಶತಮಾನದ ಒಂದು ಶಾಸನದಲ್ಲಿ ಬರೆದಿದೆ.

**ಇವನ ಮುಖ್ಯಶಾಸನಗಳು :—**

೧. ತಲಕಾಡು ಶಿಲಾಶಾಸನ.[1]— ಶ್ರೀಪುರುಷನು ಶ್ರೀರಾಜ್ಯವನ್ನಾಳುತ್ತಿರಲು ಅವನ ೧ನೆಯ ವರ್ಷದಲ್ಲಿ ಕಾರ್ತಿಕ ಪುಣ್ಣಮೆಯ ದಿನ ಸಿಂದರಸರೂ ದೇವಸತ್ತಿ ಅರಸರೂ ಮನಸಿಜರೂ ರಾಜನಿಗೆ ವಿಜ್ಞಾಪನೆಮಾಡಿಕೊಳ್ಳಲು ಅವನು ತಲೆಕಾಡು–೨೫ಕ್ಕೆ ಪಳ್ಳಿಲ್ವಿಟ್ಟುಬಿಟ್ಟರು. ಈ ದಾನಕ್ಕೆ ಪರಮಕೂಳರ ಮಗನಾದ ಅರಕೇಸಿಯೂ ಆಣತ್ತಿಯೂ ೯೬೦೦೦ದ ಪ್ರಕೃತಿಗಳು ಸಾಕ್ಷಿಗಳೂ ಆಗಿದ್ದರು.

೨. ನಂದಿ ತಾಮ್ರಶಾಸನ.[2]— ಪೃಥ್ವೀಕೊಂಗುಣಿವರ್ಮ (ಶ್ರೀಪುರುಷ)ನು ತನ್ನ ೩ನೆಯ ವರ್ಷದ ಫಾಲ್ಗುಣ ಪೌರ್ಣಮಾಸೆ ಸೋಮವಾರ ಪೂರಾ

[1] *Ep. Cor.* Vol. III, Tn. 1. *Mysore and Coorg from Ins.* p. 39.
[2] *M. A. R.* 1914.



(Plate 12) ಮಹಾಕೂಟೇಶ್ವರ ದೇವಾಲಯದ ಮಹಾದ್ವಾರದಲ್ಲಿ ಕೆತ್ತಲ್ಪಟ್ಟ ಪಾಶುಪತ ವಿಗ್ರಹಗಳು

ನಕ್ಷತ್ರದಂದು ಪೇರೂರಪುರದಲ್ಲಿದ್ದಾಗ ಕೊಂಗೇಶ್ವರ ಚೈತ್ಯಾಲಯಕ್ಕೆ ಹೋಗಿರಲು ಹರಿತಾಯನಗೋತ್ರ ಛಾಂದೋಗ್ಯಕಲ್ಪದ ಶಿವಶರ್ಮ್ಮನ ತಮ್ಮನೂ ತುಱಿಗಲೂರ ವಾಸ್ತವ್ಯನೂ ಆದ ಈಶ್ವರಶರ್ಮ್ಮನಿಗೆ ಭೂದಾನವನ್ನು ಮಾಡಿದನು.

೩. ಜಾವಳಿ ತಾಮ್ರಶಾಸನ.—[1] ಶ್ರೀಪುರುಷನು ತನ್ನ ೨೫ನೆಯ ವರ್ಷವಾದ ಶಕ ೬೭೨ರಲ್ಲಿ ವೈಶಾಖ ಶುಕ್ಲ ೧೦ ಉತ್ತರಾಫಾಲ್ಗುಣೀನಕ್ಷತ್ರ ಸೋಮವಾರ ವೃಷಭಸಂಕ್ರಾಂತಿಯ ದಿನ (Monday, 20th April A. D. 750) ಮಣ್ಣೆನಗರದಲ್ಲಿದ್ದಾಗ ವೇದವೇದಾಂಗಪಾರಗರೂ ಧರ್ಮ್ಮಶಾಸ್ತ್ರಸಮುಯಜ್ಞರೂ ಆದ ೧೨೦ ಜನ ಬ್ರಾಹ್ಮಣರಿಗೆ ಸಿನ್ದಾವಿಷಯದಲ್ಲಿ ಮಣಲಿ ಆಳ್ಕೆ-೩೦೦ರ ಪಶ್ಚಿಮಕ್ಕೆ ಹರಿಯುವ ಪೆಣ್ಣೆನದೀ ಪೂರ್ವತಟದಲ್ಲಿದ್ದ ಬೇಲೂರ ಎಂಬ ಗ್ರಾಮವನ್ನು ಮೂಱಿಪ್ಪ (ಮೂರ್ಬಪ್ಪ) ರಾಜ ಬಾಧಾನಿರಾಕರಣಾರ್ಥವಾಗಿ ದಾನಮಾಡಿದನು. ಈ ದಾನದ ಸಾಕ್ಷಿಗಳು ೯೬೦೦೦ ವಿಷಯದ ಪ್ರಕೃತಿಗಳು. ಈ ಶಾಸನವನ್ನು ಚಿತ್ರಕಲಾಭಿಜ್ಞನಾದ ವಿಶ್ವಕರ್ಮಾಚಾರ್ಯನು ಕೊರೆದನು.

೪. ದೇವರಹಳ್ಳಿ ತಾಮ್ರಶಾಸನ.[2]— ಶ್ರೀಪುರುಷನು ತನ್ನ ೫೦ ನೆಯ ವರ್ಷವಾದ ಶಕ ೬೯೮ ರಲ್ಲಿ (A. D. 776) ಮಾನ್ಯಪುರದಲ್ಲಿದ್ದಾಗ ಪೃಥ್ವೀನಿಗ್ಗುಂದರಾಜನ ವಿಜ್ಞಾಪನೆಯ ಮೇರೆಗೆ ಶ್ರೀಪುರದ ಉತ್ತರಭಾಗದಲ್ಲಿ ನಿಗ್ಗುಂದ ರಾಜನ ಹೆಂಡತಿಯಾದ ಕುಂದಾಚ್ಚಿಯಿಂದ ನಿರ್ಮಿತವಾದ ಲೋಕತಿಲಕವೆಂಬ ಜಿನಾಲಯಕ್ಕೆ ನಿಗ್ಗುಂದ ವಿಷಯಕ್ಕೆ ಸೇರಿದ್ದ ಪೊನ್ನಳ್ಳಿಗ್ರಾಮವನ್ನು ದಾನಮಾಡಿದನು. ಪೃಥ್ವೀನಿಗ್ಗುಂದರಾಜನು 'ಬಾಣಕುಲತಿಲಕ' ನಾದ ನಿಗ್ಗುಂದ ಯುವರಾಜ-ದುಂಡುವಿನ ಮಗನು. ಇವನ ಮೂಲ ಹೆಸರು ಪರಮಗುಳ. ಇವನು ಪಲ್ಲವಾಧಿರಾಜನ ಮಗಳ ಹೊಟ್ಟೆಯಲ್ಲಿ ಸಗರಕುಲತಿಲಕನಾದ ಮರುವರ್ಮ್ಮನಿಂದ ಹುಟ್ಟಿದ ಕುಂದಾಚ್ಚಿಯನ್ನು ಮದುವೆಯಾಗಿದ್ದನು. ಮೇಲೆ ಹೇಳಿದ ತಲಕಾಡು ಶಾಸನದಲ್ಲಿ ಬಂದ ಪರಮಕೂಳನು ಇವನೋ ಬೇರೆಯೋ ಹೇಳಲಿಕ್ಕಾಗದು.

---

[1] *Ep. Corn.* Vol. VI, P. 151.

[2] *Ep. Carn.* Vol. IV, p. 233

೫. ಹಲ್ಲೂರ ಶಿಲಾಶಾಸನ.[1]— ಶ್ರೀಪುರುಷನು ಶಕ ೭೧೦, ಪ್ರಭವಸಂವತ್ಸರದಲ್ಲಿ ರಾಜ್ಯವಾಳುತ್ತಿದ್ದಾಗ ಪಲ್ಲೂರಲ್ಲ ಅದೆ ಪರುಕೆರೆಯನ್ನು ಕಟ್ಟಿಸಿ ಅದಕ್ಕೆ ದಾನಮಾಡಿದನು. ಇದರಿಂದ ಶ್ರೀಪುರುಷನು ೬೨ ವರ್ಷಗಳವರೆಗಾದರೂ ರಾಜ್ಯವಾಳಿರಬೇಕೆಂದು ಗೊತ್ತಾಗುತ್ತದೆ.

೬. ದೊಡ್ಡ ಉಳವರ್ತಿ ಶಿಲಾಶಾಸನ.[2]— ಪೆರ್ಮಾನಡಿಗಳು ( ಶ್ರೀಪುರುಷನು ) ನವರಾಜ್ಯಂಗೆಯ್ಯುತ್ತಿದ್ದಾಗ [3] ದುಗ್ಗಮಾರ ಎಱೆಯಪ್ಪನು ಒಮ್ಮೆಗೇ ತಿರುಗಿ ಬೀಳಲು ಕಲಿನೊಳಂಬದಿ ಅರಸನಾದ ಸಿಂಹಪೋತನು ರಾಜನಿಂದ ಆಜ್ಞಾಪ್ತನಾಗಿ ಕಾದುವಾಗ ಒಬ್ಬ ವೀರನು ಸತ್ತನು. ಪೆರ್ಮಾನಡಿಯು ೨ನೆಯ ಶಿವಮಾರನೆಂದೂ ಅವನ ತಮ್ಮನಾದ ದುಗ್ಗಮಾರ ಎಱೆಯಪ್ಪನು ತಿರುಗಿಬಿದ್ದಾಗ ತನ್ನ ಅರಸೊತ್ತಿಗೆಯನ್ನು ಉಳಿಸಿಕೊಳ್ಳಲಿಕ್ಕೆ ಸಿಂಹಪೋತನನ್ನು ಅವನ ಮೇಲೆ ಕಳುಹಿಸಿದನೆಂದೂ ರಾಯುಸರು ಬರೆದಿದ್ದಾರೆ. ಶಿವಮಾರನ ಕಾಲದಲ್ಲಿ ಸಿಂಹಪೋತನು ಬದುಕಿರುವುದು ಅಸಂಭಾವ್ಯವೆಂದು ಸಿದ್ಧಮಾಡಿದ್ದೇವೆ.[4] ಮತ್ತು ಶ್ರೀಪುರುಷನ ಮಕ್ಕಳಲ್ಲಿ ಪಟ್ಟಕ್ಕಾಗಿ ಜಗಳವಾದುದು ಶಾಸನಗಳಿಂದ ತಿಳಿಯಬರುವುದಿಲ್ಲ.

ಶ್ರೀಪುರುಷನ ತರುವಾಯ ಅವನ ಮಗನಾದ ೨ನೆಯ ಶಿವಮಾರನು ಗಂಗಸಿಂಹಾಸನವನ್ನೇರಿದನು. ರಾಷ್ಟ್ರಕೂಟ ಧ್ರುವನು ಇವನನ್ನು ಸೆರೆಯಿಟ್ಟಿದ್ದನಾದುದರಿಂದ [5] ಶಿವಮಾರನು ಧ್ರುವನ ಆಳಿಕೆಯು ಮುಗಿಯುವ ಪೂರ್ವದಲ್ಲಿಯೇ ಅಂದರೆ ಕ್ರಿ. ಶ. ೭೯೩ ಕ್ಕಿಂತ ಮೊದಲು ರಾಜನಾಗಿರಬೇಕು. ಶ್ರೀಪುರುಷನ ಹಲ್ಲೂರು ಶಾಸನದ ಕಾಲವು ಕ್ರಿ. ಶ. ೭೮೮ ಆದುದರಿಂದ ಈ ಎರಡು ವರ್ಷಗಳ ಮಧ್ಯದಲ್ಲಿ ಶಿವಮಾರನ ಪಟ್ಟಬಂಧವಾಗಿರಬೇಕು.

೧ನೆಯ ಕೃಷ್ಣರಾಜನು ಕೈವಶಮಾಡಿಕೊಂಡಿದ್ದ ಗಂಗರಾಜ್ಯದ ಭಾಗಗಳನ್ನು ಪುನಃ ಶ್ರೀಪುರುಷನು ಕಿತ್ತುಕೊಂಡುದರಿಂದಲೂ ತನ್ನ ವಿರುದ್ಧವಾಗಿ

---

[1] *M. A. R.* 1918, p. 42. [2] *Ep. Carn.* Vol. XI, ಚಳ್ಳಕೆರೆ ೮

[3] ‘ನವರಾಜ್ಯಂಗೆಯ್ಯುತ್ತಿದ್ದಾಗ’ ಎಂಬುದರ ಅರ್ಥವು ಸ್ಪಷ್ಟವಿಲ್ಲ. ಮಗನು ದಂಗೆಯೆಬ್ಬಿಸಿದಾಗ ಶ್ರೀಪುರುಷನು ರಾಜ್ಯವಾಳಲು ಮೊದಲುಮಾಡಿದನೆಂದು ಹೇಳುವುದು ಸಮಂಜಸವಲ್ಲ.

[4] ಈ ವಿಷಯದ ಚರ್ಚೆಯನ್ನು ನೊಳಂಬ ಪ್ರಕರಣದಲ್ಲಿ ನೋಡಿರಿ.

[5] *M. A. R.* 1924 ( ಆಲೂರು ತಾಮ್ರಶಾಸನ ), ಗಂಜಾಂ, ಮಣ್ಣೇತಾಮ್ರಶಾಸನಗಳು.

ಗಂಗರಾಜನು ೨ನೆಯ ಗೋವಿಂದನಿಗೆ ಸಹಾಯಮಾಡಿದ್ದುದರಿಂದಲೂ ಧ್ರುವ-ರಾಜನಿಗೆ ಅವನ ಮೇಲೆ ಕ್ರೋಧವಿದ್ದೇ ಇತ್ತು. ಆದರೆ ಶ್ರೀಪುರುಷನು ತಾನಿರುವವರೆಗೆ ರಾಷ್ಟ್ರಕೂಟನಿಗೆ ತನ್ನ ರಾಜ್ಯದಲ್ಲಿ ಕೈಹಾಕಲು ಅವಕಾಶವನ್ನು ಕೊಡಲಿಲ್ಲ. ಪ್ರಬಲನಾದ ಧ್ರುವರಾಜನು ಸಮಯವನ್ನು ನಿರೀಕ್ಷಿಸುತ್ತಿದ್ದು ಶ್ರೀಪುರುಷನ ಮರಣಾನಂತರ ಗಂಗರಾಜ್ಯದ ಮೇಲೆ ದಾಳಿಯಿಟ್ಟನು. ಗಂಗರಾಜನಾದ ೨ನೆಯ ಶಿವಮಾರನು ರಾಷ್ಟ್ರಕೂಟ, ಹೈಹಯ, ಚಳುಕ್ಯ ಭಟರಿಂದ ಕೂಡಿದ ವಲ್ಲಭಸೈನ್ಯದೊಂದಿಗೆ ಬಂದಿದ್ದ ಧೋರನನ್ನು ಮುದು-ಗುಂಡೂರ ಸಮರದಲ್ಲಿ ಸೋಲಿಸಿದನೆಂದು ಅವನ ಮಗನಾದ ಯುವರಾಜ ಮಾರಸಿಂಹನ ಶಾಸನಗಳಲ್ಲಿ[1] ಹೇಳಿರುವುದರಿಂದ ಕ್ರಿ. ಶ. ೭೯೩ಕ್ಕಿಂತ ಮುಂಚೆ ಅಂದರೆ ಶಿವಮಾರನು ಪಟ್ಟಕ್ಕೆ ಬಂದ ಕ್ಷಿಪ್ರದಲ್ಲಿಯೇ ಧ್ರುವರಾಜನು ಗಂಗ-ರಾಜ್ಯದ ಮೇಲೆ ದಂಡೆತ್ತಿ ಬಂದಿರಬೇಕು. ಸಾಂಕೇನಹಳ್ಳಿ, ಹಿರೇಗುಂಡಿಗಲ್ಲುಗಳಲ್ಲಿ ದೊರೆತ ವೀರಗಲ್ಲುಗಳಲ್ಲಿ[2] ಶಿವಮಾರನು ರಾಜ್ಯವಾಳುವಾಗ ಕೆಲ ವೀರರು ಬಲವರ್ಮ್ಮನೊಂದಿಗೆ ಕಾದಿ ಮಡಿದರೆಂದು ಬರೆದಿದೆ. ಮಧುಗಿರಿ ತಾಲೂಕಿನ ಶ್ರವಣಗುಡಿ ಶಾಸನದಲ್ಲಿ[3] ಕೊಂಡಕೊತ್ತರಾ ಶ್ರೀರಾಮನೆಂಬ ವೀರನು ಬಲವರ್ಮ್ಮನ ನರಗಜತುರಗಸಮೂಹವನ್ನು ಹೊಕ್ಕು ಕಾದಿ ವೀರಸ್ವರ್ಗವನ್ನು ಹೊಂದಿದನೆಂದು ಹೇಳಿದೆ. ಈ ಬಲವರ್ಮ್ಮನು ಚಾಕಿರಾಜನ ತಂಗಿಯ ಮಗನಾದ ಚಳುಕ್ಯ ವಿಮಲಾದಿತ್ಯನ[4] ಅಜ್ಜನಾಗಿರಬಹುದು. ಇವನು ಧ್ರುವನ ಪಕ್ಷವನ್ನು ವಹಿಸಿ ಗಂಗರಾಜನ ಮೇಲೆ ಬಂದಿರಬೇಕು. ಹಿರೇಗುಂಡಿಗಲ್ಲಿನ ಹತ್ತಿರ ನಡೆದಿದ್ದ ಕಾಳಗದಲ್ಲಿ ಜಯವನ್ನು ಸಂಪಾದಿಸಿಕೊಂಡು ರಾಷ್ಟ್ರಕೂಟ ಸೈನ್ಯವು ದಕ್ಷಿಣಕ್ಕೆ ತೆರಳಿ ಮುದುಗುಂಡೂರ ವರೆಗೂ ಗಂಗರಾಜ್ಯವನ್ನಾಕ್ರಮಿಸಿರಲು ಶಿವಮಾರನು ಪ್ರಭೂತವಾದ ಬಲದೊಂದಿಗೆ ಬಂದು ಶತ್ರುವನ್ನು ಎದುರಿಸಿದನು. ಈ ಮುದುಗುಂಡೂರ ಯುದ್ಧದಲ್ಲಿ ಶಿವಮಾರನು ತಾನು ಧ್ರುವನನ್ನು ಸೋಲಿಸಿದಂತೆ ಹೇಳಿಕೊಂಡಿದ್ದರೂ 'ಉದಯಮಭಿಲಷನ್ ಸ್ವಂ ನಿವೇಶಂ ವಿವೇಶ' ಎಂದು ಅದೇ ಸಂದರ್ಭದಲ್ಲಿ ಹೇಳಿರುವುದರಿಂದ ಅವನು ಪೂರ್ಣ ಜಯಶಾಲಿಯಾಗದೆ ಹಿಂತಿರುಗಿದಂತೆ ತೋರುತ್ತದೆ. ಶಿವಮಾರನ ದೌರ್ಬಲ್ಯವನ್ನು ಅರಿತು ಬಲಿಷ್ಠನಾದ ಧ್ರುವರಾಜನು ಶತ್ರುವಿದ್ದೆಡೆಗೆ ಸಾಗಿ

---

[1] *M.A.R.* 1924 ( ಆಲೂರು ತಾಮ್ರಶಾಸನ ), ಗಂಜಾಂ, ಮಣ್ಣೇ-ತಾಮ್ರಶಾಸನಗಳು

[2] *M. A. R.* 1911.

[3] ತಿಪಟೂರು ೧೦.

[4] ೩ನೆಯ ಗೋವಿಂದನ ಕಡಬ ತಾಮ್ರಶಾಸನ (*Ep. Ind.* Vol. IV, 340).

ಅವನನ್ನು ಸೆರೆಹಿಡಿದುಕೊಂಡಿರಬೇಕು. ಹೀಗೆ ರಾಜರಿಲ್ಲದ ಗಂಗಮಂಡಲದ ಮೇಲೆ ಧ್ರುವನು ತನ್ನ ಹಿರಿಯ ಮಗನಾದ ರಣಾವಲೋಕ ಕಂಬಯ್ಯನನ್ನು ನೇಮಿಸಿದನು. ಇನೆಯ ಗೋವಿಂದನು ಪಟ್ಟಕ್ಕೆ ಬಂದ ಸ್ವಲ್ಪ ಅವಧಿಯಲ್ಲಿ ಅಂದರೆ ಕ್ರಿ. ಶ. ೭೯೫-೯೬ ರಲ್ಲಿ ಇತ್ತ ಕಂಬಯ್ಯನು ತಾನೇ ರಾಜನಾಗ ಬೇಕೆಂದು ಹವಣಿಸುತ್ತಿದ್ದುದನ್ನು[1] ಕಂಡು ಗೋವಿಂದನು ಶಿವಮಾರನನ್ನು ಸಹಾಯಾಪೇಕ್ಷೆಯಿಂದ ಬಂಧಮುಕ್ತನನ್ನಾಗಿ ಮಾಡಿ ಅವನನ್ನು ತನ್ನ ರಾಜ್ಯಕ್ಕೆ ಕಳುಹಿಸಿದನು (ಸ್ವಂ ದೇಶಂ ಗಮಿತಃ). ಆದರೆ ಬಂದವಿಮೋಚನದ ಕಾಲದಲ್ಲಿ ತಾನು ವಿಧಿಸಿದ್ದ ದಂಡವನ್ನು ಶಿವಮಾರನು ಕೊಡದಿರಲು ರಾಷ್ಟ್ರ-ಕೂಟರಾಜನು ತ್ವರಿತದಲ್ಲಿಯೇ ಅವನನ್ನು ಮತ್ತೆ ಕಾರಾಗೃಹಕ್ಕೆ ಅಟ್ಟಿದನು[2]. ಶಿವಮಾರನ ಮಗನಾದ ಮಾರಸಿಂಹನು ಯುವರಾಜನಾಗಿ ಗಂಗಮಂಡಲ ವನ್ನಾಳುತ್ತಿದ್ದನೆಂದು ಅವನ ಶಾಸನಗಳಲ್ಲಿ ಹೇಳಿರುವುದರಿಂದ ಶಿವಮಾರನು ರಾಜ್ಯಚ್ಯುತನಾದ ಮೇಲೆ ಅವನ ಮಗನನ್ನು ಗೋವಿಂದನು ಗಂಗರಾಜ್ಯದ ಮೇಲೆ ಅಧಿಪತಿಯನ್ನಾಗಿ ಮಾಡಿರಬೇಕು. 'ಆತ್ಮನಃ ಪ್ರವರ್ದ್ಧಮಾನ ಸಂವತ್ಸರ' ವೆಂದು ತನ್ನ ಆಡಳತೆಯ ಕಾಲವನ್ನು ಹೇಳಿಕೊಳ್ಳುವುದರಿಂದ ಯೌವ ರಾಜ್ಯಪದವು ತನ್ನ ತಂದೆಯ ಕಾಲದಲ್ಲಿಯೇ ಬಂದಿದ್ದರೂ ಮಾರಸಿಂಹನು ರಾಜ್ಯಾಭಿಷೇಕವಿಲ್ಲದೆ ಗೋವಿಂದನ ಕೈಕೆಳಗೆ ಗಂಗಮಂಡಲವನ್ನಾಳತೊಡಗಿ ದುದಿನಿಂದ ತನ್ನ ಆಳಿಕೆಯ ಕಾಲವನ್ನು ಎಣಿಸಿದನೆಂದು ತಿಳಿಯಬಹುದು. ಆಲೂರು ತಾಮ್ರಶಾಸನವು ಅವನ ಮೂರನೆಯ ವರ್ಷವಾದ ಶಕ ೭೨೧ ನೆಯ ಶ್ರಾವಣ ಪೌರ್ಣಿಮೆ ಸೋಮವಾರ ಧನಿಷ್ಠಾ ನಕ್ಷತ್ರ, ಸೋಮಗ್ರಹಣದಂದು (ಕ್ರಿ. ಶ. ೭೯೯) ಹುಟ್ಟಿದುದರಿಂದ ಮಾರಸಿಂಹನು ಗಂಗಮಂಡಲಾಧಿಪತ್ಯವನ್ನು ಕ್ರಿ. ಶ. ೭೯೬-೯೭ ರಲ್ಲಿ ವಹಿಸಿರಬೇಕು. ಕ್ರಿ. ಶ. ೮೦೨ ರ ಮಣ್ಣೀತಾಮ್ರ ಶಾಸನದಲ್ಲಿ[3] ಕಂಬಯ್ಯನು ಗಂಗರಾಜ್ಯವನ್ನಾಳುತ್ತಿದ್ದನೆಂದು ಹೇಳಿರುವುದ ರಿಂದ ಇಷ್ಟರಲ್ಲಿಯೇ ಗೋವಿಂದನು ತನ್ನ ಅಣ್ಣನೆಬ್ಬಿಸಿದ್ದ ದಂಗೆಯನ್ನು ಅಡಗಿಸಿ ಶರಣಾಗತನಾದ ಕಂಬಯ್ಯನನ್ನು ಕ್ಷಮಿಸಿ ಅವನಿಗೆ ಗಂಗಮಂಡಲಾಧಿಪತ್ಯ ವನ್ನು ಕೊಟ್ಟಿರಬೇಕು. ಮಾರಸಿಂಹನ ಗತಿಯೇನಾಯಿತೆಂಬುದು ಗೊತ್ತಿಲ್ಲ. ಬದನಗುಪ್ಪೆ ಶಾಸನದ ಕಾಲವು ಕ್ರಿ. ಶ. ೮೦೭ ಆದುದರಿಂದಲೂ[4] ಕ್ರಿ. ಶ. ೮೧೨

---

[1] ರಾಷ್ಟ್ರಕೂಟ ಪ್ರಕರಣದಲ್ಲಿ ಈ ವಿಷಯವನ್ನು ಕುರಿತು ನೋಡಿರಿ.

[2] ರಾಧನಪುರ ತಾಮ್ರಶಾಸನ (*Ep. Ind.* Vol. VI, P. 242).

[3] *Ep. Carn.* Vol. IV, Hg. 93

[4] *M. A. R.* 1927, p. 112 f.

ರಲ್ಲಿ ಚಾಕಿರಾಜನು ಗಂಗಮಂಡಲವನ್ನಾಳುತ್ತಿದ್ದುದರಿಂದಲೂ ಕ್ರಿ. ಶ. ೮೦೭ ಆದ ಮೇಲೆ ಕಂಬಯ್ಯನ ಇತಿವೃತ್ತವೂ ಶಾಸನಗಳಿಂದ ಗೊತ್ತಾಗುವುದಿಲ್ಲ.

ಯುವರಾಜ ಮಾರಸಿಂಹನ ಶಾಸನಗಳಲ್ಲಿ ಶಿವಮಾರನು ಸಿಂಹಾಸನಾಧಿಷ್ಠಿತರಾಗಿದ್ದ ರಾಷ್ಟ್ರಕೂಟ ಗೋವಿಂದ ಪಲ್ಲವ ನಂದಿವರ್ಮ್ಮರಿಂದ ಪಟ್ಟಾಭಿಷಿಕ್ತನಾದನೆಂದು ಬರೆದಿದೆ. ನೆಲಮಂಗಲ ತಾಮ್ರಶಾಸನದ ಕಾಲವು ಶಕ ೭೧೯ (ಕ್ರಿ. ಶ. ೭೯೭) ಎಂದೂ ಆಲೂರು ತಾಮ್ರಶಾಸನದ ಕಾಲವು ಶಕ ೭೨೧ (ಕ್ರಿ. ಶ. ೭೯೯) ಎಂದೂ ನಿರ್ದಿಷ್ಟವಾಗಿದೆ. ಆದರೆ ನಂದಿವರ್ಮ್ಮನು ಕ್ರಿ .ಶ. ೮೧೧–೧೨ ರಲ್ಲಿ ರಾಜನಾದನೆಂದು ಪಲ್ಲವಶಾಸನಗಳ ವಿಮರ್ಶೆಯಿಂದ ನಿರ್ಧರಿಸಲ್ಪಟ್ಟಿರುವುದರಿಂದ ಕ್ರಿ. ಶ. ೭೯೭, ೭೯೯ ರ ಶಾಸನಗಳಲ್ಲಿ ನಂದಿವರ್ಮ್ಮನು ಸಿಂಹಾಸನಾಧಿಷ್ಠಿತನಾಗಿದ್ದನೆಂದು ಹೇಗೆ ಹೇಳಲ್ಪಟ್ಟಿತು ಎಂಬ ಪ್ರಶ್ನೆಯು ಹುಟ್ಟುತ್ತದೆ. ಈ ಶಾಸನಗಳು ಲಿಪಿಸ್ವರೂಪ ಇತ್ಯಾದಿ ಎಲ್ಲ ದೃಷ್ಟಿಗಳಿಂದ ಆಕ್ಷೇಪಾನರ್ಹವಾಗಿವೆ. ಆದುದರಿಂದ ಅವುಗಳಲ್ಲಿ ನಿರ್ದಿಷ್ಟವಾದ ಕಾಲವು ದಾನಮಾಡಿದ ದಿನವೆಂದೂ ಕೆಲ ವರ್ಷಗಳನಂತರ ತಾಮ್ರಪಟ್ಟಿಗಳ ಮೇಲೆ ದಾನಪತ್ರವನ್ನು ಬರೆದರೆಂದೂ ಊಹಿಸಬೇಕಾಗುತ್ತದೆ. ಬರೆಯುವಾಗ, ಮೊದಲು ಜರುಗಿದ್ದ ಶಿವಮಾರನ ಈ ಪಟ್ಟಬಂಧೋತ್ಸವದ ಸಂಗತಿಯನ್ನೂ ಅದರಲ್ಲಿ ಸೇರಿಸಿದಂತೆ ತೋರುತ್ತದೆ. ಶಿವಮಾರನ ಪಟ್ಟಾಭಿಷೇಕೋತ್ಸವವು ಯಾವ ವರ್ಷದಲ್ಲಿ ನಡೆಯಿತೆಂಬುದನ್ನು ನಿಷ್ಕೃಷ್ಟವಾಗಿ ನಿರ್ಧರಿಸಲು ಶಕ್ಯವಿಲ್ಲ. ಆದರೂ ಅದು ಗೋವಿಂದನು ಸಾಯುವ ಮೊದಲು ಅಂದರೆ ಕ್ರಿ. ಶ. ೮೧೪ ಕ್ಕಿಂತ ಪೂರ್ವದಲ್ಲಿ ನಂದಿವರ್ಮನು ರಾಜ್ಯಾಭಿಷಿಕ್ತನಾದ ಮೇಲೆ ಅಂದರೆ ಕ್ರಿ. ಶ. ೮೧೧–೧೨ ರ ಒಳಿಕ ಸಂಭವಿಸಿರಬೇಕು. ಚಾಕಿರಾಜನು ಕ್ರಿ. ಶ. ೮೧೨ ರಲ್ಲಿ ಗಂಗಮಂಡಲವನ್ನಾಳುತ್ತಿದ್ದುದರಿಂದ ಶಿವಮಾರನ ಪಟ್ಟಾಭಿಷೇಕದ ಕಾಲವು ಸುಮಾರು ೮೧೩ ರೆಂದು ಹೇಳಬಹುದು.

ಹಿರೇಗುಂಡಿಗಲ್ಲಿನ ಒಂದು ವೀರಗಲ್ಲಿನಲ್ಲಿ [1] ಶಿವಮಾರಸಿಯುಗೆಲ್ಲರು ವಲ್ಲಹನೊಂದಿಗೆ ಕಾಗಿಮೊಗೆಯೂರಲ್ಲಿ ಕಾದಿ ಸತ್ತರೆಂದು ಬರೆದಿದೆ. ರಾಷ್ಟ್ರಕೂಟ

---

[1] ಇದರಿಂದಲೇ ಇದು ಶ್ರೀಪುರುಷನು ಸತ್ತ ಕೂಡಲೆ ಶಿವಮಾರನು ಸಿಂಹಾಸನವನ್ನೇರಿದಾಗ ನಡೆದುದಲ್ಲವೆಂದು ವ್ಯಕ್ತವಾಗುತ್ತದೆ. ಮತ್ತು 'ಉದಯಮಭಿಲಷನ್ಸ್ವಂ ನಿವೇಶಂ ವಿವೇಶ' ಎಂದು ಆಲೂರು, ನೆಲಮಂಗಲಶಾಸನಗಳಲ್ಲಿ ಉಕ್ತವಾಗಿರುವುದರಿಂದ ಬಂಧಮೋಚನಾನಂತರ ಶಿವಮಾರನು ತಿರುಗಿ ಉದಯವನ್ನು ಹೊಂದಿದಮೇಲೆ (ಅಂದರೆ ಸ್ವಾತಂತ್ರ್ಯಭೇರಿಯನ್ನು ಹೊಡೆಸಿದಮೇಲೆ) ಈ ಶಾಸನಗಳು ಕೊರೆಯಿಸಲ್ಪಟ್ಟವೆಂದು ತರ್ಕಿಸಲಿಕ್ಕೆ ಅವಕಾಶವುಂಟು. ಇಲ್ಲದಿದ್ದರೆ ಮುಂದೆ ಬರುವ 'ಉದಯ'ವನ್ನು ಮೊದಲೇ ಹೇಳುವುದು ಯುಕ್ತವಾಗುವುದಿಲ್ಲ.

ನಿಂದ ಪಟ್ಟಾಭಿಷಿಕ್ತನಾಗಿ ಅವನ ಪ್ರಭುತ್ವವನ್ನು ತಾತ್ಪೂರ್ತಿಕವಾಗಿ ಒಪ್ಪಿಕೊಂಡಿದ್ದರೂ ಶಿವಮಾರನು ಮನಸ್ಸಿನಲ್ಲಿ ಸ್ವತಂತ್ರನಾಗಬೇಕೆಂದು ಹಗಲಿರುಳು ತಳಮಳಿಸುತ್ತಿದ್ದನು. ತನ್ನ ಮನೋರಥವನ್ನು ಪೂರ್ತಿಗೊಳಿಸಲು ಸಮಯವನ್ನು ಕಾಯುತ್ತಿದ್ದನು. ಅವನು ೧ನೆಯ ಅಮೋಘವರ್ಷನಿಗೆ ಅಧೀನನಾಗಿದ್ದನೆಂದು ಕಲ್ಭಾವಿಶಾಸನದಿಂದ [1] ತಿಳಿಯಬರುವುದರಿಂದ ಗೋವಿಂದನಿರುವವರೆಗಂತೂ ಶಿವಮಾರನಿಗೆ ಸ್ವತಂತ್ರನಾಗಲು ಅನುವು ದೊರೆಯಲಿಲ್ಲವೆಂದು ಹೇಳಬೇಕು. ಅಮೋಘವರ್ಷನು ಪಟ್ಟಕ್ಕೆ ಬಂದಕೂಡಲೆ ರಾಜ್ಯದಲ್ಲಿ ಉಂಟಾದ ಗಲಭೆಯ ಸಮಯವನ್ನು ಸಾಧಿಸಿ ಶಿವಮಾರನು ಸ್ವತಂತ್ರನಾಗಬೇಕೆಂದು ಪ್ರಯತ್ನಿಸಿದನು. ಇದನ್ನು ತಿಳಿದು ಅಮೋಘವರ್ಷನು ಗಂಗರಾಜನ ಮದವನ್ನು ಅಡಗಿಸಲಿಕ್ಕೆ ಅವನ ಮೇಲೆ ತನ್ನ ಸೈನ್ಯವನ್ನು ಕಳುಹಿಸಿದನು. ರಾಷ್ಟ್ರಕೂಟಸೈನ್ಯವು ತುಮಕೂರು ಪ್ರಾಂತದಲ್ಲಿಯ ಕಾಗಿಮೊಗೆಯೂರವರೆಗೂ ಸಾಗಿಬಂದಾಗ ಸ್ವಾತಂತ್ರ್ಯವೇ ತನ್ನ ಜೀವಿತದ ಗುರಿಯಾಗಿಟ್ಟುಕೊಂಡಿದ್ದ ಶಿವಮಾರನು ಅದನ್ನು ಎದುರಿಸಿ ಘೋರವಾದ ಯುದ್ಧವನ್ನೆಸಗಿ ವೀರಸ್ವರ್ಗವನ್ನು ಪಡೆದನು. ಈ ಮೇಲಿನ ಕಾರಣಗಳಿಂದ ಶಿವಮಾರನೊಂದಿಗೆ ಕಾದಿದ ವಲ್ಲಭನು ೩ನೆಯ ಗೋವಿಂದನಾಗಿರಬೇಕೆಂದು ನರಸಿಂಹಾಚಾರ್ಯರು ಹೇಳಿದುದು ಸರಿಯಲ್ಲ. ಶಿವಮಾರನು ಇದೇ ಯುದ್ಧದಲ್ಲಿ ತಾನು ಸಾಯುವ ಮೊದಲು ತಮ್ಮನಾದ ವಿಜಯಾದಿತ್ಯನಿಗೆ ರಾಜ್ಯವನ್ನೊಪ್ಪಿಸಿದನು. ಇದರಿಂದ ಶಿವಮಾರನ ಹಿರಿಯ ಮಗನಾದ ಯುವರಾಜ ಮಾರಸಿಂಹನು ತಂದೆಗಿಂತ ಮೊದಲೇ ಸತ್ತಿರಬೇಕೆಂದೂ ಚಿಕ್ಕಮಗನಾದ ೧ನೆಯ ಪೃಥ್ವೀಪತಿಯು ಆಗ ಅಲ್ಪವಯಸ್ಕನಾಗಿದ್ದನೆಂದೂ ಹೇಳಬಹುದು.

ಶಿವಮಾರನ ಆಯುಷ್ಯವು ದುಃಸಹವಾದ ವಿಪತ್ತುಗಳಲ್ಲಿಯೇ ಕಳೆದು ಹೋಯಿತು. ಇವನೆಷ್ಟು ಹೋರಾಡಿದರೂ ಗಂಗರಾಜ್ಯಕ್ಕೆ ಪಾರತಂತ್ರ್ಯವು ಇವನ ಕಾಲಕ್ಕೇ ಮೊದಲು ಒದಗಿತು.

ಶಿವಮಾರನ ಮಾಂಡಲಿಕರಲ್ಲಿ ಕೆಲವರು ಮಾತ್ರ ನಮಗೆ ತಿಳಿದಿದ್ದಾರೆ. ಶ್ರೀಪುರುಷನ ಕೈಕೆಳಗೆ ಮರುಗರೆನಾಡನ್ನಾಳುತ್ತಿದ್ದ ಸಿಯಗೆಲ್ಲನು ಶಿವಮಾರನ ಸಾಮಂತನಾಗಿ ಕಡೆಗೆ ಕಾಗಿಮೊಗೆಯೂರಲ್ಲಿ ತನ್ನ ಒಡೆಯನೊಂದಿಗೆ

---

[1] *Ind. Ant.* Vol. XVIII, p. 311.

ಮಡಿದನು.[1] ತಳಕಾಡಿನ ಹತ್ತಿರ ವಿಜಯಾಪುರದ ಒಂದು ಶಿಲಾಶಾಸನದಲ್ಲಿ ಕೊಂಗುಣಿ ಮುತ್ತರಸರಾ ( ಮಗ ) ಶಿವಮಾರನು ರಾಜ್ಯವಾಳುವಾಗ ಮಣಲೆ ಅರಸನು ಕೂಂಬಡಿ(? ) ಕಿಟಿಲೆನಾಡನ್ನೂ ಕಳತ್ತೂರಿನ ಒಡದಿಯ ಕಿಱುಪೆಟ್ಟಿಗರ ವನ್ನೂ ಆಳುತ್ತಿದ್ದನೆಂದು ಬರೆದಿದೆ. ವಿಟ್ಟರಸನು ಸಿಂದನಾಡು ೮೦೦೦ ಕ್ಕೆ 'ಎಱೆಕ್ಕಸ'ಗೆಯ್ದು ತಗರೆ ೭೦ ಪ್ರಾಂತವನ್ನು ಆಳುತ್ತಿದ್ದನು. ಇವನ ವಂಶಾ ವಳಿಯು ಹೀಗೆ ಕೊಟ್ಟಿದೆ: ಕೃಷ್ಣ, ಅವನ ಮಗ ರವಿ, ಅವನ ಮಗ ಕಾಮಾಲಯ, ಅವನ ಮಗ ಸೇದವರ್ಮ, ಅವನ ಮಗ 'ಚಾರುಕಾದಂಬರಾಜ್ಯಕ್ಕೆ ಅರ್ಹ' ನಾದ ಮಾಧವ, ಅವನ ಮಗ ವಿಷ್ಣುರಾಜ ( ವಿಟ್ಟರಸ ).

ಶಿವಮಾರನಿಗೆ ಮಾರಸಿಂಹ ಎಱೆಯಪ್ಪ, ೧ ನೆಯ ಪೃಥ್ವೀಪತಿ ಎಂದು ಇಬ್ಬರು ಮಕ್ಕಳಿದ್ದರು. ಮಾರಸಿಂಹನನ್ನು ಶಿವಮಾರನು ಯುವರಾಜನನ್ನಾಗಿ ಮಾಡಿದುದರಿಂದ ಇವರಿಬ್ಬರಲ್ಲಿ ಮಾರಸಿಂಹನೇ ಹಿರಿಯವನಾಗಿರಬೇಕು. ಇವನು ಶಿವಮಾರನು ಸಾಯುವ ಪೂರ್ವದಲ್ಲಿಯೇ ಸತ್ತಿದ್ದನೆಂದು ಮೇಲೆ ಹೇಳಿದ್ದೇವೆ. ಪೃಥ್ವೀಪತಿಯು ಶಿವಮಾರನ ಅಂತ್ಯಕಾಲದಲ್ಲಿ ತೀರ ಚಿಕ್ಕವನಿರಬೇಕು; ಇಲ್ಲದಿ ದ್ದರೆ ಗಂಗರಾಜ್ಯವನ್ನು ಶಿವಮಾರನು ತನ್ನ ತಮ್ಮನಿಗೆ ಕೊಡುತ್ತಿರಲಿಲ್ಲ. ಈ ಪೃಥ್ವೀಪತಿಯು ಮುಂದೆ ಪಲ್ಲವ ೩ ನೆಯ ನಂದಿವರ್ಮ ಮತ್ತು ನೃಪತುಂಗರ ಮಾಂಡಲಿಕನಾಗಿದ್ದುದು ಶಾಸನಗಳಿಂದ ಗೊತ್ತಾಗಿದೆ. ಇವನಿಗೆ ಡಿಂಡಿಕ ಎಂಬ ಹೆಸರಿತ್ತು. ಜೇರಿಗನಾಗದಂತರಲ್ಲಿ ಒಬ್ಬನನ್ನು ಅಮೋಘವರ್ಷನ ಕೈಯಿಂದ ಬಿಡಿಸಿದವನಿವನೇ. ಇವನ ಮೊಮ್ಮಗನಾದ ೨ ನೆಯ ಪೃಥ್ವೀಪತಿಯು ಪಲ್ಲವರಾಜ್ಯವನ್ನಾಕ್ರಮಿಸಿಕೊಂಡ ಚೋಳರಾಜನಾದ ಪರಾಂತಕನ ಮಾಂಡ- ಲಿಕನಾಗಿ ಬಾಣವಾಡಿಯನ್ನಾಳುತ್ತಿದ್ದನು. ಶಿವಮಾರನ ರಾಣಿಯ ಹೆಸರು ಗೊತ್ತಿಲ್ಲ. ಇವನಿಗೆ ವಿಜಯಶಕ್ತಿಯೆಂಬ ಸೂನುವಿದ್ದನೆಂದು ನರಸಿಂಹರಾಜ ಪುರ ಶಾಸನದಲ್ಲಿ ಬರೆದಿದೆ.

ಇದುವರೆಗೆ ದೊರೆತ ಶಿವಮಾರನ ಶಾಸನಗಳಲ್ಲೆಲ್ಲಿಯೂ ಕಾಲವು ನಿರ್ದಿಷ್ಟ ವಾಗಿಲ್ಲ. ಯುವರಾಜ ಮಾರಸಿಂಹನ ತಾಮ್ರಶಾಸನಗಳಲ್ಲಿಯ ದಾನಗಳು ಕ್ರಿ. ಶ. ೭೯೭, ೭೯೮ ರಲ್ಲಿ ಶಿವಮಾರನು ಸೆರೆಮನೆಯಲ್ಲಿದ್ದಾಗ ಮಾಡಲ್ಪಟ್ಟ ವೆಂದು ಮೇಲೆ ಹೇಳಿದ್ದೇವೆ.

---

[1] *M. A. R.* 1910.

[2] ನರಸಿಂಹರಾಜಪುರ ತಾಮ್ರಶಾಸನ.

**ಶಿವಮಾರನ ಶಾಸನಗಳು :**

೧. ನರಸಿಂಹರಾಜಪುರ ತಾಮ್ರಶಾಸನಗಳು.—[1] ಅ. ವಿಟ್ಟರಸನು ಸಿಂದ ನಾಡು–೮೦೦೦ ದ ಎಡೆತನವನ್ನು ಮಾಡಿ ತಗರೆನಾಡು ೭೦ ನ್ನು ಆಳುತ್ತಿದ್ದಾಗ ತೊಳ್ಳಗ್ರಾಮದ ಚೈತ್ಯಾಲಯಕ್ಕೆ ಕರಿಮಾನಿಯನ್ನು ಕೊಟ್ಟನು.

ಇ. ಶಿವಮಾರನ 'ಮಾಮಂಗಳ' ವಿಜಯಶಕ್ತಿ ಅರಸನು ಮೂಟಿ-ವಳ್ಳಿಯ ಚೈತ್ಯಾಲಯಕ್ಕೆ ಕೊಟಿಸುಂಗಿ ಮುಂದೆನೀರಿ ಗ್ರಾಮಗಳ ಭೂಮಿಯನ್ನು ದಾನಮಾಡಿದನು.

೨. ಕಲ್ಭಾವಿ ಶಿಲಾಶಾಸನ.—[2] ಈ ಶಾಸನವು ೧೧ ನೆಯ ಶತಮಾನದ್ದು. ಗಂಗಮಹಾಮಂಡಲೇಶ್ವರ ಕಂಚರಸನು ಕುಮ್ಮುದವಾಡದಲ್ಲಿದ್ದ ಜಿನಾ-ಲಯದ ಅಂತರಿತವಾಗಿದ್ದ ದತ್ತಿಗಳನ್ನು ಪುನರುದ್ಧಾರಮಾಡಿದನು. ಈ ಜಿನಾಲಯವನ್ನು ರಾಷ್ಟ್ರಕೂಟ ೧ ನೆಯ ಅಮೋಘವರ್ಷನ ಪಾದ-ಪದ್ಮೋಪಜೀವಿಯಾಗಿದ್ದ ಶಿವನಾರ ಸೈಗೊಟ್ಟನು ಕಟ್ಟಿಸಿ ಅದಕ್ಕೆ ಕುಮ್ಮುದವಾಡವನ್ನು ದಾನಮಾಡಿದ್ದನೆಂದು ಹೇಳಿದೆ. ಇದರಿಂದ ೨ ನೆಯ ಶಿವಮಾರನು ಅಮೋಘವರ್ಷನ ಮಾಂಡಲಿಕನಾಗಿದ್ದನೆಂದು ಗೊತ್ತಾಗುತ್ತದೆ. ಇಲ್ಲಿ ಉಕ್ತವಾದ ಕುಮ್ಮುದವಾಡವು ಈಗಿನ ಕಲ್ಭಾವಿಯು.

೩. ಹಿರೇಗುಂಡಿಗಲ್ಲಿನ ವೀರಗಲ್ಲು.[3]— ಶಿವಮಾರನೂ ಸಿಯಗೆಲ್ಲನೂ ಕಾಗಿಮೊಗೆಯೂರಲ್ಲಿ ವಲ್ಲಭನೊಂದಿಗೆ ಕಾದಿ ಮಡಿದರು. ಈ ವಲ್ಲಭನು ಅಮೋಘವರ್ಷನೆಂದು ಮೇಲೆ ಹೇಳಿದ್ದೇವೆ.

೧ನೆಯ ರಾಚಮಲ್ಲ ಕ್ರಿ. ಶ. ೮೧೬–

ಶಿವಮಾರನು ಸಾಯುವ ಮೊದಲು ತಮ್ಮನಾದ ವಿಜಯಾದಿತ್ಯನಿಗೆ ರಾಜ್ಯವನ್ನೊಪ್ಪಿಸಲು ಅವನು ಭರತನಂತೆ ಅಣ್ಣನಿಂದುಪಭುಕ್ತವಾದ ರಾಜ್ಯಲಕ್ಷ್ಮಿಯನ್ನು ಭೋಗಿಸುವುದು ಅನುಚಿತವೆಂದು ಎಣಿಸಿದನು. ಇವನ ಮಗನಾದ ರಾಜಮಲ್ಲನ ೧೨ನೆಯ ವರ್ಷವು ಕ್ರಿ. ಶ. ೮೨೮ ಎಂದು ಮಣ್ಣೆಶಾಸನದಿಂದ[4] ತಿಳಿಯುವುದರಿಂದ ಕ್ರಿ. ಶ. ೮೧೬–೧೭ ಅವನ ಮೊದಲನೆಯ ವರ್ಷವಾಗುತ್ತದೆ. ಕೆರೆಗೋಡು

---

[1] *Mysore Arch. Report,* 1920 p.

[2] *Ind. Ant.* Vol. XVIII, p. 311.

[3] *Mysore Arch. Report* 1911.

[4] *M. A. R.* 1910.

ರಂಗಾಪುರ ಶಾಸನದಲ್ಲಿ[1] ತನ್ನ ತಂದೆಯಾದ ರಣವಿಕ್ರಮನ ಪರವಾಗಿ ಕೆಲಕಾಲ ಯುವರಾಜನಾಗಿ ರಾಜ್ಯಭಾರವನ್ನು ವಹಿಸಿದ್ದು ಆಮೇಲೆ ಪಟ್ಟಾಭಿಷೇಕವನ್ನು ಮಾಡಿಕೊಂಡನೆಂದು ಹೇಳಿದೆ. ವಿಜಯಾದಿತ್ಯನಿಗೆ 'ರಣವಿಕ್ರಮ' ಎಂಬ ಬಿರುದು ಇದ್ದುದು ವಳ್ಳಿಮಲೆ ಶಾಸನದಿಂದಲೂ ಗೊತ್ತಾಗಿದೆ. ಇವನು ರಾಜ್ಯವಾಳಲಿಲ್ಲವೆಂದೂ ೨ನೆಯ ಶಿವಮಾರನ ತರುವಾಯದಲ್ಲಿ ರಾಜಮಲ್ಲನೇ ಗಂಗಸಿಂಹಾಸನವನ್ನಲಂಕರಿಸಿದನೆಂದೂ ಶಾಸನಗಳು ಹೇಳುವುದರಿಂದ ಶಿವಮಾರನು ಸತ್ತೊಡನೆಯೇ ರಾಜಮಲ್ಲನು ತಂದೆಯ ರಾಜ್ಯವನ್ನು ಯುವರಾಜನಾಗಿ ವಹಿಸಿಕೊಂಡಂದಿನಿಂದಲೇ ತನ್ನ ಆಳಿಕೆಯ ವರ್ಷವನ್ನೂ ಗಣಿಸಲಾರಂಭಿಸಿದನೆಂದು ಹೇಳಬೇಕು. ಇವನ ಮಗನಾದ ಎಱೆಗಂಗ–ನೀತಿಮಾರ್ಗನು ಕ್ರಿ. ಶ. ೮೫೩ ರಲ್ಲಿ ರಾಜ್ಯವಾಳುತ್ತಿದ್ದುದರಿಂದ[2] ರಾಜಮಲ್ಲನಿಗೆ ಸು. ೨೫ ವರ್ಷಗಳ ಆಳಿಕೆಯನ್ನು ಕೊಟ್ಟರೆ ತಪ್ಪಾಗಲಿಕ್ಕಿಲ್ಲ.

ಕೆರೆಗೋಡು ರಂಗಾಪುರ ಶಾಸನದಲ್ಲಿ 'ಶಿವಮಾರ ಮಹಾರಾಜ ಹಸ್ತ ಕೌಶಲಾಪಾಯ ಪ್ರಚ್ಯುತಾಂ ರಾಷ್ಟ್ರಕೂಟ ಕ್ಷಿತಿಪತಿ ಹೃತಿಮಲಿನ ದುಮುಖಿ (ಮುರ್ಖೀಂ) ಸ್ವಕುಲಯೋಗ್ಯ ಪ್ರಾಜ್ಯಲಕ್ಷ್ಮೀಯುವತಿಂ....ಆಸೀಯ' ಎಂದು ರಾಜಮಲ್ಲನನ್ನು ಕುರಿತು ಬರೆದಿದೆ. ಕೌಶಲವಿಲ್ಲದುದರಿಂದ ಶಿವಮಾರನ ಕೈತಪ್ಪಿ ರಾಷ್ಟ್ರಕೂಟರ ವಶವಾಗಿದ್ದ ಗಂಗರಾಜ್ಯವನ್ನು ರಾಜಮಲ್ಲನು ಸ್ವಾಧೀನಪಡಿಸಿಕೊಂಡನೆಂದು ಗೊತ್ತಾಗುತ್ತದೆ. ಅದೇ ಶಾಸನದಲ್ಲಿ 'ಯಸ್ಮಿನ್ ಬಂಕೇಶಲೇಶಂ ಭುವನ ಗುರುಭರಂ ಸತ್ಯವಾಕ್ಯೋ ದಧಾನೇ' (ಸತ್ಯವಾಕ್ಯ ರಾಜಮಲ್ಲನು ಬಂಕೇಶನ ಕೈಯಲ್ಲಿದ್ದ ರಾಜ್ಯಭಾಗವನ್ನು ಬಿಟ್ಟು ಉಳಿದ ಗಂಗ ರಾಜ್ಯವನ್ನಾಳುತ್ತಿದ್ದಾಗ) ಎಂದು ಬರೆದಿರುವುದರಿಂದ ರಾಜಮಲ್ಲನು ರಾಷ್ಟ್ರಕೂಟರಿಂದ ತನ್ನ ರಾಜ್ಯವನ್ನು ಕಿತ್ತುಕೊಳ್ಳುವಾಗ ಅಮೋಘವರ್ಷನ ಸೇನಾಪತಿಯಾದ ಬಂಕೇಶನ ಕೈಯಲ್ಲಿ ಕೆಲವು ಭಾಗವು ಉಳಿಯಿತೆಂದು ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತ ಕಾಗಿಮೊಗೆಯೂರ ರಣಾಂಗಣದಲ್ಲಿ ಶಿವಮಾರನು ವೀರಸ್ವರ್ಗವನ್ನು ಪಡೆಯಲು ರಾಜಮಲ್ಲನು ಎದೆಗುಂದದೆ ತನ್ನ ದೊಡ್ಡಪ್ಪನು ಹೂಡಿದ್ದ ಸಮರದಲ್ಲಿ ಜಯವನ್ನು ಸಂಪಾದಿಸಿಯೇ ತೀರಬೇಕೆಂಬ ದೃಢನಿಶ್ಚಯದಿಂದ ರಾಷ್ಟ್ರಕೂಟ ಸೈನ್ಯಾಧಿಪತಿಯಾದ ಬಂಕೇಶನೊಡನೆ ಕಾದಿ ದೊಡ್ಡಪ್ಪನ ಮನೋರಥವನ್ನು ಪೂರೈಸಿದನು.

---

[1] *M. A. R.* 1910.

[2] *Madras Epigraphical Report,* 1913, (ಹಿಂದಪುರಶಾಸನ).

ಈ ಸಂದರ್ಭದಲ್ಲಿ ಗಂಗರಾಜ್ಯದ ಯಾವ ಭಾಗವು ರಾಷ್ಟ್ರಕೂಟರ ಕೈಯಲ್ಲಿ ಉಳಿಯಿತೆಂಬುದನ್ನು ಹೇಳಲು ಆಧಾರಗಳಿಲ್ಲ.

ಹೀಗೆ ಪರಾಕ್ರಮದಿಂದ ತನ್ನ ರಾಜ್ಯವನ್ನು ಸ್ಥಿರಪಡಿಸಿಕೊಂಡ ಮೇಲೆ ರಾಜಮಲ್ಲನು ಈಶಾನ್ಯ ದಿಕ್ಕಿನಲ್ಲಿ ಪ್ರಬಲರಾಗುತ್ತಿದ್ದ ನೊಳಂಬರೊಂದಿಗೆ ಸಖ್ಯವನ್ನು ಬೆಳೆಸಿದನು. ಇವನು ತನ್ನ ಮಗಳಾದ ಜಾಯಬ್ಬೆಯನ್ನು ಚಾರುಪೊನ್ನೇರನ ಮಗನಾದ ಪೊಲಲ್ಚೋರ ನೊಳಂಬಾಧಿರಾಜನಿಗೆ ಕೊಟ್ಟು ಮದುವೆಮಾಡಿದನೆಂದು ಬರಗೂರ ಶಾಸನದಿಂದ ತಿಳಿಯುತ್ತದೆ.[1] ಈ ಪೊಲಲ್ಚೋರನು ರಾಜಮಲ್ಲನ ಸಾಮಂತನಾಗಿ ಆಳುತ್ತಿದ್ದನೆಂದು ಆಲ್ಬೂರು ಶಾಸನದಲ್ಲಿ[2] ಹೇಳಿರುವುದರಿಂದ ರಾಷ್ಟ್ರಕೂಟರಿಂದ ರಾಜ್ಯವನ್ನು ಕಿತ್ತುಕೊಳ್ಳುವಾಗ ನೊಳಂಬರು ಗಂಗರ ಅಧೀನರಾಗಿರಬೇಕು.

೧ನೆಯ ರಾಜಮಲ್ಲನಿಗೆ ನೀತಿಮಾರ್ಗ-ಎಱೆಗಂಗನೆಂಬ ಒಬ್ಬ ಮಗನಿದ್ದನು.

**ರಾಜಮಲ್ಲನ ಶಾಸನಗಳು :**

೧. ಮಣ್ಣೆ ತಾಮ್ರ ಶಾಸನ.[3]— ರಾಜಮಲ್ಲನು ಗಂಗರಾಜ್ಯವನ್ನಾಳುತ್ತಿದ್ದಾಗ ಗಂಗಮನೆತನದ ಮಹೇಂದ್ರರಾಜನು ಅರಸನ ಒಪ್ಪಿಗೆಯಿಂದ ಮಾನ್ಯವಿಷಯದಲ್ಲಿದ್ದ ದೊಡ್ಡ ವಾಡಿಯಲ್ಲಿ ಕಿಱ್ತುಬಾಳೆಱತ್ತಿ ಭಟಾರಿಯನ್ನು ಪ್ರತಿಷ್ಠಾಪಿಸಿದನು. ದೇವತೆಯ ಪೂಜೋಪಚಾರಗಳಿಗೋಸ್ಕರ ಕಾಶ್ಯಪಗೋತ್ರದ ನರಸಿಂಹಭಟ್ಟನ ಮಗ ವೈಖಾನಸದೇವಶರ್ಮನಿಗೆ ದೊಡ್ಡ ವಾಡಿಯನ್ನು ಮಹೇಂದ್ರನ ವಿಜ್ಞಾಪನೆಯ ಮೇರೆಗೆ ರಾಜನು ಕೊಟ್ಟನು. ಈ ಶಾಸನದ ಕಾಲವು ರಾಜಮಲ್ಲನ ೧೨ನೆಯ ವರ್ಷವಾದ ಶಕ ೭೫೦ ಫಾಲ್ಗುಣ ಪೌರ್ಣಿಮಾ ಕೃತ್ತಿಕಾ ನಕ್ಷತ್ರ ವ್ಯತೀಪಾತ ಯೋಗ.

ಇದನ್ನು ಬರೆದವನು ಕರುಪೂರಸ್ಥಾನಿಗನಾದ ವಿಶ್ವಕರ್ಮಗೋತ್ರದ ಮಧುರೊವಝು.

---

[1] ಶಿವಮೊಗ್ಗೆ ಜಿಲ್ಲೆಯ ಸೀರಾ ತಾಲೂಕಿಗೆ ಸೇರಿದ ಬರಗೂರ ಶಾಸನ. (SR. 38).

[2] ಅದೇ ಜಿಲ್ಲೆಗೆ ಸೇರಿದ ತಿಪಟೂರು ೪೭ನೆಯ ಶಾಸನ.

[3] *M.A. R.* 1910.

ಈ ಶಾಸನದಲ್ಲಿ ಗಂಗವಂಶಾವಳಿಯು ವಿಚಿತ್ರವಾಗಿ ಕೊಟ್ಟಿದೆ. ಕಲಿಗಂಗ, ಅವನ ಮಗ ದುರ್ವಿನೀತ, ಅವನ ಮಗ ವಿಕ್ರಮಗಂಗ, ಆಮೇಲೆ ರಾಜಮಲ್ಲ. ಈ ಕ್ರಮದಲ್ಲಿ ರಾಜರು ಆಳಿದರೆಂದು ಹೇಳಿ ರಾಜಮಲ್ಲನನ್ನು ವರ್ಣಿಸುತ್ತದೆ. ಕಲಿಗಂಗನು ತಾಯಿಯ ಗರ್ಭದಲ್ಲಿರುವಾಗಲೇ ಭೂಮಿಯು ರಾಜನ್ವತಿಯಾದಳೆಂದೂ ಇವನ ಮಗನು ದುರ್ವಿನೀತನೆಂದೂ ಬರೆದಿರುವುದರಿಂದ ಇವನು ಅವಿನೀತನಿರಲಿಕ್ಕೆ ಬೇಕು. ಉಳಿದ ಗಂಗಶಾಸನಗಳು ಅವಿನೀತನು ತಾಯಿಯ ತೊಡೆಯ ಮೇಲಿನ ಕೂಸಾಗಿದ್ದಾಗ ರಾಜ್ಯಾಭಿಷಿಕ್ತನಾದನೆಂದು ಕೊಡುತ್ತವೆ. ದುರ್ವಿನೀತನ ಮಕ್ಕಳಾದ ಮುಷ್ಕರನಿಗಾಗಲಿ ಪೊಲವೀರನಿಗಾಗಲಿ ವಿಕ್ರಮಗಂಗ ಎಂಬ ಬಿರುದು ಇದ್ದುದು ಎಲ್ಲಿಯೂ ಕಂಡಿಲ್ಲ. ವಿಕ್ರಮಗಂಗನ ತರುವಾಯ ಆಳಿದ ಐದು ರಾಜರ ಹೆಸರನ್ನೆತ್ತದೆ ಒಮ್ಮೆಲೇ ರಾಜಮಲ್ಲನನ್ನು ವರ್ಣಿಸಿದ್ದು ವಿಲಕ್ಷಣವಾಗಿದೆ. ಆದರೆ ಲಿಪಿಯ ಸ್ವರೂಪವು ಈ ಕಾಲಕ್ಕೆ ಸರಿಯಾಗಿರುವುದರಿಂದ ಈ ಶಾಸನವು ಕೃತಕವೆಂದು ಹೇಳಲಿಕ್ಕಾಗದು.

೨. ವಳ್ಳಿಮಲೆ ಶಾಸನ.[1]— ಇದು ಬಂಡೆಗಲ್ಲ ಮೇಲೆ ಗ್ರಂಥಲಿಪಿಯಲ್ಲಿ ಕೊರೆಯಲ್ಪಟ್ಟಿದೆ; ಭಾಷೆ ಮಾತ್ರ ಕನ್ನಡ, ಇದರಲ್ಲಿ ಕಾಲನಿರ್ದೇಶವಿಲ್ಲ. ರಾಜಮಲ್ಲನ ವಂಶಾವಳಿಯನ್ನು ಕೊಡುವಾಗ ಶ್ರೀಪುರುಷನು ೧ನೆಯ ಶಿವಮಾರನ ಮಗನೆಂದು ಬರೆದಿದೆ. ಇದು ತಪ್ಪೆಂಬುದನ್ನು ಹಿಂದೆಯೇ ತಿಳಿಸಿದ್ದೇವೆ. ಈ ಶಾಸನವು ವಿಜಯಾದಿತ್ಯನನ್ನು 'ರಣವಿಕ್ರಮ' ನೆಂದು ಕರೆಯುತ್ತದೆ. ಈ ಬಂಡೆಗಲ್ಲಿದ್ದ ಗುಹೆಯು ರಾಜಮಲ್ಲನಿಂದ ಕೊರೆಯಿಸಲ್ಪಟ್ಟಿತೆಂದು ಬರೆದಿದೆ.

ರಾಜಮಲ್ಲನ ತರುವಾಯದಲ್ಲಿ ನೀತಿಮಾರ್ಗ ಎಱೆಗಂಗನು ಸು. ೮೪೩ರಲ್ಲಿ ಗಂಗಸಿಂಹಾಸನವನ್ನೇರಿದನು. ಇವನ ಮಗನಾದ ೨ನೆಯ ರಾಜಮಲ್ಲನ ಮೊದಲನೆಯ ವರ್ಷವು ಕಿ. ಶ. ೮೭೦ ಆದುದರಿಂದ ಕ್ರಿ. ಶ. ೮೬೯–೭೦ ಇವನ ಕಡೆಯ ವರ್ಷವಾಗಿರಬೇಕು. ಕೋಲಾರ ಜಿಲ್ಲೆಯ ಮುಡಿವಾಳ ಶಾಸನದಲ್ಲಿ[2] ನೀತಿಮಾರ್ಗನ ಮಾಂಡಲಿಕನಾದ ನೊಳಂಬಾಧಿರಾಜನು ಬಾಣರಸನ ಮೇಲೆ ಪೊಂಪಲ್ಲನನ್ನು ಕಳುಹಿಸಿದನೆಂದು ಬರೆದಿದೆ. ಕ್ರಿ. ಶ. ೮೫೩ ರ ಹಿಂದುಪುರ ಶಾಸನದಲ್ಲಿ ನೊಳಂಬಾಧಿರಾಜನು ನೀತಿಮಾರ್ಗ-ಎಱೆಗಂಗನ ಕೈಕೆಳಗೆ ಕಂಚಿಯ ವರೆಗಿದ್ದ ರಾಜ್ಯವನ್ನು ಆಳುತ್ತಿದ್ದನೆಂದು ಬರೆದಿದೆ. ನೊಳಂಬಾಧಿರಾಜನೆಂಬ

---

[1] *Ep. Ind.* Vol. IV, P. 141.

[2] ಕೋಲಾರ ೭೯.

ಬಿರುದು ಪೊಳಲ್ಚೋರನಿಗೆ ಇತ್ತು. ಕ್ರಿ. ಶ. ೮೫೫ ರ ಮಾಂಡ್ಯ ತಾಲೂಕಿನ ತಾಯಲೂರ ಶಾಸನದಿಂದ ಪೊಳಲ್ಚೋರನ ಮಗನಾದ ಮಹೇಂದ್ರನಿಗೂ ನೊಳಂಭಾಧಿರಾಜನೆಂಬ ಬಿರುದು ಇತ್ತೆಂದು ಗೊತ್ತಾಗುತ್ತದೆ.[1] ಆದರೆ ಮಹೇಂದ್ರನು ಕ್ರಿ. ಶ. ಸು. ೮೭೫ ರಲ್ಲಿ ಪಟ್ಟಕ್ಕೆ ಬಂದುದರಿಂದ[2] ಹಿಂದುಪುರ ಶಾಸನದ ನೊಳಂಬಾಧಿರಾಜನು ಪೊಳಲ್ಚೋರನೇ ಆಗಿರಬೇಕು. ಇವನು ಕಂಚಿಯವರೆಗಿದ್ದ ರಾಜ್ಯವನ್ನಾಕ್ರಮಿಸಲು ದಂಡಯಾತ್ರೆ ಮಾಡಿದಾಗ ಹಾದಿಯಲ್ಲಿದ್ದ ಬಾಣರನ್ನು ಸೋಲಿಸಲು ಮುಡಿವಾಳಶಾಸನದಲ್ಲಿ ಹೇಳಿದಂತೆ ಪೊಂಪಲ್ಲನನ್ನು ಕಳುಹಿಸಿರಬಹುದು. ಬಾಣವಿದ್ಯಾಧರನ ಕಾಲದಲ್ಲಿ (ಕ್ರಿ. ಶ. ೮೧೦-೮೫೯) ನೊಳಂಬನು ಪುಲಿನಾಡನ್ನು ಮುತ್ತಿದನೆಂದು ಬೂಡಿದೆಪಲ್ಲಿ ಲಿಪಿಯಲ್ಲಿ ಹೇಳಿದುದು ಈ ಮೇಲಿನ ಅಂಶವನ್ನು ಪುಷ್ಟೀಕರಿಸುತ್ತದೆ.

೨ನೆಯ ರಾಜಮಲ್ಲನ ಕೆರೆಗೋಡು ರಂಗಾಪುರ ಶಾಸನದಲ್ಲಿ ಎಱೆಗಂಗನು ಪಲ್ಲವ ರಾಷ್ಟ್ರಕೂಟ ಕುರುಮಾಗಧ ಮಾಳವ ಚೋಳ ಲಾಳ ಚಳುಕ್ಯ ರಾಜರಿಂದ ಕೂಡಿದ ವಲ್ಲಭಸೈನ್ಯವನ್ನು ಅತಿ ರೌದ್ರವಾದ ರಾಜಾ ಜಿಾಮುಡು ರಣಾಂಗಣದಲ್ಲಿ ಸೋಲಿಸಿದನೆಂದು ಹೇಳಿದೆ. ಅಮೋಘವರ್ಷನ ಕೊನ್ನೂರ ಶಾಸನದಲ್ಲಿ ಬಂಕೇಶನು ಕೈದಾಳ ಮೊದಲಾದ ದುರ್ಗಗಳನ್ನು ಹಸ್ತಗತ ಮಾಡಿಕೊಂಡು ದಕ್ಷಿಣದಲ್ಲಿ ಕಾವೇರೀ ನದಿಯನ್ನು ದಾಟಿ ತಲೆಕಾಡಿನ ವರೆಗೂ ಸಾಗಿ ಗಂಗ ರಾಜನನ್ನು ಓಡಿಸಿದನೆಂದು ಉಕ್ತವಾಗಿದೆ. ಬಂಕೇಶನು ತಲಕಾಡನ್ನು ಮುತ್ತಿದಾಗ ರಾಷ್ಟ್ರಕೂಟ ರಾಜಧಾನಿಯಲ್ಲಿ ಅಂತರ್ಭೇದವಾಗಿ ಎದ್ದ ದಂಗೆಯಲ್ಲಿ ಅಮೋಘವರ್ಷನ ಮಗನು ಸೇರಿದ್ದನೆಂದು ಕೊನ್ನೂರು ಶಾಸನದಿಂದ ತಿಳಿಯುತ್ತದೆ.[3] ಚಿಕ್ಕ ವಯಸ್ಸಿನಲ್ಲಿಯೇ ಪಟ್ಟಕ್ಕೆ ಬಂದ ಅಮೋಘವರ್ಷನಿಗೆ ಬಂಡುಮಾಡುವ ವಯಸ್ಸಿನ ಮಗನು ಸು. ೮೪೦ ಕ್ಕೆ ಮುಂಚೆ ಇದ್ದಿರಲಾರನು. ಬಂಕೇಶನು ತಲವನಪುರದವರೆಗಿದ್ದ ಗಂಗರಾಜ್ಯವನ್ನಾಕ್ರಮಿಸಿ ನೀತಿಮಾರ್ಗ-ರಣವಿಕ್ರಮನನ್ನು ರಾಜಧಾನಿಯಿಂದ ಓಡಿಸಿದನು. ಈ ಕಾಲದಲ್ಲಿ ಗಂಗಮಂಡಲವನ್ನಾಳುತ್ತಿದ್ದ ನೀತಿಮಾರ್ಗ-ರಣವಿಕ್ರಮನು ಎಱೆಗಂಗನೇ. ತಲವನಪುರಾಧೀಶನನ್ನು ಬಂಕೇಶನು ಸೋಲಿಸಿದನೆಂದು ಹೇಳಿರುವುದೂ ರಾಜಾಜಿಾಮುಡು ಸಮರದಲ್ಲಿ ವಲ್ಲಭಸೈನ್ಯವನ್ನು ಎಱೆಗಂಗನು

[1] *M. A. R.* 1910.

[2] ನೊಳಂಬ ಪ್ರಕರಣದಲ್ಲಿ ನೋಡಿರಿ.

ಸೋಲಿಸಿದನೆಂದು ಹೇಳಿರುವುದೂ ಉಭಯಪಕ್ಷಗಳಲ್ಲಿ ಜಯಾಪಜಯಗಳು ಸಮಾನವಾಗಿದ್ದವೆಂಬುದನ್ನು ಮಾತ್ರ ಸೂಚಿಸುತ್ತವೆ. ರಾಷ್ಟ್ರಕೂಟರಿಗೂ ಗಂಗರಿಗೂ ಬೇರೆ ಯುದ್ಧಗಳಾದುದು ಎಲ್ಲಿಯೂ ಹೇಳಿಲ್ಲವಾದುದರಿಂದ ಬಂಕೇಶನ ದಂಡಯಾತ್ರೆಯಲ್ಲಿಯೇ ರಾಜಾರಾಮುಡು ಯುದ್ಧವು ಜರುಗಿತೆಂದು ಗ್ರಹಿಸಿದುದು ಹೆಚ್ಚು ಸಮಂಜಸವು.

೧ನೆಯ ರಾಜಮಲ್ಲನು ತನ್ನ ರಾಜ್ಯವನ್ನು ರಾಷ್ಟ್ರಕೂಟರಿಂದ ಕಿತ್ತು ಕೊಂಡ ಮೇಲೆ ಅಮೋಘವರ್ಷನಿಗೆ ಗಂಗರ ಮೇಲೆ ಸಿಟ್ಟು ಇದ್ದೇ ಇತ್ತು. ಅದನ್ನು ತೀರಿಸಿಕೊಳ್ಳಲಿಕ್ಕೆ ಪ್ರಬಲನಾಗಿದ್ದ ಗಂಗನನ್ನು ಎದುರಿಸಲು ಸಮರ್ಥ ವಾದ ಸೈನ್ಯವನ್ನು ಸಜ್ಜುಗೊಳಿಸಲು ಪಲ್ಲವ ಮಾಳವಾದಿ ರಾಜರ ಸಹಾಯ ವನ್ನು ತೆಗೆದುಕೊಂಡನು. ಈ ರಾಜರೆಲ್ಲ ೩ನೆಯ ಗೋವಿಂದನ ಕಾಲದಿಂದಲೇ ರಾಷ್ಟ್ರಕೂಟ ಪ್ರಭುತ್ವಕ್ಕೆ ಮನ್ನಣೆಯನ್ನು ಕೊಡುತ್ತ ಬಂದಿದ್ದರು. ಇಷ್ಟು ಘೋರ ಪ್ರಯತ್ನವನ್ನು ಮಾಡಿದರೂ ಅಮೋಘವರ್ಷನಿಗೆ ಗಂಗರಾಜನನ್ನು ಬಗ್ಗಿಸುವುದಾಗಲಿಲ್ಲ. ಕಡೆಗೆ ತನ್ನ ಮಗಳಾದ ಚಂದ್ರೊಬ್ಬಲಬ್ಬೆಯನ್ನು ಎಱೆಗಂಗನ ಕಿರಿಯಮಗನಾದ ೧ನೆಯ ಬೂತುಗನಿಗೆ ಕೊಟ್ಟು ಗಂಗರ ಸಖ್ಯ ವನ್ನು ಬೆಳೆಯಿಸಬೇಕಾಯಿತು.

ನೀತಿಮಾರ್ಗನ ಮಾಂಡಲಿಕರು ಯಾವ ಭಾಗದಲ್ಲಿ ಯಾರು ಇದ್ದರೆಂಬುದು ತಿಳಿದಿಲ್ಲ. ನೊಳಂಬ ಪೊಳಲ್ಚೋರನು ಗಂಗ-೬೦೦೦ ಪ್ರಾಂತವನ್ನೂ ಕಂಚಿಯ ವರೆಗಿದ್ದ ದೇಶವನ್ನೂ ಆಳುತ್ತಿದ್ದನು. ಇವನು ನೀತಿಮಾರ್ಗ-ಎಱೆಗಂಗನ ತಂಗಿಯಾದ ಜಾಯಬ್ಬೆಯನ್ನು ಮದುವೆಯಾಗಿದ್ದನು. ಎಱೆಗಂಗನಿಗೆ ಸತ್ಯವಾಕ್ಯರಾಜಮಲ್ಲ, ಬೂತುಗ ಎಂಬ ಇಬ್ಬರು ಮಕ್ಕಳಿದ್ದರು. ಹಿಂದುಪುರ ಶಾಸನವೊಂದನ್ನು ಬಿಟ್ಟು ನೀತಿಮಾರ್ಗನ ಬೇರೆ ಲಿಪಿಗಳು ದೊರೆತಿಲ್ಲ. ಈ ಶಾಸನದಲ್ಲಿದ್ದ ಅಂಶಗಳನ್ನು ಮೇಲೆ ಹೇಳಿದ್ದೇವೆ.

ನೀತಿಮಾರ್ಗನ ತರುವಾಯ ಅವನ ಹಿರಿಯ ಮಗನಾದ ೨ನೆಯ ಸತ್ಯ ವಾಕ್ಯ ರಾಜಮಲ್ಲನು ಸಿಂಹಾಸನಕ್ಕೆ ಬಂದನು. ಇವನ ೧೮ನೆಯ ವರ್ಷವಾದ ಶಕ ೮೦೯ ರ ಬಿಳಿಯೂರ ಶಿಲಾಶಾಸನದಿಂದಲೂ[1] ೨೭ನೆಯ ವರ್ಷವಾದ ಶಕ ೮೧೭ ರ ಮಾಂಡ್ಯ ಶಿಲಾಶಾಸನದಿಂದಲೂ[2] ಇವನ ಮೊದಲನೆಯ ವರ್ಷವು

---

[1] *Coorg Inscriptions*, No. 2.

[2] *Ep. Carn.* Vol. III; *M. A. R.* 1910.

ಕ್ರಿ. ಶ. ೮೬೯–೭೦ ಎಂದು ನಿಶ್ಚಯಿಸಬಹುದು. ಇವನ ಕಾಲದಲ್ಲಿ ಬಾಣ ರಾಷ್ಟ್ರಕೂಟ, ನೊಳಂಬರೊಂದಿಗೆ ಅನೇಕ ಯುದ್ಧಗಳಾದವೆಂದು ಶಾಸನಗಳಿಂದ ಗೊತ್ತಾಗುತ್ತದೆ. ಬಾಣವಿದ್ಯಾಧರನ ಕಾಲದಲ್ಲಿ ಪೊಳಲ್ಚೋರನ ಪುಲಿನಾಡನ್ನು ಮುತ್ತಿ ಸ್ವಾಧೀನಪಡಿಸಿಕೊಂಡಿದ್ದನೆಂದು ಮೇಲೆ ಹೇಳಿದ ಬಾಣವಿದ್ಯಾಧರನ ಮಗನಾದ ವಿಜಯಾದಿತ್ಯ ವೀರಚೂಡಾಮಣಿ ಪ್ರಭುಮೇರುವಿನ ಕಾಲದಲ್ಲಿ ನೊಳಂಬರು ಪುಲಿನಾಡಲ್ಲಿದ್ದ ಕೊಯತ್ತೂರನ್ನು ಮುತ್ತಿದರೆಂದೂ[1] ಮಹೇಂದ್ರನು ತಿರುಗಿ ಪುಲಿನಾಡನ್ನು ವಶಪಡಿಸಿಕೊಳ್ಳಲಿಕ್ಕೆ ಕಾಡುವೆಟ್ಟಿ ಮುತ್ತರಸ, ಮುದುವರೊಂದಿಗೆ ತನ್ನ ಸೈನ್ಯವನ್ನು ಕಳುಹಿಸಿದನೆಂದೂ[2] ಶಾಸನಗಳಿಂದ ತಿಳಿಯುತ್ತದೆ. ಇದರಿಂದ ಪುಲಿನಾಡ ಮಧ್ಯದಲ್ಲಿ ಬಾಣರ ಕೈಗೆ ಸೇರಿತ್ತೆಂದು ಸ್ಪಷ್ಟವಾಗುತ್ತದೆ. ಬಲ್ಲಹನ ಕಪ್ಪವನ್ನೆತ್ತಲು ಸೈನ್ಯದೊಂದಿಗೆ ಕಾಡುವೆಟ್ಟಿಯು ಮೇಲೆ ಹೋದಾಗ ನೊಳಂಬ ಗಂಗಋಸಾಸಿರವನ್ನಾಳುತ್ತಿದ್ದ ಬಾಣವಿಜಯಾದಿತ್ಯನ ಆಳು ಕಾಳಗದಲ್ಲಿ ಮಡಿದನೆಂದು ಕರ್ಷಣಪಲ್ಲೆ ಲಿಪಿಯಲ್ಲಿ ಬರೆದಿದೆ.[3] ರಾಜಮಲ್ಲನ ಕಾಲದ ಬೂದೀಕೋಟೆ ಲಿಪಿಯಿಂದ ಬಾಣರಸನು ಗಂಗಋಸಾಸಿರವನ್ನಾಳುತ್ತಿದ್ದನೆಂದು ಗೊತ್ತಾಗುತ್ತದೆ. ಗಂಗಋಸಾಸಿರವನ್ನಾಳಿದ ಬಾಣರಸನು ವಿಜಯಾದಿತ್ಯನೆಂದೇ ಲಿಪಿಗಳಲ್ಲಿ ಸ್ಪಷ್ಟವಾಗಿದೆ. ಆದುದರಿಂದ ಮೇಲೆ ಹೇಳಿದ ರಾಜಮಲ್ಲನು ಕ್ರಿ. ಶ. ೮೭೦ ರಲ್ಲಿ ಪಟ್ಟಕ್ಕೆ ಬಂದ ೨ನೆಯ ರಾಜಮಲ್ಲನಾಗಿರಬೇಕು. ಪುಂಗನೂರ ಶಾಸನದಲ್ಲಿ ವಿಜಯಾದಿತ್ಯ ಪ್ರಭುಮೇರು ತನ್ನ ರಾಜ್ಯವಾದ ವಡುಗವಳಿ–೧೨೦೦೦ ವನ್ನಲ್ಲದೆ ಮಣ್ಣೆ–೨೦೦ ಪ್ರಾಂತವನ್ನೂ ಕೊಯತ್ತೂರ ಮುತ್ತಿಗೆಯ ಕಾಲದಲ್ಲಿ ಆಳುತ್ತಿದ್ದನೆಂದು ಬರೆದಿರುವುದರಿಂದ ಬಾಣರು ಪುಲಿನಾಡನ್ನು ಕಿತ್ತುಕೊಳ್ಳಲು ನೊಳಂಬರ ಮೇಲೆ ದಂಡೆತ್ತಿ ಹೋದಾಗ ಆ ನಾಡನ್ನಲ್ಲದೆ ಅವರ ಆಳಿಕೆಯಲ್ಲಿದ್ದ ಗಂಗಋಸಾಸಿರವನ್ನೂ ಗಂಗರ ಮಣ್ಣೆ ಪ್ರಾಂತವನ್ನೂ ಕೈವಶಪಡಿಸಿಕೊಂಡಿರಬೇಕು. ಸೇಲಂ ಜಿಲ್ಲೆಯ ರಾಯಕೋಟಾ ಲಿಪಿಯಲ್ಲಿ ಮಹಾಬಲಿ ಬಾಣರಸನ ೪ನೆಯ ವರ್ಷದಲ್ಲಿ ಬಾಣರು 'ಗಂಗಗಾಗಿ' (ಬಹುಶಃ ಸನ್ನಿಯ ಗಂಗನಿಗಾಗಿ) ಮಣ್ಣೆಗೆ ಮುತ್ತಿಗೆ ಹಾಕಿದರೆಂದು ಬರೆದಿದೆ. ಈ ಮುತ್ತಿಗೆಯಲ್ಲಿಯೇ ಪ್ರಭುಮೇರು

---

[1] ಪುಂಗನೂರು ಶಾಸನ (*M. E. R.* for 1906-07).

[2] ಕಳಕತ್ತೂರ ಶಾಸನ (*M. E. R.* No. 306 of 1913); ಅರಲುಕೋಟೆ ಶಾಸನ (ಶ್ರೀನಿವಾಸಪುರ, ೬).

[3] *M. E. R.* 1906-07.

ವಿಜಯಾದಿತ್ಯನು ಮಣ್ಣೆಯನ್ನು ತೆಗೆದುಕೊಂಡಿರಬೇಕು. ಮಹೇಂದ್ರನು ಬಾಣರಿಂದ ಪುಲಿನಾಡನ್ನು ತಿರುಗಿ ತೆಗೆದುಕೊಳ್ಳಲು ಕಾಡುವೆಟ್ಟಿ ಮುದುವರನ್ನು ಕಳುಹಿಸಿದಾಗ ಅವನು ಗಂಗಱುಸಾಸಿರವನ್ನಾಳುತ್ತಿದ್ದನೆಂದು ಕಳಕತ್ತೂರ ಲಿಪಿಯಲ್ಲಿ ಬರೆದಿರುವುದರಿಂದ ಈ ಪುಲಿನಾಡ ಮುತ್ತಿಗೆಯ ಮೊದಲೇ ನೊಳಂಬರು ಗಂಗಱುಸಾಸಿರವನ್ನು ವಿಜಯಾದಿತ್ಯ ಪ್ರಭುಮೇರುವಿನಿಂದ ಕಿತ್ತುಕೊಂಡಿರಬೇಕು. ನೊಳಂಬರು ಎರಡನೆಯ ಸಲ ಪುಲಿನಾಡನ್ನು ಮುತ್ತಿದಾಗ ಪೆರ್ಮಾವಿಯನ್ನು ಸುಟ್ಟರು. ಈ ಸುದ್ದಿಯನ್ನು ಕೇಳಿ ಪ್ರಭುಮೇರು ಸೈನ್ಯದೊಂದಿಗೆ ಬಂದು ಶತ್ರುಗಳನ್ನು ಓಡಿಸಿ ಹಲವರನ್ನು ಕೊಂದನೆಂದು ಅದೇ ಶಾಸನದಲ್ಲಿ ಹೇಳಿದೆ.

ಮೇಲೆ ಹೇಳಿದ ಕಳಕತ್ತೂರ ಲಿಪಿಯಲ್ಲಿ ಕಾಡುವೆಟ್ಟಿ ಮುದುವರು ಪೆರ್ಮ್ಮಾನಡಿಯ ಆಜ್ಞೆಯ ಮೇರೆಗೆ ತಳಕಾಡನ್ನು ಸ್ವಾಧೀನಪಡಿಸಿಕೊಂಡ ರೆಂದು ಹೇಳಿದೆ. ತಳಕಾಡು ಈಗ ಶತ್ರುಗಳ ಕೈಯಲ್ಲಿದ್ದಿರಬೇಕೆಂದು ಸ್ಪಷ್ಟ ವಾಗುತ್ತದೆ. ತುಮಕೂರು ಜಿಲ್ಲೆಯ ತಿಪಟೂರು ತಾಲೂಕಿಗೆ ಸೇರಿದ ಕಿಬ್ಬನ ಹಳ್ಳಿಯ ಶಾಸನದಿಂದ[1] ರಾಜಮಲ್ಲ ಪೆರ್ಮಾನಡಿಯು ಆಳುತ್ತಿದ್ದಾಗ ನನ್ನಿಯ ಗಂಗನು ಸೈನ್ಯದೊಂದಿಗೆ ಬಂದು ರಾಜಮಲ್ಲನೊಂದಿಗೆ ಯುದ್ಧ ಮಾಡಿದನೆಂದು ಗೊತ್ತಾಗುತ್ತದೆ. ಹಿರೇಬಿದನೂರ ಲಿಪಿಯಲ್ಲಿ ನನ್ನಿಯ-ಗಂಗನು ಗಂಗಕುಲ-ತಿಲಕ ಪೃಥ್ವೀಪತಿಯ ಮಗನೆಂದು ಬರೆದಿದೆ.[2] ಇದರಿಂದ ರಾಜಮಲ್ಲನ ಕೂಡ ಯುದ್ಧಮಾಡಿದ ನನ್ನಿಯ ಗಂಗನು ಪೃಥ್ವೀಪತಿಯ ಮಗನೆಂದು ತಿಳಿಯ ಬೇಕು. ಇವನು ಈ ಯುದ್ಧದಲ್ಲಿ ತಳಕಾಡನ್ನು ಆಕ್ರಮಿಸಿಕೊಂಡಿರಬೇಕು. ಅರಕಲ್ಗೂಡಿನ ಒಂದು ಲಿಪಿಯಲ್ಲಿ[3] ನೀತಿಮಾರ್ಗ ನನ್ನಿಯಗಂಗನು ರಾಜ್ಯ ವಾಳುತ್ತಿದ್ದಾಗ ತದ್ದಯ್ಯನು ಅಖಂಡ ಭಟಾರರಿಗೆ ದಾನಮಾಡಿದಂತೆ ಬರೆದಿದೆ. ನನ್ನಿಯಗಂಗನೆಂಬ ಬಿರುದುಳ್ಳ ೨ನೆಯ ಬೂತುಗನು ಸತ್ಯವಾಕ್ಯನಾಗಿದ್ದುದ ರಿಂದ ಈ ನನ್ನಿಯಗಂಗನು ಪೃಥ್ವೀಪತಿಯ ಮಗನೇ ಆಗಿರಬಹುದು. ಇವನು ಸತ್ಯವಾಕ್ಯ ರಾಜಮಲ್ಲನ ಕಾಲದಲ್ಲಿ ಮೇಲೆ ಹೇಳಿದಂತೆ ತಳಕಾಡನ್ನು ಕ್ರಮಿಸಿ ಕೊಂಡು ನೀತಿಮಾರ್ಗನೆಂಬ ಆಧಿಪತ್ಯಸೂಚಕ ಬಿರುದನ್ನು ಧರಿಸಿದಂತೆ ತೋರು ತ್ತದೆ. ೨ನೆಯ ಶಿವಮಾರನ ಮಗನಾದ ೧ನೆಯ ಪೃಥ್ವೀಪತಿಯು ಚಿಕ್ಕಪ್ಪನ

---

[1] *Ep. Carn.* Vol. VII, ತಿಪಟೂರು ೫೫.

[2] ಕೋಲಾರ ಜಿಲ್ಲೆ, ಗೌರಿಬಿದನೂರು ೪.

[3] ಅರಕಲ್ಗೂಡು ೨೪.

ಮಗನಾದ ೧ನೆಯ ರಾಜಮಲ್ಲನಿಗೆ ಗಂಗಪಟ್ಟವು ಹೋದಮೇಲೆ ಗಂಗರಾಜ್ಯದ ಮೇಲಿದ್ದ ತನ್ನ ಬಾಧ್ಯತೆಯನ್ನು ಸಾಧಿಸಿಕೊಳ್ಳಲು ಪ್ರಯತ್ನಮಾಡಿದನೋ ಇಲ್ಲವೋ ತಿಳಿದಿಲ್ಲ. ಇವನು ಪಲ್ಲವರ ಸಾಮಂತನಾಗಿಯೇ ಇದ್ದು ಕಡೆಗೆ ಶ್ರೀಪುರಂಬಿಯದಲ್ಲಿ ಪಾಂಡ್ಯ ವರಗುಣವರ್ಮನೊಂದಿಗೆ ಕಾದಿ ಮಡಿದನು. ಇವನ ಮಗನು ಕೊಂಗುಣಿ ಪಟ್ಟದ ಮೇಲೆ ತನಗಿದ್ದ ಹಿರಿಯ ಮನೆತನದ ಹಕ್ಕನ್ನು ಸ್ಥಿರಪಡಿಸಿಕೊಳ್ಳಲಿಕ್ಕೆ ಸಮಯವನ್ನು ಸಾಧಿಸುತ್ತಿದ್ದನು. ಇವನಿಗೆ ಬಂಧುಗಳಾದ ಬಾಣರ ಸಹಾಯವು ಈ ಕಾರ್ಯದಲ್ಲಿ ವಿಪುಲವಾಗಿದ್ದಿತೆಂದು ಹೇಳಲು ಅವಕಾಶವುಂಟು. ೧ನೆಯ ಪೃಥ್ವೀಪತಿಯು ತನ್ನ ಮಗಳಾದ ಕುಂದವ್ವೆಯನ್ನು ಬಾಣವಿದ್ಯಾಧರನಿಗೆ ಕೊಟ್ಟು ಮದುವೆಮಾಡಿದ್ದನು. ಈಕೆಯ ಮಗನೇ ಪ್ರಭುಮೇರು ವಿಜಯಾದಿತ್ಯನು. ಇವನು ತನ್ನ ಮೈದುನನಾದ ನನ್ನಿಯ ಗಂಗನಿಗೆ ಗಂಗಸಿಂಹಾಸನವನ್ನು ಕೊಡಿಸುವದಕ್ಕೋಸ್ಕರ ಪ್ರಯತ್ನಮಾಡಿದಂತೆ ತೋರುತ್ತದೆ. ಸೋರೆಮಟಿಯ ಯುದ್ಧದಲ್ಲಿ ಮಹಾಬಲಿ ಬಾಣರಸನು ಗಂಗಪೆರ್ಮಾನಡಿಯ ಪರವಾಗಿ ನೊಳಂಬ, ರಾಜಮಲ್ಲ, ಮಯಿಂದಡಿ, ದಡಿಗರೊಂದಿಗೆ ಹೋರಾಡಿದನೆಂದು ಶಾಸನಗಳಿಂದ ತಿಳಿಯುತ್ತದೆ. ಈ ಗಂಗ ಪೆರ್ಮಾನಡಿಯು ತಳಕಾಡನ್ನಾಕ್ರಮಿಸಿಕೊಂಡ ನನ್ನಿಯ ಗಂಗನೇ ಆಗಿರಬೇಕು. ಬಾಣನು ಪ್ರಭುಮೇರು ವಿಜಯಾದಿತ್ಯನು. ಪ್ರತಿಕಕ್ಷಿಗಳಾಗಿದ್ದ ರಾಜಮಲ್ಲನೊಳಂಬರು ೨ನೆಯ ರಾಜಮಲ್ಲನೂ ಅವನ ಸಾಮಂತನಾದ ನೊಳಂಬ ಮಹೇಂದ್ರನೂ. ಬರಗೂರು ಶಾಸನದಲ್ಲಿ ನೊಳಂಬನ ಸಹಾಯಕರಲ್ಲೊಬ್ಬನಾಗಿದ್ದ ಮಯಿಂದಡಿಯ ಹೆಸರು ಮಹೇಂದ್ರವಿಕ್ರಮ ಎಂದು ಇದೆ. ಈ ಮಹೇಂದ್ರ ವಿಕ್ರಮನಾಗಲಿ ದಡಿಗನಾಗಲಿ ಆರೆಂಬುದು ಗೊತ್ತಿಲ್ಲ. ಸೋರೆಮಟಿ ಕಾಳಗವು ವೈದುಂಬ ಮಹಾರಾಜನಾದ ಗಂಡತ್ರಿಣೇತ್ರನ ಆಳಿಕೆಯಲ್ಲಿ ಜರುಗಿತೆಂದೂ ಅದರಲ್ಲಿ ವೈದುಂಬರು ನೊಳಂಬರ ಮೇಲೆ ಹೋರಾಡಿದರೆಂದೂ ಅವನ ಒಂದು ಲಿಪಿಯಲ್ಲಿ ಉಕ್ತವಾಗಿದೆ.[1] ಇದೇ ವೈದುಂಬ ಅರಸನ ಇನ್ನೊಂದು ಲಿಪಿಯಲ್ಲಿ ವೈದುಂಬರೂ ಬಾಣರೂ ನೊಳಂಬ ರಾಜಮಲ್ಲ ದಡಿಗರೊಂದಿಗೆ ಸೋರೆಮಟಿ ರಣಾಂಗಣದಲ್ಲಿ ಕಾದಿದರೆಂದು ಬರೆದಿದೆ![2] ಇದರಿಂದ ನನ್ನಿಯ-ಗಂಗನಿಗೆ ಬಾಣರೂ ವೈದುಂಬರೂ ನೆರವಾಗಿದ್ದರೆಂದು ಹೇಳಬಹುದು. ಆದರೆ ಗಂಗ ಸಿಂಹಾಸನಕ್ಕಾಗಿ ಮಾಡಿದ ಇವನ ಪ್ರಯತ್ನವು ಸಫಲವಾಗಲಿಲ್ಲ. ಮಹೇಂದ್ರನು

---

[1] *Madras Epigraphical Report*, 1906, No. 533.

[2] *Ibid*, 1905, No. 295.



(Plate 13) ವಿಜಯಾದಿತ್ಯನ ೩ನೆಯ ವರ್ಷದ ಬಾದಾಮಿಯ ಶಿಲಾಶಾಸನ

ತಳಕಾಡನ್ನು ಕಿತ್ತುಕೊಂಡು ತನ್ನ ಪ್ರಭುವಾದ ರಾಜಮಲ್ಲನ ರಾಜ್ಯವನ್ನು ಸ್ಥಿರಪಡಿಸಿದನು! ಮುಂದೆ ಮಹಾಬಲಿಕುಲಧ್ವಂಸವಾದ ಮೇಲೆ ನನ್ನಿಯ-ಗಂಗನಿಗೆ ಪ್ರಬಲರಾಗಿದ್ದ ಬಾಣರ ಬೆಂಬಲವು ತಪ್ಪಿದುದರಿಂದ ಅವನು ತಲೆಯೆತ್ತಲಿಲ್ಲ. ಹೀಗೆ ಗಂಗಸಿಂಹಾಸನವು ಚಿಕ್ಕಮನೆತನದ ರಾಜಮಲ್ಲನ ಸಂತಾನದಲ್ಲಿಯೇ ಉಳಿಯಲು ಅನುವಾಯಿತು.

ಕ್ರಿ.ಶ. ೮೯೨ ರ ಧರ್ಮಪುರೀ ಶಾಸನದಲ್ಲಿ[1] ಮಹೇಂದ್ರನು 'ಮಹಾಬಲಿಕುಲಧ್ವಂಸನಂ ಗೆಯ್ದು ಪೃಥ್ವೀರಾಜ್ಯಂ ಗೆಯ್ಯೆ'ತ್ತಿದ್ದನೆಂದು ಉಕ್ತವಾಗಿರುವುದರಿಂದ ಬಾಣರ ಧ್ವಂಸವು ಕ್ರಿ. ಶ. ೮೯೨ ಕ್ಕೆ ಸ್ವಲ್ಪಕಾಲ ಮುಂಚೆ ಜರುಗಿರಬೇಕು. ಈ ಸಮಯದಲ್ಲಿ ನೊಳಂಬರು ಬಾಣರ ವಶಕ್ಕೆ ಹೋಗಿದ್ದ ಮಣ್ಣೆ ಮೊದಲಾದವುಗಳನ್ನು ವಶಪಡಿಸಿಕೊಂಡಿರಬಹುದು. ಹೀಗೆ ನೊಳಂಬ ಬಾಣರ ನಡುವೆ ಮೊದಲಿನಿಂದಲೂ ಕಲಹಗಳು ನಡೆಯುತ್ತಿದ್ದು ಕಡೆಗೆ ಮಹೇಂದ್ರನು ಬಾಣರನ್ನು ನಿರ್ಮೂಲ ನಾಶಮಾಡಿದನು. ಬರಬರುತ್ತ ಮಹೇಂದ್ರನು ನಾಲ್ಕು ದಿಕ್ಕುಗಳಲ್ಲಿಯೂ ವಿಜಯಭೇರಿಯನ್ನು ಹೊಡಿಸಿ ಪ್ರಬಲನಾಗಿ ಪ್ರಭುಗಳಾದ ಗಂಗರನ್ನು ಲೆಕ್ಕಿಸದೆ ಹೋದನು. ಧರ್ಮಪುರಿಯ ಒಂದು ಶಾಸನದಲ್ಲಿ[2] ಮಹೇಂದ್ರನು ೯೬೦೦೦ ಗ್ರಾಮಗಳುಳ್ಳ ಗಂಗಮಂಡಲಕ್ಕೆ ಅಧಿಪತಿಯಾಗಿ ಆಳುತ್ತಿದ್ದನೆಂದು ಬರೆದಿರುವುದರಿಂದ ಈ ವಿಧಾನವು ಬಲಪಡುತ್ತದೆ. ರಾಜಮಲ್ಲನ ೨೭ನೆಯ ವರ್ಷದಲ್ಲಿ (ಕ್ರಿ. ಶ. ೮೯೧-೯೨) ರಾಚೆಯಗಂಗನು ನೊಳಂಬರೊಂದಿಗೆ ಕಾದಿ ಮಡಿದನೆಂದು ಇಗ್ಗಲಿಶಾಸನದಿಂದ ಗೊತ್ತಾಗುತ್ತದೆ. ಮಹೇಂದ್ರನು ತಿರುಗಿ ಬಿದ್ದಾಗ ರಾಚೆಯಗಂಗನು ಗಂಗರ ಪರವಾಗಿ ಯುದ್ಧ ಮಾಡಿರಬೇಕು. ಬಾಣವಿಧ್ವಂಸನ ಕಾಲದಿಂದಲೂ ಗಂಗರ ಪ್ರಭುತ್ವವನ್ನು ತಪ್ಪಿಸಿಕೊಂಡು ಸ್ವತಂತ್ರನಾಗಬೇಕೆಂದು ನೊಳಂಬಾಧಿರಾಜನು ಹವಣಿಸುತ್ತಿದ್ದನು. ಆದರೆ ಇವನ ಕ್ರಿ. ಶ. ೮೯೫ ರ ತಾಯಲೂರ ಶಾಸನವು[3] ರಾಜಮಲ್ಲನ ೨೭ನೆಯ ವರ್ಷದಲ್ಲಿ ಹುಟ್ಟಿದ್ದೆಂದು ಅಲ್ಲಿ ಉಕ್ತವಾಗಿರುವದರಿಂದ ನೊಳಂಬಾಧಿರಾಜನು ಗಂಗರ ಆಧಿಪತ್ಯವನ್ನು ತಪ್ಪಿಸಲು ಸಮರ್ಥನಾಗಲಿಲ್ಲವೆಂದು ತೋರುತ್ತದೆ. ೨ನೆಯ ರಾಜಮಲ್ಲನ ತಮ್ಮನಾದ ಗುಣದುತ್ತರಂಗ ಬೂತುಗನು ಹಿರಿಯೂರು ( ಬಿರಿಯೂರು ), ಸೂಟೂರು, ಸಾಮಿಯ ( ರೇಮಿಯ ) ಯುದ್ಧ

---

[1] *Ep. Ind.* Vol. X, pp. 55 ff.

[2] *M. E. R.* 1911.

[3] *Mysore Arch. Report.* 1910.

ರಂಗಗಳಲ್ಲಿ ಮಹೇಂದ್ರನನ್ನು ಸೋಲಿಸಿ ಓಡಿಸಿದನೆಂದು ಶಾಸನಗಳಲ್ಲಿ ಉಕ್ತವಾಗಿದೆ. ‘ಇದೋ, ವಂಗ, ಪೌಂಡ್ರ, ಮಾಗಧ, ಕೋಸಲರಾಜರು ! ಅದೋ ಕಾಳಿಂಗ, ಆಂಧ್ರ, ದ್ರಾವಿಡರಾಜರು ! ಇವರೆಲ್ಲರನ್ನು ಸಾಮಿಯ ರಣಾಂಗಣದಲ್ಲಿ ರಾಜಮಲ್ಲನು ಅಮೋಘವಾದ ಶಸ್ತ್ರಗಳಿಂದ ದಿಕ್ಕಾಪಾಲಾಗಿ ಚದರಿಸಿದ್ದಾನೆ,[1] ಎಂದು ಜನರು ರಾಜಮಲ್ಲನ ಪರಾಕ್ರಮವನ್ನು ಪ್ರಶಂಸಿಸುತ್ತಾರೆ.’ ಈ ರೀತಿಯಾಗಿ ಕೆರೆಗೋಡು ರಂಗಾಪುರ ಶಾಸನವು ರಾಜಮಲ್ಲನನ್ನು ಕುರಿತು ಹೇಳುತ್ತದೆ. ವಂಗ ಮೊದಲಾದ ಉತ್ತರ ಹಿಂದುಸ್ಥಾನದ ರಾಜರನ್ನು ಸೋಲಿಸಿದುದು ಬಡಿವಾರದ ಮಾತಾಗಿ ತೋರುತ್ತದೆ. ಎಱೆಯಪ್ಪನು ಪೂರ್ವ ಚಳುಕ್ಯ ಮನೆತನದ ಗನೆಯ ಅಮ್ಮರಾಜನೊಂದಿಗೆ ಕಾದಿದನೆಂದು ಶಾಸನಗಳಿಂದ ಗೊತ್ತಾಗುವುದರಿಂದ ರಾಜಮಲ್ಲನು ಸೋಲಿಸಿದ ಆಂಧ್ರರು ಪೂರ್ವ ಚಾಳುಕ್ಯರಾಗಿರಬೇಕು. ಇದೇ ಸಾಮಿಯ ಯುದ್ಧದಲ್ಲಿ ಬೂತುಗನು ಮಹೇಂದ್ರನನ್ನು ಜಯಿಸಿದನೆಂದು ತಿಳಿದಿರುವುದರಿಂದ ಮೇಲೆ ಉಕ್ತರಾದ ಆಂಧ್ರ ದ್ರಾವಿಡರು ಮಹೇಂದ್ರನ ಪಕ್ಷವನ್ನು ವಹಿಸಿರಬಹುದು. ಅಲ್ಲಿ ಪರಾಜಿತರಾದ ಆಂಧ್ರ ದ್ರಾವಿಡರು ಓಡಿಹೋದ ಮೇಲೆ ಬೂತುಗನು ಮಹೇಂದ್ರನನ್ನು ಅಟ್ಟಿಕೊಂಡು ಹಿರಿಯೂರು ಸೂಳೂರು ಯುದ್ಧಭೂಮಿಗಳಲ್ಲಿ ಮತ್ತೆ ಸೋಲಿಸಿದಂತೆ ತೋರುತ್ತದೆ. ಹೀಗೆ ಮಹೇಂದ್ರನಿಗೂ ಗಂಗರಿಗೂ ಅನೇಕ ಯುದ್ಧಗಳು ನಡೆದು ಕೊನೆಗೆ ಬೂತುಗನ ಮಗನಾದ ಎಱೆಯಪ್ಪನು ತನ್ನ ಶತ್ರುವನ್ನು ಕೊಂದು ಮಹೇಂದ್ರಾಂತಕನೆಂಬ ಬಿರುದನ್ನು ತಳೆದನು.

ರಾಜಮಲ್ಲನು ಕಂಚಿಯ ವರೆಗೆ ದಂಡೆತ್ತಿ ಹೋಗಿದ್ದನೆಂದು ಊದೀಕೋಟೆ ಲಿಪಿಯಿಂದ[2] ಸ್ಪಷ್ಟವಾಗುತ್ತದೆ. ಈ ಸಮಯದಲ್ಲಿ ಬಾಣರಸನು ಗಂಗಜುಸಾಸಿರವನ್ನಾಳುತ್ತಿದ್ದನೆಂದೂ ತನ್ನ ಕೈಕೆಳಗೆ ತೇಕಲ್ನಾಡಿನ ಒಡೆಯನಾಗಿದ್ದ ಅಗ್ಗಳ ಅರಸನನ್ನು ಗಂಗರೊಡನೆ ಕಾದಲು ಅಟ್ಟಿದನೆಂದೂ ಅದೇ ಲಿಪಿಯಲ್ಲಿ ಬರೆದಿದೆ. ಈ ಅಗ್ಗಳ ಅರಸನು ವಿಜಯಾದಿತ್ಯ ಪ್ರಭುಮೇರುವಿನ ಅಧಿಕಾರಿಯಾಗಿದ್ದುದರಿಂದ ಮೇಲೆ ಹೇಳಿದ ಬಾಣರಸನು ಪ್ರಭುಮೇರುವಾಗಿರಬೇಕು. ಇವನು ಗಂಗಜುಸಾಸಿರವನ್ನು ಹಿಡಿದುದು ಕ್ರಿ. ಶ. ೮೯೩ಕ್ಕೆ ಮೊದಲೇ ಎಂದು ಮೇಲೆ ಹೇಳಿದೆ. ಕಂಚಿಯ ಅರಸನು ಈಗ ಪಲ್ಲವ ಅಪರಾಜಿತನಾಗಿದ್ದನು. ಬಾಣರು ಪಲ್ಲವರ ನೆರವಿಗೆ ಹೋಗಿ ಗಂಗರೊಂದಿಗೆ ಯುದ್ಧಮಾಡಿರಬಹುದು.

---

1 ಕೆರೆಗೋಡು ರಂಗಾಪುರ ಶಾಸನ ಗಟ್ಟವಾಡಿ ಶಾಸನಗಳು, ಇತ್ಯಾದಿ.

2 ಕೋಲಾರಜಿಲ್ಲೆ, ಬಾರಿಂಗಪೇಟ ೮೩.

ಪ್ರಭುಮೇರುವಿನ ತಂದೆಯಾದ ಬಾಣವಿದ್ಯಾಧರನು ಅಪರಾಜಿತನ ಹಿಂದೆ ಆಳಿದ ನೃಪತುಂಗನ ಸಾಮಂತನಾಗಿದ್ದನು. ಪ್ರಭುಮೇರುವಾದರೂ ಪಲ್ಲವರ ಮಾಂಡಲಿಕನಾಗಿದ್ದಿರಬಹುದು. ಕೆರೆಗೋಡು ರಂಗಾಪುರ ಶಾಸನದಲ್ಲಿ ಉಕ್ತವಾದ ದ್ರಾವಿಡರ ಪರಾಜಯವು ಈ ಗಂಗ ಪಲ್ಲವ ಯುದ್ಧವನ್ನು ನಿರ್ದೇಶಿಸುತ್ತದೆ.

ರಾಜಮಲ್ಲನ ತಮ್ಮನಾದ ೧ನೆಯ ಬೂತುಗನು ಹಿರಿಯೂರು ಮೊದಲಾದ ಯುದ್ಧಭೂಮಿಗಳಲ್ಲಿ ಮಹೇಂದ್ರನನ್ನು ಸೋಲಿಸಿದನೆಂದು ಮೇಲೆ ಹೇಳಿದ್ದೇವೆ. ಕೆರೆಗೋಡು ರಂಗಾಪುರ ತಾಮ್ರಲಿಪಿಯಲ್ಲಿ ಇವನು "ಪ್ರತಾಪ ಪರಿತಾಪಿತ ಪಲ್ಲವಸತ್ಕುಲೋತ್ಕರಃ" ಎಂದು ವರ್ಣಿತನಾಗಿದ್ದಾನೆ. ಈ ಪಲ್ಲವನು ನೊಳಂಬಪಲ್ಲವ ಮಹೇಂದ್ರನಾಗಿರಬೇಕು. ಬೂತುಗನು ಒಬ್ಬ ರಾಜರಾಜನನ್ನು ಸೋಲಿಸಿದನೆಂದು ಗಟ್ಟವಾಡಿ ಶಾಸನದಲ್ಲಿ ಬರೆದಿದೆ. ಇವನಾರೆಂಬುದು ತಿಳಿದಿಲ್ಲ. ಇವನು ಆನೆಗಳನ್ನು ಬಂಧಿಸುವಾಗ ತಡೆದ ಕೊಂಗರನ್ನು ಗೆದ್ದು ಪಂಚವಾರಿಯಲ್ಲಿ ಉಕ್ತವಾದ ಪ್ರಾಚೀನಪದ್ಧತಿಯಿಂದ ಅವರ ನೂರಾರು ಆನೆಗಳನ್ನು ಏಕಾಂಗಿಯಾಗಿ ಕಟ್ಟಿ ಹಾಕಿದನು. ಇವನು ಕೋಪದಲ್ಲಿ ಕಾಲಾಗ್ನಿಯಂತೆಯೂ ದಾನದಲ್ಲಿ ಕಲ್ಪವೃಕ್ಷದಂತೆಯೂ, ಸ್ತ್ರೀಯರಿಗೆ ಮನ್ಮಥನಂತೆಯೂ, ವಿದ್ಯೆಯಲ್ಲಿ ಬ್ರಹ್ಮನಂತೆಯೂ, ಗಜನಯದಲ್ಲಿ ಕರೇಣ್ವಾತ್ಮಜನಾದ ಪಾಲಕಾಪ್ಯನಂತೆಯೂ ಇದ್ದು ನಾಮಶ್ರವಣಮಾತ್ರದಿಂದ ಶತ್ರುಗಳ ಹೃದಯವನ್ನು ಭೇದಿಸುವಷ್ಟು ಪ್ರತಾಪಶಾಲಿಯಾಗಿದ್ದನು. ಇವನಿಗೆ ಗುಣದುತ್ತರಂಗ ಎಂಬ ಬಿರುದು ಇದ್ದಿತು. ಇವನಿಗೆ ಚಂದ್ರೊಬ್ಬಲಬ್ಬೆ ಪರಮಬ್ಬೆ ಎಂಬ ಇಬ್ಬರು ರಾಣಿಯರಿದ್ದರು. ಅಮೋಘವರ್ಷನ ಮಗಳಾದ ಚಂದ್ರೊಬ್ಬಲಬ್ಬೆಯ ಹೊಟ್ಟೆಯಲ್ಲಿ ಎಱೆಯಪ್ಪನೆಂಬ ಮಗನು ಹುಟ್ಟಿದನು. ಇವನಿಗೆ ರಾಜಮಲ್ಲನು ಪಟ್ಟಬಂಧವನ್ನು ಮಾಡಿದನೆಂದೂ ಆ ಮೇಲೆ ಇವರಿಬ್ಬರೂ ಕೂಡಿ ಒಟ್ಟಿಗೆ ರಾಜ್ಯಭಾರವನ್ನು ಮಾಡತೊಡಗಿದರೆಂದೂ ಶಾಸನಗಳಿಂದ ತಿಳಿಯುವುದರಿಂದ ರಾಜಮಲ್ಲನ ಜೀವಮಾನದಲ್ಲಿಯೇ ಬೂತುಗನು ಸತ್ತಿರಬೇಕು. ರಾಜಮಲ್ಲನ ೩೭ನೆಯ ವರ್ಷವು (ಕ್ರಿ. ಶ. ೯೦೭) ಎಱೆಯಪ್ಪನ ೨೧ನೆಯ ವರ್ಷಕ್ಕೆ ಸರಿಯಾಗಿತ್ತೆಂದು ಮೈಸೂರು ಗಂಗನೂರು ಲಿಪಿಯಲ್ಲಿ ಬರೆದಿರುವುದರಿಂದ[1] ಕ್ರಿ. ಶ. ೮೮೬–೮೮೭ರಲ್ಲಿ ಎಱೆಯಪ್ಪನಿಗೆ ರಾಜಮಲ್ಲನು ಪಟ್ಟಗಟ್ಟಿರಬೇಕು. ಇದಕ್ಕೆ ಮೊದಲು ಬೂತುಗನ ಮರಣವು ಸಂಭವಿಸಿರಬೇಕು. ಹುಣಸೂರಿನ ಒಂದು

---

[1] *Ep. Carn.* Vol. V, Ag. 70.

ಶಾಸನದಲ್ಲಿ[1] ಪೆರ್ಮಾನಡಿಯು ರಾಜ್ಯಭಾರವನ್ನು ಮಾಡುತ್ತಿದ್ದಾಗ ಇಱಿ ಯಪ್ಪನು ಕೊಂಗಲ್ನಾಡು-೮೦೦೦ ಪ್ರಾಂತವನ್ನೂ ಬೂತುಗನರಸಿ ಪರಮಬ್ಬೆಯು ಕೂರ್ಗ್ಗಲ್ಲನ್ನೂ ಆಳುತ್ತಿದ್ದರೆಂದು ಬರೆದಿದೆ. ನೀತಿಮಾರ್ಗ-ಎಱಿ ಯಪ್ಪನು ಪಟ್ಟಕ್ಕೆ ಬರುವ (ಕ್ರಿ. ಶ. ೮೮೬) ಮೊದಲು ರಾಜಮಲ್ಲನ ಕೈಕೆಳಗೆ ಕೊಂಗಲ್ನಾಡನ್ನಾಳುತ್ತಿದ್ದಿರಬೇಕು. ಕೊಂಗಲ್ನಾಡು ಬೂತುಗನು ಗಜಬಂಧನ ಸಮಯದಲ್ಲಿ ಕೊಂಗರನ್ನು ಸೋಲಿಸಿದಾಗ ಗಂಗರ ವಶಕ್ಕೆ ಬಂದಿರಬಹುದು.

ರಾಜಮಲ್ಲನಿಗೆ ಮಕ್ಕಳಿಲ್ಲದುದರಿಂದಲೇ ಕೊಂಗುಣಿ ಪಟ್ಟವು ಬೂತುಗನ ಮಗನಿಗೆ ಹೋಗಿರಬೇಕು.

## ರಾಜಮಲ್ಲನ ಶಾಸನಗಳು :

೧. ಕೆರೆಗೋಡು ರಂಗಾಪುರ ತಾಮ್ರಶಾಸನ.[2] — ಮರಗರೆ ವಿಷಯಕ್ಕೆ ಸೇರಿದ ಅಲೂರು ಗ್ರಾಮದ ಈಶ್ವರಾಲಯಕ್ಕೆ ಖಂಡಸ್ಫುಟಿತ ನವ-ಕರ್ಮಕ್ಕೋಸ್ಕರವಾಗಿ ನಿಗ್ಗುಂದ ವಿಷಯಾಂತರ್ಗತ ಕೆಡಸೂರು ಗ್ರಾಮವು ಕೊಡಲ್ಪಟ್ಟಿತ್ತೆಂದು ಬರೆದಿದೆ. ಈ ಗ್ರಾಮದ ದಾತಾರರು ರಾಜಮಲ್ಲನೋ ಬೂತುಗನೋ ದಾನವಿವರಣೆಯು ಹಿಂದೆಯೇ ನಿರ್ದಿಷ್ಟ ಳಾದ ಅಬ್ಬಲಬ್ಬೆಯೋ ಹೇಳಲಿಕ್ಕಾಗದು. ಶುದ್ಧ ಶೈವಾನ್ವಯ ಗಗನಕ್ಕೆ ಚಂದ್ರನಂತೆ ಇದ್ದ ಶಾಕಾರಿ ಭಟ್ಟಾರಕನ ಅಂತೇ ವಾಸಿಯಾದ ನೇತ್ರ ಶಿವಾಚಾರ್ಯನ ವಶಕ್ಕೆ ಈ ದತ್ತಿಯು ಒಪ್ಪಿಸಲ್ಪಟ್ಟಿತು. "ಶಕ ವರ್ಷೇಷ್ವತೀತೇಷ್ವಷ್ಟ" ಎಂಬಲ್ಲಿಗೆ ಕಾಲನಿರ್ದೇಶಕ ಅಂಕಗಳು ನಿಂತು ಹೋಗಿವೆ. ಶಾಸನದ ಧರ್ಮವನ್ನು ಪ್ರತಿಪಾಳಿಸುವವರನ್ನು ಹೇಳು ವಾಗ ಕೆರೆಗೂಡಱ್ ಗ್ರಾಮವು ಉಲ್ಲಿಖಿತವಾಗಿದೆ. ಇದೇ ಈಗಿನ ಕೆರೆಗೋಡು ರಂಗಾಪುರವು. ಈ ಶಾಸನವನ್ನು ಕೊರೆದವನು ವಿಶ್ವ ಕರ್ಮಾಚಾರ್ಯನು.

೨. ಬಿಳಿಯೂರ ಶಿಲಾಶಾಸನ.[3] — ಸತ್ಯವಾಕ್ಯ ರಾಜಮಲ್ಲನು ತನ್ನ ೧೮ನೆಯ ವರ್ಷವಾದ ಶಕ ೮೦೯ರ ಫಾಲ್ಗುಣ ಶ್ರೀಪಂಚಮಿಯ ದಿನ ಪೆನ್ನೆ ಕಡಂಗದ ಸತ್ಯವಾಕ್ಯ ಜಿನಾಲಯಕ್ಕೆ ಪೆರ್ಬ್ಬೊಱೆಗೆರೆಯ ಬಿಳಿ ಊರಿಗೆ

---

[1] ಮೈಸೂರು ಜಿಲ್ಲೆ, ಹುಣಸೂರು ೯೨.

[2] *Mysore Arch. Report,* 1910.

[3] *Coorg Inscriptions,* 2.

ಸೇರಿದ ಹನ್ನೆರಡು ಹಳ್ಳಿಗಳನ್ನು ಸರ್ವಬಾಧಾಪರಿಹಾರವಾಗಿ ಶಿವಣಂದಿ ಸಿದ್ಧಾಂತದ ಭಟ್ಟಾರರ ಶಿಷ್ಯ ಸರ್ವಣಂದಿ ದೇವರ ಕೈಯಲ್ಲಿ ಕೊಟ್ಟನು.

೩. ಗಟ್ಟವಾಡಿ ತಾಮ್ರಶಾಸನ.— ಇದು ಶಕ ೮೨೬, ಮಾರ್ಗಶಿರಮಾಸ, ಪೌರ್ಣಮಿ, ಮೃಗಶಿರ ನಕ್ಷತ್ರ, ಆದಿತ್ಯವಾರ ಚಂದ್ರಗ್ರಹಣದ ಮುಹೂರ್ತದಲ್ಲಿ ಹುಟ್ಟಿದ್ದು. ನೀತಿಮಾರ್ಗ ಎಱೆಗಂಗನು ತನ್ನ ದೊಡ್ಡಪ್ಪನಾದ ಸತ್ಯವಾಕ್ಯ ರಾಜಮಲ್ಲನ ಅನುಜ್ಞೆಯಿಂದ ಕೌಶಿಕ ಗೋತ್ರದ ಶಿವಾರ್ಯನೆಂಬ ಬ್ರಾಹ್ಮಣನಿಗೆ ಶಿವಾರ್ಯ ಮಂಗಲವೆಂಬ ಗ್ರಾಮವನ್ನು ದಾನಮಾಡಿದನು. ಶಿವಾರ್ಯನು ಒಂದು ಕೆರೆಯನ್ನು ಕಟ್ಟಿಸಿ ಅದರ ಸುತ್ತಲು ಒಂದು ಗ್ರಾಮವನ್ನು ನಿರ್ಮಾಣಮಾಡಿ ಅದಕ್ಕೆ ಶಿವಾರ್ಯ ಮಂಗಲವೆಂದು ಹೆಸರಿಟ್ಟಿದ್ದನೆಂದೂ ಮಂಗಲಿ ಅರಣ್ಯದಲ್ಲಿ ಉಗಮವಾಗಿದ್ದ ಬಿದಿರಮ, ಪೂಲಿವಳ್ಳ, ಮಾವುಮಮ್ಮ ಎಂಬ ಮೂರು ಹಳ್ಳಗಳ ನೀರನ್ನು ಕೆರೆಯು ಉಣ್ಣುತ್ತಿತ್ತೆಂದೂ ಬರೆದಿದೆ. ಶಿವಾರ್ಯನು ಆ ಗ್ರಾಮದಲ್ಲಿ ೧೨೦ ಭಾಗಗಳನ್ನು ಮಾಡಿ ಅರ್ಧವನ್ನು ಯುಕ್ತಾಚಾರ ಬ್ರಾಹ್ಮಣರಿಗೆ ಕೊಟ್ಟು ಉಳಿದುದನ್ನು ತನ್ನ ವಂಶಜರ ಉಪಭೋಗ ಕ್ಕಾಗಿ ಇಟ್ಟುಕೊಂಡನು. ಇವನ ಪೂರ್ವಜರು ಅಹಿಚ್ಛತ್ರದಿಂದ ಬಂದು ವನವಾಸಿ ವಿಷಯದಲ್ಲಿದ್ದ ತಾಣಗುಂದೂರ ಗ್ರಾಮದಲ್ಲಿ ನೆಲಸಿದ್ದರೆಂದು ಹೇಳಿದೆ. ಶಿವಾರ್ಯನು 'ಗಂಗಾನಾಂ ರಾಜ್ಯಯಾನ ಪ್ರಣಯನ ಚತುರಃ' (ಗಂಗರಾಜ್ಯವೆಂಬ ರಥವನ್ನು ನಡೆಯಿಸುವುದ ರಲ್ಲಿ ನಿಪುಣನು) ಎಂದು ವರ್ಣಿತನಾಗಿದ್ದಾನೆ.

ಯಳಂದೂರು ತಾಲೂಕಿನ ಕೃಷ್ಣಾಪುರ ಲಿಪಿಯಲ್ಲಿ ಸತ್ಯವಾಕ್ಯ ಪೆರ್ಮಾನಡಿಯು ಪೃಥಿವೀರಾಜ್ಯಂಗೆಯ್ಯುವಾಗ ನೀತಿಮಾರ್ಗ ಪೆರ್ಮಾನಡಿಯು ಮಲ್ಲಿಕಾರ್ಜುನನೆಂಬ ವೀರನಿಗೆ ಕಲ್ನಾಡು ಕೊಟ್ಟಂತೆ ಹೇಳಿದೆ. ಇದರಲ್ಲಿ ಶಕವರ್ಷ ನಿರ್ದೇಶಕ ಅಂಕಗಳಲ್ಲಿ ಮೊದಲಿನ ಎರಡು ಅಂಕಗಳು ಮಾತ್ರ (೮೪) ಉಳಿದಿವೆ. ಮತ್ತು . . ಷಮಾಸ ಶುಕ್ಲಪಕ್ಷ ಉತ್ತರಾಭಾದ್ರಪದ ನಕ್ಷತ್ರ ಬೃಹಸ್ಪತಿವಾರ ಎಂದು ಕಾಲಾಂಗಗಳೂ ಕೊಡಲ್ಪಟ್ಟಿವೆ. ಶಕ ೮೪೦ ರಿಂದ ೮೪೯ ರ ವರೆಗಿನ ವರ್ಷಗಳಲ್ಲಿ ಈ ಅಂಗಗಳು ಮೂರುಸಲ ಮಾತ್ರ ಕೂಡುತ್ತವೆ: (೧) ಕ್ರಿ. ಶ. ೯೧೯, ದಿಶೆಂಬರ ೨, (೨) ಕ್ರಿ. ಶ. ೯೨೨, ದಿಶೆಂಬರ ೨೬, (೩) ಕ್ರಿ. ಶ. ೯೨೬, ದಿಶೆಂಬರ ೧೪. ಅರಕೂಲ ತಾಲೂಕಿನ ಸಿರದನ ಹಳ್ಳಿಯ ಶಿಲಾಶಾಸನದಿಂದ ಶಕ ೮೪೩ (ಕ್ರಿ. ಶ. ೯೨೧) ರಲ್ಲಿ ನೀತಿಮಾರ್ಗದೆಱೆಯಪ್ಪ ಪೆರ್ಮಾನಡಿಯ ಮಗ ಸತ್ಯವಾಕ್ಯ ಪೆರ್ಮಾನಡಿಯು ಕಲ್ನಾಡುಗೊಟ್ಟನೆಂದು

ಗೊತ್ತಾಗುವುದರಿಂದ ಕ್ರಿ. ಶ. ೯೨೧ ರೊಳಗಾಗಿಯೇ ಎಱೆಯಪ್ಪನ ಮಗನಾದ ಸತ್ಯವಾಕ್ಯ ನರಸಿಂಹ ದೇವನು ಪಟ್ಟಕ್ಕೆ ಬಂದಿರಬೇಕು. ಇದರಿಂದ ಕೃಷ್ಣಾಪುರ ಲಿಪಿಯ ಕಾಲವು ಕ್ರಿ. ಶ ೯೧೯ ತ್ತೆಂದೇ ನಿರ್ಧರಿಸಬೇಕಾಗುತ್ತದೆ.[1] ರಾಜಮಲ್ಲ ಎಱೆಯಪ್ಪರು ಕಡೆಯವರೆಗೆ ಅಂದರೆ ಕ್ರಿ. ಶ. ೯೧೯–೨೦ ರ ವರೆಗೆ ಕೂಡಿಯೇ ರಾಜ್ಯಭಾರಮಾಡುತ್ತಿದ್ದರೆಂದು ಸ್ಪಷ್ಟವಾಗುತ್ತದೆ.

ಎಱೆಯಪ್ಪನು ತನ್ನ ದೊಡ್ಡಪ್ಪನಾದ ೨ನೆಯ ರಾಜಮಲ್ಲನೊಂದಿಗೆ ಕ್ರಿ. ಶ. ೮೮೬ ರಿಂದ ೯೧೯ ರ ವರೆಗೆ ಗಂಗರಾಜ್ಯವನ್ನು ಪಾಲಿಸಿದನೆಂದು ಮೇಲೆ ಹೇಳಿದ್ದೇವೆ. ಇವನು ಬಹು ಪ್ರತಾಪಶಾಲಿಯಾದ ರಾಜನು. ಬಹುಕಾಲದಿಂದಲೂ ಗಂಗಮನೆತನಕ್ಕೆ ಸೇವಕರಾಗಿದ್ದ ನೊಳಂಬ ಪಲ್ಲವರು ಪ್ರತಿಭಟಿಸಲು ಅವರನ್ನು ನಿರ್ಮೂಲ ನಾಶಮಾಡಬೇಕೆಂಬ ಛಲದಿಂದ ಅನುಕೂಲವಾದ ಸಮಯವನ್ನು ಕಾಯುತ್ತಿದ್ದನು. ತನ್ನ ತಂದೆಯಾದ ಬೂತುಗನು ಉದ್ಧಟನಾಗಿದ್ದ ಮಹೇಂದ್ರನನ್ನು ಅನೇಕ ಸಮರಗಳಲ್ಲಿ ಸೋಲಿಸಿ ಅವನ ಸೊಕ್ಕನ್ನು ಮುರಿದಿದ್ದನು. ಆದರೂ ತನ್ನ ಹಟವನ್ನು ಬಿಡದೆ ಸ್ವತಂತ್ರನಾಗಿಯೇ ಉಳಿಯಬೇಕೆಂದು ಹವಣಿಸುತ್ತಿದ್ದ ನೊಳಂಬ ಮಹೇಂದ್ರನನ್ನು ಎಱೆಯಪ್ಪನು ಅತಿ ರೌದ್ರವಾದ ಯುದ್ಧದಲ್ಲಿ ಕೊಂದು ನೊಳಂಬನ ರಾಜ್ಯದ ಆಯಮೆಟ್ಟುಗಳಾದ ಸೂಜೂರು, ನಾಡುಗಾಣಿ, ಮಿಡಿಗೆ, ಸೂಳಿಶೈಲೇಂದ್ರ, ತಿಪ್ಪೇರು, ಪೆಂಜೆಱು ಮೊದಲಾದ ಅಭೇದ್ಯವಾದ ದುರ್ಗಗಳನ್ನು ಸ್ವಾಧೀನಪಡಿಸಿಕೊಂಡನು.[2] ಮಹೇಂದ್ರನು ಕ್ರಿ. ಶ. ೮೯೫ ರಲ್ಲಿ ಬದುಕಿದ್ದುದರಿಂದ ಮೇಲೆ ಹೇಳಿದ ಅವನ ಕೊನೆಯು ಆ ವರ್ಷವಾದ ಮೇಲೆ ಆಗಿರಬೇಕು. ಮದ್ದಗಿರಿ ತಾಲೂಕಿನ ಕೊಡ್ಲಾಪುರದ ಒಂದು ಲಿಪಿಯಲ್ಲಿ[3] ನೊಳಂಬಾಧಿರಾಜ ನೊಳಿಪಯ್ಯನು ಶಕ

---

[1] ಮದ್ದಗಿರಿ ೫೨.

[2] ೨ನೆಯ ರಾಜಮಲ್ಲ ೨ನೆಯ ಎಱೆಯಪ್ಪರು ಕೂಡಿಯೇ ಆಳುತ್ತಿದ್ದರೆಂಬುದು ಗೊತ್ತಿರುವುದರಿಂದಲೂ ಈ ಎಱೆಯಪ್ಪನ ಮಕ್ಕಳಾದ ನರಸಿಂಹ ರಾಚಮಲ್ಲರಿಗೆ ಅನುಕ್ರಮವಾಗಿ ಸತ್ಯವಾಕ್ಯ ನೀತಿಮಾರ್ಗ ಎಂಬ ಬಿರುದುಗಳಿದ್ದರೂ ಅವರು ಕೂಡಿ ಆಳಿದ ಸಂಗತಿಯು ತಿಳಿದಿಲ್ಲವಾದುದರಿಂದಲೂ ಕೃಷ್ಣಾಪುರ ಲಿಪಿಯ ರಾಜರು ೨ನೆಯ ರಾಚಮಲ್ಲ ಎಱೆಯಪ್ಪರೆಂದೇ ಹೇಳಬಹುದು. ಆದುದರಿಂದ ಆ ಲಿಪಿಯ ಕಾಲವು ಕ್ರಿ ಶ. ೯೨೨ ಅಥವಾ ೯೨೬ ಆಗಲಾರದು.

[3] ಮಾರಸಿಂಹನ ಕೂಡಲೂರು ತಾಮ್ರಶಾಸನ. *M. A. R.* 1921, ಅರಕೇರಿ ವೀರಗಲ್ಲು, *Ibid*, 1911 p. 37,

೮೨೦ (ಕ್ರಿ. ಶ. ೮೯೮) ರಲ್ಲಿ ಪೃಥ್ವೀರಾಜ್ಯಂಗೆಯ್ಯುತ್ತಿದ್ದನೆಂದೂ ಆವನಿಯ ಒಂದು ಶಾಸನದಲ್ಲಿ ಪೊೞಲ್ಚೋರನ ಅಗ್ರಮಹಿಷಿಯಾದ ದೀವಬ್ಬೆಯು ‘ಕನೀಯು ಸಂದನ’ನಾದ ಇಱಿವನೊಳಂಬನ ಆಳಿಕೆಯಲ್ಲಿ ಮಹೇಂದ್ರನ ಪರೋಕ್ಷಾರ್ಥವಾಗಿ ನೊಳಂಬ ನಾರಾಯಣೇಶ್ವರನ ಗುಡಿಯನ್ನು ಕಟ್ಟಿಸಿದಳೆಂದೂ ಬರೆದಿದೆ.[1] ಮಹೇಂದ್ರನ ತಮ್ಮನಾದ ಇಱಿವನೊಳಂಬನೇ ಕೋಡ್ಲಾಪುರ ಲಿಪಿಯ ನೊಳಿಪಯ್ಯನಾಗಿರಬೇಕು. ಇದರಿಂದ ಕ್ರಿ. ಶ. ೮೯೫–೮೯೮ರ ಮಧ್ಯದಲ್ಲಿ ಎಱೆಯಪ್ಪನು ಮಹೇಂದ್ರನನ್ನು ಕೊಂದನೆಂಬುದು ಸ್ಪಷ್ಟವಾಗುತ್ತದೆ.

ಎಱೆಯಪ್ಪನು ಹೀಗೆ ಹಗೆಗಳನ್ನೆಲ್ಲ ನಿಕ್ಷತ್ರಂ ಮಾಡಿ ಏಕಚ್ಛತ್ರಚ್ಛಾಯೆಯಲ್ಲಿ ಆಳುತ್ತಿರಲು ವೀರಮಹೇಂದ್ರನು ಗಂಗರಾಜ್ಯದ ಮೇಲೆ ದಂಡೆತ್ತಿ ಬಂದನು. ಎಱೆಯಪ್ಪನು ಸಾಮಂತ ಸಹಿತವಾದ ಸೈನ್ಯವನ್ನು ಕೊಟ್ಟು ಅವನೊಂದಿಗೆ ಕಾದಲೆಂದು ಅಯ್ಯಪನನ್ನು ಕಳುಹಿಸಿದನು. ತುಂಬೆಪಾಡಿಯಲ್ಲಿ ಇವೆರಡು ಪಕ್ಷದವರಿಗೂ ತುಮುಲವಾದ ಯುದ್ಧವಾಯಿತು.[2] ಧರ್ಮಪುರಿ ಲಿಪಿಯಲ್ಲಿ ಅಮ್ಮಣರಾಯನು ಅಯ್ಯಪನ ಶತ್ರುವೆಂದು ಬರೆದಿರುವುದರಿಂದ ಈ ವೀರಮಹೇಂದ್ರನು ಪೂರ್ವಚಾಳುಕ್ಯ ಮನೆತನದ ರಾಜಮಹೇಂದ್ರನೆಂದು ಹೆಸರಾದ ೧ನೆಯ ಅಮ್ಮರಾಜನೆಂದೇ ಹೇಳಬೇಕಾಗುತ್ತದೆ. ‘ಪಗೆವರೆಲ್ಲಮುಂ ನಿಕ್ಷತ್ರಂ ಮಾಡಿ ಗಂಗವಾಡಿ ತೊಂಭತ್ತಱುಸಾಸಿರ ಮುಮನೇಕಚ್ಛತ್ರಚ್ಛಾಯೆಯೊಳಾಳುತ್ತಮಿರ್ದು’ ಎಂದು ಅದೇ ಬೇಗೂರ ಶಾಸನದಲ್ಲಿ ಬರೆದಿರುವುದರಿಂದ ಗಂಗರ ಮುಖ್ಯ ಶತ್ರುವಾಗಿದ್ದ ನೊಳಂಬ ಮಹೇಂದ್ರನು ಇಷ್ಟರಲ್ಲಿ ಹತನಾಗಿದ್ದನೆಂದು ಊಹಿಸಬಹುದು. ಇದರಿಂದ ಅಲ್ಲಿ ಉಕ್ತನಾದ ವೀರ ಮಹೇಂದ್ರನು ನೊಳಂಬನಾಗಲಾರನೆಂಬುದು ಸ್ಪಷ್ಟವಾಗುತ್ತದೆ.[3]

---

[1] ಮುಳ್ಬಾಗಿಲ ೩೮.

[2] ಬೆಂಗಳೂರು ೮೩. *Ep. Ind.* Vol, VI, p. 48.

[3] ರಾಜಮಹೇಂದ್ರನೆಂಬ ಬಿರುದುಳ್ಳ ೧ನೆಯ ಅಮ್ಮರಾಜನೇ ಈ ವೀರಮಹೇಂದ್ರನೆಂದು ಕೃಷ್ಣಶಾಸ್ತ್ರಿಗಳು ಹೇಳಿದ್ದಾರೆ. (*M. E. R* 1910). ರಾಯಿಸರು ಈ ವೀರ ಮಹೇಂದ್ರನು ಅಯ್ಯಪನ ತಂದೆಯಾದ ಮಹೇಂದ್ರನೆಂದೂ ಅವನ ಪರವಾಗಿ ಯುದ್ಧ ಮಾಡುತ್ತಿದ್ದ ಅಯ್ಯಪನ ಮೇಲೆ ಎಱೆಯಪ್ಪನು ನಾಗತ್ತರ ದಂಡನ್ನು ಕಳುಹಿಸಿದನೆಂದೂ ಬರೆದಿದ್ದಾರೆ. ಕೀಲ್ಹಾರ್ನರ ಅಭಿಪ್ರಾಯವೂ ರಾಯಿಸರದಿದ್ದಂತೆ ಆದೆ. (*Supplement to Southern List*, P. 6, fn. 5). ಫ್ಲೀಟರು ಮಾತ್ರ ಗಂಡ ಮಹೇಂದ್ರನೆಂಬ ಬಿರುದುಳ್ಳ ೨ನೆಯ ಭೀಮನೇ ಈ ವೀರಮಹೇಂದ್ರನೆಂದು ಬರೆದಿದ್ದಾರೆ. ಆದರೆ ಎಱೆಯಪ್ಪನ ಕಾಲದಲ್ಲಿ (ಕ್ರಿ. ಶ. ೮೮೬-೯೧೯) ೨ನೆಯ ಭೀಮನು (ಕ್ರಿ. ಶ. ೯೨೮-೯೪೦) ಇನ್ನೂ ಪಟ್ಟಕ್ಕೆ ಬಂದಿದ್ದಿಲ್ಲ.

ಕ್ರಿ. ಶ. ೯೦೩ ರ ಚಿಕ್ಕಸಾರಂಗಿ ಶಾಸನದಲ್ಲಿ[1] ರಾಷ್ಟ್ರಕೂಟ ೨ನೆಯ ಕೃಷ್ಣರಾಜನ ಸಾಮಂತನಾಗಿದ್ದ ದಾಮಪ್ಪೈಯನು ದಕ್ಷಿಣದಿಶಾವರಕ್ಕೆಲ್ಲ ಅಧಿಪತಿಯಾಗಿ ಮಣ್ಣೆಯಲ್ಲಿದ್ದನೆಂದು ಬರೆದಿದೆ. ಇದರಿಂದ ಮಣ್ಣೆ ಮತ್ತು ಅದರ ಸುತ್ತಲಿನ ಕೆಲವು ಭಾಗಗಳು ಈ ಕಾಲದಲ್ಲಿ ರಾಷ್ಟ್ರಕೂಟರ ವಶದಲ್ಲಿದ್ದವೆಂದು ಗೊತ್ತಾಗುತ್ತದೆ. ಗಂಗರ ಮಹಾಸಾಮಂತನಾಗಿದ್ದ ನೊಳಂಬ ಮಹೇಂದ್ರನು ಮಹಾಬಲಿ ಕುಲಧ್ವಂಸನ ಕಾಲದಲ್ಲಿ ಅಂದರೆ ಕ್ರಿ. ಶ. ೮೯೩ಕ್ಕೆ ಮೊದಲು ಮಣ್ಣೆ ಪ್ರಾಂತವನ್ನು ಬಾಣರಿಂದ ತೆಗೆದುಕೊಂಡಿದ್ದನೆಂದು ಮೇಲೆ ಹೇಳಿದೆ. ತಿರುಗಿ ಗಂಗರ ವಶಕ್ಕೆ ಬಂದಿದ್ದ ಈ ಪ್ರಾಂತವು ಯಾವ ಸಂದರ್ಭದಲ್ಲಿ ರಾಷ್ಟ್ರಕೂಟರ ಕೈಸೇರಿತೋ ತಿಳಿಯದು. ಆದರೆ ನೀತಿಮಾರ್ಗ-ಎಱೆಯಪ್ಪನ ಕಾಲದಲ್ಲಿ ಬಲ್ಲಹನ ದಂಡು ಕೆಂಬೊಳಲ್ಗೆ ಬಂದಿತ್ತೆಂದು ಗೊತ್ತಿರುವುದರಿಂದ ಆಗ ರಾಷ್ಟ್ರ ಕೂಟರು ಈ ಭಾಗವನ್ನು ಗಂಗರಿಂದ ಸೆಳೆದುಕೊಂಡಿರಬಹುದು.

೨ನೆಯ ಸತ್ಯವಾಕ್ಯ ರಾಜಮಲ್ಲ, ನೀತಿಮಾರ್ಗ ಎಱೆಯಪ್ಪರಿಬ್ಬರೂ ಕೂಡಿ ಆಳುತ್ತಿದ್ದಾಗ ಬಲಿವಂಶದ ಶ್ರೀ ಮುತ್ತರಸನು ಆಸಂದಿ ನಾಡಿಗೆ ಪ್ರಭು ವಾಗಿದ್ದನೆಂದು ಅರಕೇರಿ ಶಾಸನದಲ್ಲಿ ಒರೆದಿದೆ. ಹೆಗ್ಗಡ ದೇವನ ಕೋಟೆಯ ಲಿಪಿಯಲ್ಲಿ[2] ನೀತಿಮಾರ್ಗ ಪೆರ್ಮಾನಡಿಯ ಕೈಕೆಳಗೆ ಗಂಗ ಕುಲತಿಲಕ ರಾಜನ್ಯ ಚೂಡಾಮಣಿ ಎಱೆಯಪ್ಪರಸನು ಸುಗುನಾಡು ಸಪಲೆನಾಡುಗಳನ್ನು ಆಳುತ್ತಿದ್ದನೆಂದು ಹೇಳಿದೆ. ಅಲ್ಲಿಯೇ ಪೆರ್ಮಾನಡಿಯೂ ಎಱೆಯಪ್ಪನೂ ಕೂಡಿ ಕಲ್ನಾಡುಗೊಟ್ಟರೆಂದು ಹೇಳಿರುವುದರಿಂದ ಈ ಎಱೆಯಪ್ಪನು ನೀತಿ ಮಾರ್ಗ್ಗ ಪೆರ್ಮಾನಡಿ ಎಱೆಯಪ್ಪನಾಗಲಾರನು. ಎಱೆಯಪ್ಪನಿಗೆ ಧರಸೇನ ನೆಂಬ ಮಂತ್ರಿಯೂ ಗೋವಿಂದರನೆಂಬ ಅಧಿಕಾರಿಯೂ ಇದ್ದಂತೆ ಚಿಕ್ಕಹಸ ಸೋಗೆ ಲಿಪಿಯಲ್ಲಿ ಹೇಳಿದೆ.

ಎಱೆಯಪ್ಪನು ಸರ್ವ ಅರ್ಥಿಜನರ ಬೇಡಿಕೆಗಳನ್ನು ಪೂರೈಸುತ್ತಿದ್ದನಾದು ದರಿಂದ ಕಾಮದನೆಂದೂ ಅನೇಕ ಸಂಗ್ರಾಮಗಳಲ್ಲಿ ಜಯಭೇರಿಯನ್ನು ಹೊಡಿಸಿ ದುದರಿಂದ ಜಯಡಂಕಕಾರನೆಂದೂ ಯಥಾಸ್ಥಾನನಿಯೋಜಿತವಾದ ಸಾಮಾದ್ಯು ಪಾಯಗಳಿಂದ ತನ್ನ ಜನರಿಗೆ ಅಭಿವೃದ್ಧಿಯನ್ನುಂಟುಮಾಡುತ್ತಿದ್ದನಾದುದರಿಂದ ಜನೋದಯನೆಂದೂ ಕಲಿಪ್ರಾಬಲ್ಯದಿಂದ ಮಲಿನವಾಗಿದ್ದ ತ್ರಿಭುವನವನ್ನು

[1] *Mysore Arch. Report*, 1910.
[2] *Ep. Carn.* Vol. III, Heggaḍadēvanakōṭe 103.

ತನ್ನ ಗುಣಾತಿಶಯದಿಂದ ಬೆಳಗಿಸುತ್ತಿದ್ದನಾದುದರಿಂದ ತ್ರಿಭುವನಾಭರಣನೆಂದೂ ಕುಮಾರ ಬೆಡಂಗನೆಂದೂ ಬಿರುದುಗಳಿಂದ ಪ್ರಸಿದ್ಧನಾಗಿದ್ದನು. ಇವನು ಗೇಯವಾದ್ಯ ನೃತ್ಯ ಮೊದಲಾದ ವಿದ್ಯೆಗಳಲ್ಲಿ ಭರತನಂತೆ ಇದ್ದನು. ವ್ಯಾಕರಣ ಶಾಸ್ತ್ರದಲ್ಲಿಯೂ ಇವನಿಗೆ ಪಾಂಡಿತ್ಯವೆಂದು ಮಾರಸಿಂಹನ ಕೂಡಲೂರ ತಾಮ್ರಶಾಸನದಿಂದ ತಿಳಿಯುತ್ತದೆ. ಚಾಳುಕ್ಯವಂಶದ ನಿಜಗಲಿ ರಾಜನ ಮಗ ಳಾದ ಜಾಕಾಂಬೆಯನ್ನು ಇವನು ಮದುವೆಯಾಗಿದ್ದನು. ಇವನಿಗೆ (ಸತ್ಯವಾಕ್ಯ) ನರಸಿಂಹ, (ನೀತಿಮಾರ್ಗ) ರಾಜಮಲ್ಲ, (ಸತ್ಯವಾಕ್ಯ) ಬೂತುಗ ಎಂಬ ಮೂವರು ಮಕ್ಕಳಿದ್ದರು. ಇವರಲ್ಲಿ ನರಸಿಂಹನು ಜಾಕಾಂಬೆಯ ಹೊಟ್ಟೆ ಯಲ್ಲಿ ಹುಟ್ಟಿದವನೆಂದು ಅದೇ ಲಿಪಿಯಲ್ಲಿ ಬರೆದಿದೆ.

ಎಱೆಯಪ್ಪನ ತರುವಾಯದಲ್ಲಿ ಅವನ ಹಿರಿಯ ಮಗನಾದ ಸತ್ಯವಾಕ್ಯ ನರಸಿಂಹನು ಸು. ೯೨೦ ರಲ್ಲಿ ಪಟ್ಟಬದ್ಧನಾದನು. ಮಾರಸಿಂಹನ ಕುಡಲೂರ ಶಾಸನದಲ್ಲಿ ಇವನ ಪರಾಕ್ರಮವು ಹೀಗೆ ವರ್ಣಿತವಾಗಿದೆ. 'ಇವನು ಖಡ್ಗ ಪಾಣಿಯಾಗಿ ಯುದ್ಧರಂಗವನ್ನು ಹೊಕ್ಕ ಕೂಡಲೇ ಆಂಧ್ರರು ಗವಿಗಳಲ್ಲಿ ಅಡಗಿದರು ; ಶಕರಾಜರು ಸಮುದ್ರದೊಳಗೆ ಅವಿತುಕೊಂಡರು ; ಪಾಂಡ್ಯರು ಪಲಾಯನ ಮಾಡಿದರು ; ಸಿಂಹಳರು ಬಿಲಗಳನ್ನು ಸೇರಿದರು ; ಕೇರಳರಾಜರು ಪಾತಾಳವನ್ನು ಪ್ರವೇಶಿಸಿದರು. ಪಲ್ಲವರು ಕಾಲಮೃತ್ಯುವಿನ ಬಾಯಿಗೆ ತುತ್ತಾದರು. ಈ ಪರಾಕ್ರಮಗಳಲ್ಲಿ ನರಸಿಂಹನು ಸೋಲಿಸಿದ ರಾಜರಾರೆಂಬುದು ಶಾಸನಗಳಲ್ಲಿ ಹೇಳಿಲ್ಲ. ಈ ಕಾಲದಲ್ಲಿ ಆಂಧ್ರದೇಶದಲ್ಲಿ ೧ನೆಯ ಅಮ್ಮರಾಜ (ಕ್ರಿ. ಶ. ೯೧೮-೯೨೫) ೨ನೆಯ ಭೀಮ (ಕ್ರಿ. ಶ. ೯೩೪-೯೪೫) ಇವರ ನಡುವೆ ೬ ಜನ ರಾಜರು ಒಬ್ಬರನ್ನೊಬ್ಬರು ಕೊಂದು ಇಲ್ಲವೆ ಸೋಲಿಸಿ ಸಿಂಹಾಸನಕ್ಕಾಗಿ ಹೋರಾಡುತ್ತಿದ್ದರು. ೨ನೆಯ ಯುದ್ಧಮಲ್ಲನ (ಕ್ರಿ. ಶ. ೯೨೭-೯೩೩) ಸಹಾಯಕ್ಕೆ ಹೋಗಿದ್ದ ರಾಷ್ಟ್ರಕೂಟ ೪ನೆಯ ಗೋವಿಂದ ರಾಜನ ಸೈನ್ಯವನ್ನು ೨ನೆಯ ಭೀಮನು ಚದರಿಸಿದನೆಂದು ಹಿಂದೆ ಹೇಳಿದೆ. ಈ ಸಮಯದಲ್ಲಿ ರಾಷ್ಟ್ರಕೂಟರ ಬಂಧುಗಳಾಗಿದ್ದ ಗಂಗರು ಅವರೊಡನೆ ಯುದ್ಧಮಲ್ಲನ ಸಹಾಯಕ್ಕೆ ಹೋಗಿದ್ದಿರಬಹುದು. ಪಾಂಡ್ಯರಾಜನು ೩ನೆಯ ರಾಜಸಿಂಹನು (ಸು. ಕ್ರಿ. ಶ. ೯೧೨). ಇವನು ಚೋಳರಾಜನಾದ ೧ನೆಯ ಪರಾಂತಕನೊಡನೆ ಮಾಡಿದ ೩ ಯುದ್ಧಗಳಲ್ಲಿಯೂ ಸಿಂಹಳರಾಜನ ಸಹಾಯ ವನ್ನು ಪಡೆದಿದ್ದನು. ಕೇರಳರಾಜ ಮನೆತನದ ವಾನವನ್ಮಹಾದೇವಿಯು ಇವನ ತಾಯಿಯು. ಈ ಮೂರು ರಾಜರು ಒಂದಾಗಿ ಗಂಗನ ಮೇಲೆ ಯುದ್ಧಮಾಡಿ ದರೋ ಪ್ರತ್ಯೇಕವಾಗಿ ಮಾಡಿದರೋ ಹೇಳಲು ಆಧಾರಗಳಿಲ್ಲ. ಕಂಚಿಯ

ಪಲ್ಲವರು ಸು. ೮೯೦ ರಲ್ಲಿ ಚೋಳಮನೆತನದ ೧ನೆಯ ಆದಿತ್ಯನಿಂದ ಪರಾಜಿತರಾಗಿ ರಾಜ್ಯಭ್ರಷ್ಟರಾಗಿದ್ದರು. ಆದುದರಿಂದ ಮೇಲೆ ಹೇಳಿದ ಪಲ್ಲವರು ನೊಳಂಬಪಲ್ಲವರೇ. ಈಗಿನ ನೊಳಂಬರಾಜನು ಅಯ್ಯಪದೇವನಾಗಿದ್ದನು. ಇವನು ಬಹು ಪರಾಕ್ರಮಿಯಾದ ಎಱೆಯಪ್ಪನ ಕಾಲದಲ್ಲಿ ಸಾಮಂತನಾಗಿ ಉಳಿದು ಅವನ ಆಜ್ಞೆಯ ಮೇರೆಗೆ ಚಳುಕ್ಯ ಅಮ್ಮರಾಜನ ಮೇಲೆ ದಂಡೆತ್ತಿ ಹೋಗಿದ್ದರೂ ನರಸಿಂಹನು ಪಟ್ಟಕ್ಕೆ ಬಂದ ಮೇಲೆ ಗಂಗರ ಪ್ರಭುತ್ವವನ್ನು ಮನ್ನಿಸದೆ ಸ್ವತಂತ್ರನಾಗಲು ಹವಣಿಸಿದಂತೆ ತೋರುತ್ತದೆ.

ನರಸಿಂಹನು ಚಿಕ್ಕವಯಸ್ಸಿನಲ್ಲಿಯೇ ರಾಜನೀತಿಯನ್ನು ಚನ್ನಾಗಿ ಅಧ್ಯಯನಮಾಡಿದ್ದನು. ಕಾವ್ಯ, ನಾಟಕ, ಇತಿಹಾಸ, ಪುರಾಣ, ವ್ಯಾಕರಣಶಾಸ್ತ್ರ, ವೈದ್ಯಶಾಸ್ತ್ರ, ತರ್ಕಶಾಸ್ತ್ರ, ಗಣಿತಶಾಸ್ತ್ರ, ಭರತಶಾಸ್ತ್ರ ಮತ್ತು ನೃತ್ಯವಿದ್ಯೆ ಇವೆಲ್ಲವುಗಳಲ್ಲಿ ಒಳ್ಳೇ ಪ್ರಾವೀಣ್ಯವನ್ನು ಸಂಪಾದಿಸಿದ್ದನು. ಅಶ್ವಗಜಾರೋಹಣಗಳಲ್ಲಿಯೂ ಕಂದುಕಕ್ರೀಡೆಯಲ್ಲಿಯೂ [1] ಧನುಸ್ಸು ಖಡ್ಗ ಮೊದಲಾದ ಶಸ್ತ್ರಗಳ ಪ್ರಯೋಗದಲ್ಲಿಯೂ ಇವನ ಸಮಾನರಾರೂ ಇರಲಿಲ್ಲ. ಇವನಿಗೆ ಪರಾಕ್ರಮಸೂಚಕವಾದ ಬೀರಬೆಡಂಗ ಎಂಬ ಬಿರುದು ಇದ್ದಿತು.

ನರಸಿಂಹನ ಶಾಸನಗಳಾವುವೂ ಹೊರಬಿದ್ದಿಲ್ಲ. ಸಿರದನಹಳ್ಳಿ ಶಿಲಾಶಾಸನವು ಇವನದಿರಬೇಕೆಂದು ಮೇಲೆ ತಿಳಿಸಿದ್ದೇವೆ.

ನರಸಿಂಹನ ತರುವಾಯದಲ್ಲಿ ಅವನ ತಮ್ಮನಾದ ನೀತಿಮಾರ್ಗ ೩ನೆಯ ರಾಜಮಲ್ಲನು ಗಂಗಸಿಂಹಾಸನವನ್ನೇರಿದನು. ಇವನಿಗೆ ಕಚ್ಚೆಯಗಂಗ ಎಂಬ ಬಿರುದು ಇತ್ತು. ತಳಕಾಡಿನ ಒಂದು ಶಿಲಾಶಾಸನದಲ್ಲಿ [2] ಶಕ ೮೫೭ನೆಯ ವಿಜಯ ಸಂವತ್ಸರದಲ್ಲಿ (ಕ್ರಿ. ಶ. ೯೩೩) ನೀತಿಮಾರ್ಗ ಪೆರ್ಮಾನಡಿಯು ಪೃಥಿವೀರಾಜ್ಯಂಗೆಯ್ಯುತ್ತಿದ್ದನೆಂದು ಬರೆದಿದೆ. ಸತ್ಯವಾಕ್ಯ ನರಸಿಂಹನು ಕ್ರಿ. ಶ. ೯೨೧ ರಲ್ಲಿ ರಾಜ್ಯವಾಳುತ್ತಿದ್ದನೆಂದು ತಿಳಿದಿರುವುದರಿಂದಲೂ ೩ನೆಯ

---

[1] ಶಸ್ತ್ರವಿದ್ಯೆಯ ಜೊತೆಗೆ ಕಂದುಕಕ್ರೀಡೆಯೂ ರಾಜಕುಮಾರರ ಶಿಕ್ಷಣದಲ್ಲಿ ಒಂದು ವಿಷಯವಾಗಿತ್ತೆಂದು ಇದರಿಂದ ತಿಳಿಯುತ್ತದೆ. ಈ ಕ್ರೀಡೆಯು ಕೇವಲ ವಿನೋದಕ್ಕಾಗಿ ಇರದೆ ಪೌರುಷವನ್ನು ವೃದ್ಧಿಗೊಳಿಸುವ ಅಂಗಸಾಧನವಾಗಿರಬೇಕು. ಇದಕ್ಕೆ ಈಗಿನ ಪೋಲೋ (Pollo) ಆಟವನ್ನು ಹೋಲಿಸಬಹುದು.

[2]

ರಾಜಮಲ್ಲನಿಗೆ ನೀತಿಮಾರ್ಗವೆಂಬ ಬಿರುದು ಇತ್ತೆಂದು ಮಾರಸಿಂಹನ ಕೂಡಲೂರ ಶಾಸನದಲ್ಲಿ ಹೇಳಿರುವುದರಿಂದಲೂ ಈ ನೀತಿಮಾರ್ಗನು ನರಸಿಂಹನ ತಮ್ಮನಾದ ರಾಜಮಲ್ಲನಾಗಿರಬೇಕು. ಇದರಿಂದ ಇವನು ಪಟ್ಟಕ್ಕೆ ಬಂದುದು ಕ್ರಿ. ಶ. ೯೩೩ ಕ್ಕೆ ಮುಂಚೆ ಎಂದು ನಿರ್ಧಾರವಾಗುತ್ತದೆ. ಇವನ ಆಳಿಕೆಯ ೩ನೆಯ ವರ್ಷದಲ್ಲಿ ನೊಳಂಬ ಅಣ್ಣಿಗನಿಗೂ ಇವನಿಗೂ ಬಿಲ್ಲಕೊತ್ತಮಂಗಲದಲ್ಲಿ ಘೋರವಾದ ಯುದ್ಧವೆಸಗಿ ಅದರಲ್ಲಿ ನೊಳಂಬನಾಳು ಮಡಿದನೆಂದು ಕಲದೇವಪುರದ ಶಾಸನದಲ್ಲಿ[1] ಬರೆದಿದೆ. ಈ ಯುದ್ಧದಲ್ಲಿ ರಾಜಮಲ್ಲನು ಅಣ್ಣಿಗನನ್ನು ಸೋಲಿಸಿ ಹೆದರಿದ್ದ ಅವನಿಗೆ ಕೃಪೆಯಿಂದ ಅಭಯದಾನವನ್ನು ಮಾಡಿದನೆಂದು ಕೂಡಲೂರ ಶಾಸನದಿಂದ ತಿಳಿಯುತ್ತದೆ. ರಾಜಮಲ್ಲನು ವಿಷವೃಕ್ಷದಂತೆ ಬಹು ದುಷ್ಟನಾಗಿದ್ದನು. ಅವನ ದುರ್ವರ್ತನವನ್ನು ಸಹಿಸಲಾರದೆ ಅವನ ತಮ್ಮನಾದ ಬೂತುಗನು ಅವನನ್ನು ಪಟ್ಟದಿಂದ ತಳ್ಳಿ ತಾನೇ ರಾಜನಾಗಬೇಕೆಂದು ಬಯಸಿ ಈ ಕಾಲದಲ್ಲಿ ದಕ್ಷಿಣಹಿಂದುಸ್ಥಾನದಲ್ಲೆಲ್ಲ ಪ್ರಬಲರಾಗಿದ್ದ ರಾಷ್ಟ್ರಕೂಟರ ಬೆಂಬಲವನ್ನು ಪಡೆಯಲಿಚ್ಛಿಸಿ ಅವರನ್ನಾಶ್ರಯಿಸಿದನು. ರಾಷ್ಟ್ರಕೂಟರಿಗಾದರೂ ಈಗ ಬೂತುಗನಂಥ ವೀರರ ಸಹಾಯವು ಬೇಕಾಗಿದ್ದಿತು. ಬದ್ದೆಗನ ಆಜ್ಞೆಯ ಮೇರೆಗೆ ಕೃಷ್ಣನು ಕುಮಾರಭಾವದಲ್ಲಿಯೇ (ಅಂದರೆ ಸು. ಕ್ರಿ. ಶ. ೯೩೫–೩೬ ರಲ್ಲಿ) ದಂತಿಗ ವಪ್ಪುಗರನ್ನು ಸೋಲಿಸಿದನೆಂದು ದೇವೋಳಿ ಶಾಸನದಲ್ಲಿ ಬರೆದಿದೆ.[2] ಮಾರಸಿಂಹನ ಕೂಡಲೂರ ಶಾಸನದಲ್ಲಿ ಬೂತುಗನು ದಂತಿವರ್ಮನನ್ನು ವನವಾಸಕ್ಕಟ್ಟಿ ಅಚಳಪುರದ ಕಕ್ಕರಾಜನನ್ನು ಯಮನ ಬಾಯಿಗೆ ಆಹುತಿಕೊಟ್ಟನೆಂದು ಹೇಳಿದೆ. ಕಕ್ಕನು ವಪ್ಪುಗನ ತಮ್ಮನಾಗಿರಬಹುದೆಂದು ಹಿಂದೆ ಹೇಳಿದ್ದೇವೆ. ಇದರಿಂದ ಬೂತುಗನು ಈ ಶತ್ರುಗಳನ್ನು ಸೋಲಿಸುವುದರಲ್ಲಿ ಕೃಷ್ಣನಿಗೆ ನೆರವಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಡಾಹಳ ದೇಶದ ತ್ರಿಪುರಿಯಲ್ಲಿ ಬೂತುಗನು ಬದ್ದೆಗನ ಮಗಳಾದ ರೇವಕನಿಮ್ಮಡಿಯನ್ನು ಮದುವೆಯಾದನೆಂದು ಮೇಲ್ಕಂಡ ಶಾಸನದಲ್ಲಿ ಹೇಳಿದೆ. ಬೂತುಗನು ಬದ್ದೆಗ ಕೃಷ್ಣರೊಡನೆ ಉತ್ತರ ದಿಗ್ವಿಜಯಕ್ಕೆ ಹೋಗಿರಬೇಕು. ಅಲ್ಲಿ ಅವನು ತೋರಿಸಿದ ಪರಾಕ್ರಮಕ್ಕೆ ಮೆಚ್ಚಿ ಬದ್ದೆಗನು, ತನ್ನ ಮಗಳನ್ನು ಕೊಟ್ಟುದಲ್ಲದೆ ನೀಚನಾದ ರಾಜಮಲ್ಲನನ್ನು ಹೊರದೂಡಿ ಗಂಗಸಿಂಹಾಸನದ ಮೇಲೆ ಇವನನ್ನು ಕೂಡಿಸುವಂತೆ ವಾಗ್ದಾನವನ್ನೂ ಮಾಡಿರಬೇಕು. ಕೂಡಲೂರ ಶಾಸನದಲ್ಲಿ ಹೇಳಿದ ‘ತಸ್ಯ

---

[1] ಮದ್ದಗಿರಿ ೭೧.

[2] *Ep. Ind.* Vol. *V*, p. 188.

ಸುತಾಂ ಸಹೈವ ವಾಕ್ಕನ್ಯಯಾ[1] ವ್ಯವಹದುಕ್ತ ವಿಧಿಸ್ತ್ರಿಪುಯ್ಯಾ‍್ರಂ' ಎಂಬ ವಾಕ್ಯವು ಇದೇ ಅರ್ಥವನ್ನು ಸೂಚಿಸುತ್ತದೆ. ಬದ್ದೆಗನು ದಿವಂಗತನಾದ ಕೂಡಲೆ ಬೂತುಗನು ರಾಷ್ಟ್ರಕೂಟ ಸಿಂಹಾಸನವನ್ನೂ ಗಜತುರಗ ಶ್ವೇತ-ಚ್ಛತ್ರಗಳನ್ನೂ ಆಕ್ರಮಿಸಿಕೊಂಡಿದ್ದ ಲಲ್ಲೇಯನ ಕೈಯಿಂದ ಅವುಗಳನ್ನು ಕಿತ್ತು ಕೃಷ್ಣರಾಜನಿಗೆ ಕೊಟ್ಟನೆಂದು ತಿಳಿದಿರುವುದರಿಂದ[2] ಪುಂಡನಾದ ಲಲ್ಲೇಯನು ಪಟ್ಟಬಂಧಕ್ಕೆ ತಡೆಯನ್ನುಂಟುಮಾಡಬಹುದೆಂಬ ಶಂಕೆಯಿಂದ ರಾಷ್ಟ್ರಕೂಟರು ಮೊದಲೇ ಪ್ರತಾಪಶಾಲಿಯಾದ ಬೂತುಗನೊಡನೆ ಸಖ್ಯ ಸಂಬಂಧಗಳನ್ನು ಬೆಳೆಯಿಸಿ ಪೂರ್ವಸನ್ನಾಹವನ್ನು ಮಾಡಿಕೊಂಡಂತೆ ತೋರುತ್ತದೆ. ರಾಷ್ಟ್ರಕೂಟರು ತಾವು ಮಾತುಕೊಟ್ಟಂತೆ ರಾಜಮಲ್ಲನನ್ನು ನಿರ್ಮೂಲಮಾಡಲಿಕ್ಕೆ ಬೂತಗನಿಗೆ ಬೆಂಬಲವನ್ನು ಕೊಟ್ಟರು. ಬೂತುಗನೂ ಯುವರಾಜನಾಗಿದ್ದ ಇನೆಯ ಕೃಷ್ಣರಾಜನೂ ರಾಜಮಲ್ಲನೊಂದಿಗೆ ಯುದ್ಧವನ್ನು ಹೂಡಿದರು. ಈ ಸಮಯದಲ್ಲಿ ಗಂಗರಾಜನು ತನ್ನ ಮೊರೆಹೊಕ್ಕಿದ್ದ ನೊಳಂಬ ಅಣ್ಣಿಗನೊಡನೆ ಬಂದು ತನ್ನ ತಮ್ಮನನ್ನು ಎದುರಿಸಿದಂತೆ ತೋರುತ್ತದೆ. ಇವೆರಡೂ ಪಕ್ಷದವರಿಗೆ ಘೋರವಾದ ಯುದ್ಧವಾಗಿ ಅದರಲ್ಲಿ ಕೃಷ್ಣರಾಜನು ರಾಜಮಲ್ಲನನ್ನು ಓಡಿಸಿ ಸಿಂಹಾಸನದಿಂದ ತಳ್ಳಿ ಬೂತುಗನನ್ನು ಗಂಗರಾಜ್ಯದಲ್ಲಿ ಸ್ಥಾಪಿಸಿದನು. ಆತಕೂರು ಶಿಲಾಶಾಸನದಲ್ಲಿ ಬೂತುಗನು ರಾಜಮಲ್ಲನನ್ನು ಕೊಂದು ತೊಂಭತ್ತಾರುಸಾಸಿರವ (ಗಂಗವಾಡಿಯ) ನ್ನು ಆಳುತ್ತಿದ್ದನೆಂದು ಬರೆದಿದೆ. ಹೀಗೆ ತನ್ನ ಪ್ರಭುವಾದ ಗಂಗರಾಜನು ಹತನಾದ ಮೇಲೆ ಅಣ್ಣಿಗನು ಹೆದರಿ ರಣಾಂಗಣದಿಂದ ಓಡಿ ಹೋಗಿ ಅನೇಕ ವಿಪತ್ತುಗಳಿಗೀಡಾದನು.

ಹೆಬ್ಬಾಳಶಾಸನದಲ್ಲಿ[1] ಚಲಕೆನಲ್ಲಾತ ಕನ್ನರದೇವನು ರಾಜ್ಯಂಗೆಯ್ಯುತ್ತಿಲ್ಲು ಬದ್ದೆಗದೇವನು ಬೂತುಗನಿಗೆ ತನ್ನ ಮಗಳೂ ಕನ್ನರದೇವನ ಅಕ್ಕನೂ ಆದ ರೇವಕ ನಿಮ್ಮಡಿಯನ್ನು ಕೊಟ್ಟು ಮದುವೆಮಾಡಿ ರಾಜ್ಯವನಾಳುತ್ತಿರೆ ರೇವಕ ನಿಮ್ಮಡಿಯ ಹೊಟ್ಟೆಯಲ್ಲಿ ಮರುಳನು ಹುಟ್ಟಿದನೆಂದೂ ಮರುಳನಿಗೆ ಬಿಜ್ಜಬ್ಬೆಯ ಹೊಟ್ಟೆಯಲ್ಲಿ ರಚ್ಚಗಂಗನು ಹುಟ್ಟಿದನೆಂದೂ ಅವರ ರಾಜ್ಯದ

---

[1] 'He married his daughter along with the maiden speech' ಎಂದು ಆರ್ ನರಸಿಂಹಾಚಾರ್ಯರು ಇದನ್ನು ಭಾಷಾಂತರಿಸಿದ್ದಾರೆ. ಇದರ ಅಭಿಪ್ರಾಯ ವೇನೋ ತಿಳಿಯದು.

[2] ನೋಡಿ ಕೂಡಲೂರ ತಾಮ್ರಶಾಸನಗಳು.

[1] *Ep. Ind.* Vol. IV. p. 350.

ನಂತರ ಮಾರಸಿಂಹನು ರಾಜ್ಯಭಾರವಮಾಡಿದನೆಂದೂ ಬರೆದಿದೆ. ಮಾರಸಿಂಹನ ಅಜ್ಜಿಯೂ ಬೂತುಗನ ಅಬ್ಬೆಯೂ ಆದ ಭುಜ್ಜಬ್ಬರಸಿಯು ಪೆರ್ಬಾಳವಾಳು ತ್ತಿಟ್ಟು ತಾನು ಕಟ್ಟಿಸಿದ ಭುಜ್ಜಬ್ಬೇಶ್ವರಕ್ಕೆ ತಾನೂ ಮಾರಸಿಂಹನೂ ಕೆಲವು ದತ್ತಿಗಳನ್ನು ಕೊಟ್ಟರೆಂದು ಹೇಳಿದೆ. ಈ ಶಾಸನವನ್ನು ಕೊರೆದ ಕಾಲವು ಕ್ರಿ. ಶ. ೯೭೫. ಫ್ಲೀಟರು ರಾಷ್ಟ್ರಕೂಟ ೨ನೆಯ ಕೃಷ್ಣನ ಕಾಲದಲ್ಲಿ ಬೂತುಗನ ಮದುವೆಯಾಯಿತೆಂದೂ ಬದ್ದೆಗನ ಆಳಿಕೆಯಲ್ಲಿ ಮರುಳನು ಹುಟ್ಟಿದನೆಂದೂ ಈ ಲಿಪಿಯಿಂದ ತಿಳಿದುಕೊಂಡಿದ್ದಾರೆ. ಈ ಅಭಿಪ್ರಾಯಕ್ಕೆ ಶಾಸನದಲ್ಲಿ ಬಂದ ಇಟ್ಟು, ಇರೆ ಎಂಬ ಪ್ರಯೋಗಗಳ ಅಪಾರ್ಥವೇ ಕಾರಣ. 'ಇಟ್ಟು' ಎಂಬುದು ಭೂತಕಾಲವಾಚಿಯಾದುದರಿಂದ ಮೊದಲು ನಿರ್ದೇಶಿಸಲ್ಪಟ್ಟ ಕನ್ನರ-ದೇವನು ಬದ್ದೆಗನ ಹಿಂದೆ ಆಳಿಹೋದ ೨ನೆಯ ಕೃಷ್ಣರಾಜನೆಂದೂ ಅವನ ಕಾಲ ದಲ್ಲಿ ರೇವಕನಿಮ್ಮಡಿಯ ಮದುವೆಯಾಯಿತೆಂದೂ 'ಇರೆ' ಎಂಬುದು ವರ್ತಮಾನ ಕಾಲವಾಚಿಯಾದುದರಿಂದ ಬದ್ದೆಗನ ಆಳಿಕೆಯಲ್ಲಿ ಮರುಳನು ಹುಟ್ಟಿದನೆಂದೂ ಹೇಳಿದ್ದಾರೆ. ಆದರೆ 'ಇಟ್ಟು', 'ಇರೆ' ಎಂಬ ಎರಡೂ ಪ್ರಯೋಗಗಳು ವರ್ತಮಾನಕಾಲದ ಅರ್ಥವನ್ನು ಕೊಡುವ ಅನೇಕ ಉದಾಹರಣೆಗಳು ಶಾಸನ ಗಳಲ್ಲಿ ಕಾಣಬರುತ್ತವೆ 'ಚಲಕೆನಲ್ಲಾತ' ಎಂಬ ಬಿರುದು ೩ನೆಯ ಕೃಷ್ಣ-ರಾಜನಿಗೆ ಮಾತ್ರ ಇದ್ದಿತು. ೨ನೆಯ ಕೃಷ್ಣನಿಗೆ ಇದ್ದಿಲ್ಲ. ಬೂತುಗನ ಮದುವೆಯು ಬದ್ದೆಗನ ಆಳಿಕೆಯಲ್ಲಿ ಅಂದರೆ ಕ್ರಿ. ಶ. ೯೩೩–೩೯ ರ ನಡುವೆ ಆಯಿತೆಂದು ಕೂಡಲೂರ ಶಾಸನದಿಂದ ಗೊತ್ತಾಗುವುದರಿಂದ ೨ನೆಯ ಕೃಷ್ಣನ ಕಾಲದಲ್ಲಿ ಅದು ಜರುಗಿತೆಂದು ಹೇಳುವುದು ಸರಿಯಲ್ಲ. ಈ ಶಾಸನದಿಂದಾ ದರೂ ಬದ್ದೆಗನ ಆಳಿಕೆಯಲ್ಲಿಯೇ ಈ ಮದುವೆಯಾಯಿತೆಂದು ಗೊತ್ತಾಗುತ್ತದೆ. "ಸ್ವಸ್ತ್ಯಕಾಳವರ್ಷದೇವ..ಕನ್ನರದೇವನಾ ಸಮುದ್ರ ಪರ್ಯಂತಂ ಸಕಲಾ ವನಿಮಂಡಳಮುಂ ಪ್ರತಿಪಾಳಿಸುತ್ತಮಿಟ್ಟು" ಎಂದು ಮೊದಲು ವಾಡಿಕೆಯಂತೆ ಶಾಸನದ ದತ್ತಿಯ ಕಾಲದಲ್ಲಿ ಆಳುತ್ತಿದ್ದ ಸಾರ್ವಭೌಮನಾದ ೩ನೆಯ ಕೃಷ್ಣ ನನ್ನು ಹೊಗಳಿ ಆಗಿನ ಗಂಗರಾಜನಾದ ಮಾರಸಿಂಹನ ವಂಶಾವಳಿಯನ್ನು ಹೇಳುವಾಗ ಅವನ ತಂದೆಯ ಮದುವೆಯ ಸಂಗತಿಯನ್ನೂ ಕೊಡುತ್ತದೆ. ಇದರಿಂದ ಪೆರ್ಬ್ಬಾಳಶಾಸನದಿಂದಲೂ ಮೇಲೆ ಹೇಳಿದ ನಮ್ಮ ವಿಧಾನಕ್ಕೆ ಪುಷ್ಟಿಯು ದೊರೆಯುತ್ತದೆಂಬುದು ಸ್ಪಷ್ಟ.

ಮೇಲಿನ ವಿವೇಚನೆಯಿಂದ ಬೂತುಗನು ಕೃಷ್ಣರಾಜನು ಪಟ್ಟಕ್ಕೆ ಬರುವ ಮೊದಲೇ ರಾಜನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಕೃಷ್ಣರಾಜನ ಆಳಿಕೆಯು ಕ್ರಿ. ಶ. ೯೩೯–೪೦ ರಲ್ಲಿ ಮೊದಲಾಯಿತು. ಕ್ರಿ. ಶ. ೯೫೩ ಆದಮೇಲೆ ೩ನೆಯ

ರಾಜಮಲ್ಲನ ಶಾಸನಗಳು ಇದುವರೆಗೆ ಆವುವೂ ದೊರೆತಿಲ್ಲ. ಆದುದರಿಂದ ಬೂತುಗನ ಪಟ್ಟಾಭಿಷೇಕವು ಕ್ರಿ. ಶ. ೯೩೩–೩೯ ಗಳ ಮಧ್ಯದಲ್ಲಿ ಜರುಗಿರಬೇಕು. ಬದ್ದೆಗನ ಉತ್ತರದೇಶದ ದಂಡಯಾತ್ರೆಯೂ ರೇವಕನಿಮ್ಮಡಿಯ ಮದುವೆಯೂ ಆದ ತರುವಾಯದಲ್ಲಿ ಬೂತುಗನ ರಾಜ್ಯಾಭಿಷೇಕವಾದುದರಿಂದ ಈ ಉತ್ಸವವು ಸು. ಕ್ರಿ. ಶ. ೯೩೬ ರ ಆಚೆ ನೆರವೇರಿರಬೇಕು. ಇವನ ಸೂಡಿಯ ಶಾಸನದ ಕಾಲವು [1] ಕ್ರಿ. ಶ. ೯೩೮ ಆದುದರಿಂದ ಅದಕ್ಕಿಂತ ಸ್ವಲ್ಪ ಮುಂಚೆ ಇವನು ಪಟ್ಟಬದ್ಧನಾದನೆಂದು ತಿಳಿಯುವುದು ಸಮಂಜಸವಾಗುತ್ತದೆ. ಕ್ರಿ. ಶ. ೯೪೨ ರಲ್ಲಿ ಇವನು ೩ನೆಯ ಕೃಷ್ಣನ ಪಾದಪದ್ಮೋಪಜೀವಿಯಾಗಿ ಬೆಳ್ವಲ–೩೦೦, ಪುರಿಗೆಱೆ–೩೦೦, ಗಂಗವಾಡಿ–೯೬೦೦೦ ಪ್ರಾಂತಗಳನ್ನು ಆಳುತ್ತಿದ್ದನು. [2] ಇದರಿಂದ ಕೃಷ್ಣನು ಇವನನ್ನು ಪಟ್ಟಕ್ಕೆ ಕೂಡಿಸಿದಾಗ ಗಂಗರು ರಾಷ್ಟ್ರಕೂಟಾಧಿಪತ್ಯವನ್ನು ಒಪ್ಪಿಕೊಂಡಿದ್ದರೆಂದು ಹೇಳಬಹುದು. ಮುಂದೆ ರಾಷ್ಟ್ರಕೂಟರ ಅಳಿಗಾಲದವರೆಗೂ ಗಂಗರು ಅವರ ಸಾಮಂತರಾಗಿಯೇ ಉಳಿದರು.

ಬೂತುಗನು ಬಹುಪರಾಕ್ರಮದಿಂದ ಅನೇಕ ಶತ್ರುರಾಜರನ್ನು ಸೋಲಿಸಿ ತನ್ನ ರಾಜ್ಯವೈಭವವನ್ನು ಹೆಚ್ಚಿಸಿದುದಲ್ಲದೆ ತನ್ನ ಪ್ರಭುವಾದ ಕೃಷ್ಣನ ಸಾಮ್ರಾಜ್ಯವನ್ನು ನಿಷ್ಕಂಟಕವಾಗಿ ಮಾಡಿದನು. ತಾನು ಪಟ್ಟಕ್ಕೆ ಬರುವ ಮೊದಲೇ ರಟ್ಟರ ಮೇಲೆ ತಿರುಗಿ ಬಿದ್ದಿದ್ದ ದಂತಿಗವಪ್ಪುಗರನ್ನೂ ಅಚಳಪುರದ ಕಕ್ಕನನ್ನೂ ಮುರಿಬಡಿದನು. ರಟ್ಟ ಸಿಂಹಾಸನವನ್ನಪಹರಿಸಿದ್ದ ಲಲ್ಲೇಯನನ್ನು ಹೊಡೆದೋಡಿಸಿ ಕೃಷ್ಣನಿಗೆ ಅವನ ಪಿತೃರಾಜ್ಯವನ್ನು ಕೊಡಿಸಿದನು. ಶಾಂತಲೇಶನಾದ ಅಜವರ್ಮ್ಮನನ್ನು ಸೋಲಿಸಿದನು. ನುಟುಗುಗಿರಿ ಪತಿಯಾದ ದಾಮರಿಯ ದರ್ಪಭಂಗವನ್ನು ಮಾಡಿದನು. ನಾಗವರ್ಮ್ಮನನ್ನು ಸಮುದ್ರಕ್ಕೆ ಅಟ್ಟಿದನು. ಇದಲ್ಲದೆ ಗಜಸೈನ್ಯದಿಂದ ಮತ್ತನಾಗಿದ್ದ ರಾಜಾದಿತ್ಯನು ಅಂಬಾರಿಯಲ್ಲಿ ಕುಳಿತು ಯುದ್ಧಮಾಡುತ್ತಿದ್ದಾಗ ಗಂಗರಾಜನು ಅವನ ಅಂಬಾರಿಯನ್ನು ಪೊಕ್ಕು ದ್ವಂದ್ವಯುದ್ಧಮಾಡಿ ಅವನನ್ನು ಯಮಸದನಕ್ಕಟ್ಟಿದನು. ಏಮಗಂಡುಗನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದನು. ತಂಜಾಪುರೀ, ನಾಲ್ಕೋಟೆ

---

[1] ಫ್ಲೀಟರು ಈ ಶಾಸನವು ಸೃಷ್ಟಿಯೆಂದು ಬಗೆದಿದ್ದಾರೆ. ಆರ್ ನರಸಿಂಹಾಚಾರ್ಯರು ಫ್ಲೀಟರು ಕೊಟ್ಟ ಕಾರಣಗಳು ತೀರ ದುರ್ಬಲವೆಂದು ಅಭಿಪ್ರಾಯಪಟ್ಟಿದ್ದಾರೆ. (*M. A. R.* 1921, p. 26 ).

[2] *B. K.* No. 170 of 1926.

( ನಾಲ್ಕೋಟಿ ) ವೊದಲಾದ ದುರ್ಗಗಳನ್ನು ಸುಟ್ಟನು. ಇವೇ ವೊದಲಾದ ಅದ್ಭುತ ಪರಾಕ್ರಮುಗಳಿಂದ ಬೂತುಗನು ತನ್ನ ಪ್ರಭುವಾದ ೩ನೆಯ ಕೃಷ್ಣ ನನ್ನು ಸಂತೋಷಗೊಳಿಸಿ ಅವನಿಗೆ ಧನಕನಕ ಗಜತುರಗಾದಿ ಸಂಪತ್ತನ್ನು ಅರ್ಪಿಸಿದನು.

ಕೃಷ್ಣನು ತಂಜಾವುರಿಯನ್ನು ಸ್ವಾಧೀನಪಡಿಸಿಕೊಂಡಿದ್ದನೆಂದು ಅವನ ೫ನೆಯ ವರ್ಷದ ಲಿಪಿಯಿಂದ ಗೊತ್ತಾಗುತ್ತದೆ. ರಾಷ್ಟ್ರಕೂಟರಾಜನು ವೊದಲನೆಯ ಸಲ ( ಅಂದರೆ ಕ್ರಿ. ಶ. ೯೪೪ ರಲ್ಲಿ ) ದಕ್ಷಿಣದೇಶಕ್ಕೆ ದಂಡೆತ್ತಿಹೋದಾಗ ಗಂಗ ಬೂತುಗನು ಅವನಿಗೆ ಸಹಾಯಕನಾಗಿ ಹೋಗಿ ತಂಜಾವುರಿಯನ್ನು ಸುಟ್ಟಿರ ಬೇಕು. ಕ್ರಿ. ಶ. ೯೪೭–೪೮ ರಲ್ಲಿ ನಡೆದ ತಕ್ಕೋಲಂ ಯುದ್ಧದಲ್ಲಿ ಇವನು ಅಗ್ರಭಾಗವನ್ನು ತೆಗೆದುಕೊಂಡಿದ್ದನೆಂದು ಆತಕೂರು ಶೋಟಿಪುರಂ ಶಾಸನ ಗಳಿಂದ ಸ್ಪಷ್ಟವಾಗುತ್ತದೆ.[1] ಆತಕೂರು ಲಿಪಿಯಲ್ಲಿ ಕೃಷ್ಣನು ಬೂತುಗನ ಪರಾಕ್ರಮಕ್ಕೆ ಮೆಚ್ಚಿ ಅವನಿಗೆ ಬೆಳ್ವಲ–೩೦೦, ಪುರಿಗೆಱೆ–೩೦೦, ಬಾಗೆ ನಾಡು–೭೦, ಕಿಸುಕಾಡು–೭೦ ಮತ್ತು ಬನವಸೆ–೧೨೦೦೦ ಪ್ರಾಂತಗಳನ್ನು ಕೊಟ್ಟನೆಂದು ಬರೆದಿದೆ. ಇದರಿಂದ ಈ ಪ್ರಾಂತಗಳು ಸು. ೯೪೮–೯ ರಲ್ಲಿ ಗಂಗರ ವಶಕ್ಕೆ ಬಂದವೆಂದು ಹೇಳಬೇಕಾಗುತ್ತದೆ. ಆದರೆ ಹೆಬ್ಬಾಳ ಶಾಸನದಲ್ಲಿ ಅವೋಘವರ್ಷ–ಬದ್ದೆಗನು ಅಳಿಯನಾದ ಬೂತುಗನಿಗೆ ಈ ನಾಡುಗಳನ್ನು ಮದುವೆಯ ಕಾಲದಲ್ಲಿ ಬಱಿವಱಿಗೊಟ್ಟನೆಂದು ಬರೆದಿದೆ. ಈ ಮದುವೆಯು ಸು. ೯೩೬ ರಲ್ಲಿ ಜರುಗಿತೆಂದು ವೇಲೆ ಹೇಳಿದೆ. ಇದಲ್ಲದೆ ಕ್ರಿ. ಶ. ೯೪೨, ೯೪೬ ರ ರೋಣ, ಕುರ್ತಕೋಟೆಯ ಶಿಲಾಶಾಸನಗಳಲ್ಲಿ ಬೂತುಗನು ಪುರಿಗೆಱೆ ಬೆಳ್ವಲ ಪ್ರಾಂತಗಳನ್ನು ಆಳುತ್ತಿದ್ದನೆಂದು ಬರೆದಿದೆ. ಅಂದಮೇಲೆ ಕ್ರಿ. ಶ. ೯೪೮–೪೯ರಲ್ಲಿ ಕೃಷ್ಣನು ಅವುಗಳನ್ನು ಬೂತುಗನಿಗೆ ಮೆಚ್ಚುಗೊಟ್ಟನೆಂದು ಹೇಳಿದುದು ಅಸಂಗತವಾಗಿ ತೋರುತ್ತದೆ. ಬನವಸೆ–೧೨೦೦೦ ವು ವಾತ್ರ ಹೊಸತಾಗಿ ಬಂದಿತೆಂದು ಹೇಳಬಹುದು. ಎಱೆಯಪ್ಪ ರಾಜಮಲ್ಲರು ಬೂತುಗ ನಿಂದ ಪುರಿಗೆಱೆ ವೊದಲಾದ ನಾಡುಗಳನ್ನು ಕಿತ್ತುಕೊಂಡಿದ್ದರೆಂದೂ ಕೃಷ್ಣನು ಅವುಗಳನ್ನು ತಿರುಗಿ ಅವರಿಂದ ಕಸಿದುಕೊಂಡು ತಕ್ಕೋಲಂ ಯುದ್ಧಾನಂತರ ಬೂತುಗನಿಗೆ ಕೊಟ್ಟನೆಂದೂ ಫ್ಲೀಟರು ಬರೆದಿದ್ದಾರೆ.[2] ಆದರೆ ಕ್ರಿ. ಶ. ೯೩೭, ೯೪೨, ೯೪೬ ರಲ್ಲಿಯೇ ಈ ನಾಡುಗಳು ಬೂತುಗನ ವಶದಲ್ಲಿದ್ದವೆಂದು ನಾವು

---

[1] **ರಾಷ್ಟ್ರಕೂಟ ಪ್ರಕರಣದಲ್ಲಿ ನೋಡಿರಿ**

[2] *Ep. Ind.* Vol. VI, p. 55.

ಮೇಲೆ ತೋರಿಸಿದ್ದೇವೆ. ಮತ್ತು ಸು. ೯೪೬ ರಲ್ಲಿ ಹತನಾದ ರಾಜಮಲ್ಲನು ಅದೇ ವರ್ಷ ಪಟ್ಟಕ್ಕೆ ಬಂದಿದ್ದ ಬೂತುಗನಿಂದ ಈ ಪ್ರಾಂತಗಳನ್ನು ಕಿತ್ತು ಕೊಂಡನೆಂದು ಹೇಳುವುದು ಅಸಂಬದ್ಧವು.[1]

ಶಕೆ ೮೮೨ ( ಕ್ರಿ. ಶ. ೯೬೦ ) ರೌದ್ರ ಸಂವತ್ಸರ ಆಶ್ವಯುಜ ಮಾಸದಲ್ಲಿ ಹುಟ್ಟಿದ ದನುಗೂರು ಲಿಪಿಯು ಇದುವರೆಗೆ ದೊರೆತ ಬೂತುಗನ ಶಾಸನಗಳಲ್ಲಿ ಕಡೆಯ ವರ್ಷದ್ದು. ಇವನ ತರುವಾಯ ಮರುಳನು ಆಳಿದನೆಂದು ಕೂಡಲೂರು ಶಾಸನದಲ್ಲಿ ಬರೆದಿರುವುದರಿಂದಲೂ ಮಾರಸಿಂಹನ ಮೊದಲನೆಯ ವರ್ಷವು ಕ್ರಿ. ಶ. ೯೬೩–೬೪ ಎಂದು ನಿರ್ಧರಿಸಲ್ಪಟ್ಟಿರುವುದರಿಂದಲೂ ಕ್ರಿ. ಶ. ೯೬೦ ಬೂತುಗನ ಕಡೆಯ ವರ್ಷವಾಗಿರಬಹುದು. ಇವನಿಗೆ ಸತ್ಯವಾಕ್ಯ, ಗಂಗ-ಗಾಂಗೇಯ, ಗಂಗನಾರಾಯಣ, ಜಯದುತ್ತರಂಗ, ನನ್ನಿಯಗಂಗ ಎಂಬ ಅನೇಕ ಬಿರುದುಗಳಿದ್ದವು. ಇವನ ರಾಣಿಯಾದ ರೇವಕನಿಮ್ಮಡಿಗೆ ಚಾಗವೆಡಂಗಿ ಎಂಬ ಬಿರುದು ಇದ್ದಿತು. ಈಕೆಯಲ್ಲದೆ ಬೂತುಗನಿಗೆ ಕಲ್ಲಬ್ಬರಸಿ, ಪದ್ದಬ್ಬರಸಿ[2] ಎಂಬ ಇಬ್ಬರು ರಾಣಿಯರಿದ್ದಂತೆ ಲಿಪಿಗಳಿಂದ ಗೊತ್ತಾಗುತ್ತದೆ. ಇವನಿಗೆ ರೇವಕನಿಮ್ಮಡಿಯ ಹೊಟ್ಟೆಯಲ್ಲಿ ಮರುಳನೂ ಕಲ್ಲಬ್ಬರಸಿಯ ಹೊಟ್ಟೆಯಲ್ಲಿ ೨ನೆಯ ಮಾರಸಿಂಹನೂ ಹುಟ್ಟಿದರು.

ಬೂತುಗನ ತರುವಾಯ ಅವನ ಹಿರಿಯ ಮಗನಾದ ನೀತಿಮಾರ್ಗ ಪುಣಸೆಯಗಂಗ ಮರುಳನು ಸು. ೯೬೧ ರಲ್ಲಿ ಪಟ್ಟಕ್ಕೆ ಬಂದನು. ೨ನೆಯ ಮಾರಸಿಂಹನು ಕ್ರಿ. ಶ. ೯೬೩ ರಲ್ಲಿ ಸಿಂಹಾಸನವನ್ನೇರಿದುದರಿಂದ ಮರುಳನು ೨–೩ ವರ್ಷಗಳ ವರೆಗಾದರೂ ರಾಜ್ಯಭಾರಮಾಡಿರಬೇಕೆಂದು ಗ್ರಹಿಸಿದ್ದೇವೆ. ಇವನ ಶಾಸನಗಳಾವುವೂ ದೊರೆತಿಲ್ಲ. ಇವನು ರಾಷ್ಟ್ರಕೂಟ ೩ನೆಯ ಕೃಷ್ಣರಾಜನ ಮಗಳನ್ನು ಮದುವೆಯಾಗಿದ್ದನೆಂದು ಕೂಡಲೂರ ಶಾಸನದಲ್ಲಿ ಹೇಳಿದೆ. ಇವನಿಗೆ ಬಿಜ್ಜಬ್ಬೆಯ ಹೊಟ್ಟೆಯಲ್ಲಿ ರಚ್ಚಗಂಗನೆಂಬ ಮಗನಿದ್ದನೆಂದು ಹೆಬ್ಬಾಳ ಶಾಸನವು ಹೇಳುತ್ತದೆ. ಈ ಬಿಜ್ಜಬ್ಬೆಯು ಕೃಷ್ಣನ ಮಗಳೋ ಅವಳಿಂದ ಭಿನ್ನಳೋ ಹೇಳಲಿಕ್ಕಾಗದು.

---

[1] ಬೂತುಗನು ಪಟ್ಟಕ್ಕೆ ಬಂದ ಮೇಲೆ ಅವನ ಸಹೋದರನಾದ ರಾಜಮಲ್ಲನು ಸಮಯವನ್ನು ಸಾಧಿಸಿ ಅವನಿಂದ ೯೪೬ ರ ನಂತರ ಬೆಳ್ವಲಪುರಿಗೆಱೆನಾಡುಗಳನ್ನು ಸೆಳೆದು ಕೊಂಡಿರಬಹುದು. ೯೪೯ ರ ಆತಕೂರ ಲಿಪಿಯ ವಿಧಾನದಿಂದ ಬೂತುಗನು ರಾಜಮಲ್ಲನನ್ನು ಸ್ವಲ್ಪಕಾಲ ಮುಂಚೆ ಕೊಂದನೆಂದು ತಿಳಿಯುವಂತಿದೆ. ಇದರಿಂದ ರಾಜಮಲ್ಲನ ಮರಣವು ೯೪೬–೯೪೯ ರ ನಡುವೆ ಜರುಗಿರಬೇಕು. ರಾಷ್ಟ್ರಕೂಟ ಕೃಷ್ಣನು ರಾಜಮಲ್ಲನಿಂದ ಈ ನಾಡುಗಳನ್ನು ಕಿತ್ತುಕೊಂಡು ತನ್ನ ಭಾವನಿಗೆ ಕೊಟ್ಟಿರಬೇಕು.

[2] B. K. No. 182 of 1926.

ರಾಷ್ಟ್ರಕೂಟ ೩ನೆಯ ಕೃಷ್ಣರಾಜನು ಅನ್ಯರಾಜರಿಗೆ ಅಲಭ್ಯವಾದ 'ಮದನಾವತಾರ' ವೆಂಬ ಛತ್ರವನ್ನು ಮರುಳನಿಗೆ ಸ್ನೇಹದಿಂದ ಕೊಟ್ಟನು. ಪರಮಜಿನಭಕ್ತನಾದ ಮರುಳನ ಕೀರ್ತಿಯು ಎಲ್ಲ ದಿಕ್ಕುಗಳಲ್ಲಿಯೂ ವ್ಯಾಪಿಸಿದ್ದುದರಿಂದ ಅವನಿಗೆ 'ಕೀರ್ತಿಮನೋಭವ' ಎಂಬ ಬಿರುದು ಇದ್ದಿತು. ಸದಾ ಪರರ ಹೃತ್ಕಮಲಗಳನ್ನು ತನ್ನ ಸೌಜನ್ಯದಿಂದ ವಿಕಾಸಗೊಳಿಸುತ್ತಿದ್ದುದರಿಂದ 'ಗಂಗಮಾರ್ತ್ತಂಡ' ನೆಂದು ಹೆಸರುಗೊಂಡಿದ್ದನು. ಮಾನವನೀತಿಯನ್ನು ಅನುಸರಿಸುತ್ತಿದ್ದುದರಿಂದ 'ನೀತಿಮಾರ್ಗ' ನೂ ಬಲಿಚಕ್ರವರ್ತಿಯಂತೆ ಬಲಿಷ್ಠರಾಗಿದ್ದ ವೈರಿಗಳನ್ನು ಸಂಹರಿಸಿದುದರಿಂದ 'ಗಂಗ ಚಕ್ರಾಯುಧ'ನೂ ಕೃಪಣ ಜನರ ಬಯಕೆಗಳನ್ನು ಪೂರ್ತಿಗೊಳಿಸುತ್ತಿದ್ದುದರಿಂದ 'ಕಾಮದ'ನೂ ಆಗಿದ್ದನು. ಇವನ ಶೌರ್ಯವನ್ನು ಕೇರಳ ಚೋಳ ಪಾಂಡ್ಯರಾಜರು ಕೊಂಡಾಡುತ್ತಿದ್ದರು. ಹೀಗೆ ಶೌರ್ಯಶಾಲಿಯಾದ ಮರುಳನು 'ಕಲಿಯುಗಭೀಮ' ನೆಂದು ಹೆಸರುಗೊಂಡಿದ್ದನು.

ಹೆಬ್ಬಾಳ ಶಾಸನದಲ್ಲಿ ಮರುಳ ಅವನ ಮಗ ರಚ್ಚಗಂಗರನ್ನು ವರ್ಣಿಸಿದ ಮೇಲೆ "ಅವರ ರಾಜ್ಯದಾ ತದನಾನ್ತರ" ಮಾರಸಿಂಹನು ಪಟ್ಟಕ್ಕೆ ಬಂದನೆಂದು ಬರೆದಿದೆ. ಈ ಆಧಾರದಿಂದ ಮರುಳನೂ ಅವನ ಬಳಿಕ ರಚ್ಚಗಂಗನೂ ರಾಜ್ಯವಾಳಿದ ಮೇಲೆ ಮಾರಸಿಂಹನು ಸಿಂಹಾಸನಾರೂಢನಾದನೆಂದು ಫ್ಲೀಟರು ಹೇಳಿದ್ದಾರೆ. ಹೀಗೆ ಬರೆಯುವಾಗ ಮರುಳನು ರಾಜ್ಯವಾಳಲಿಲ್ಲವೆಂದೂ ಸೂಚಿಸಿದ್ದಾರೆ. ಆದರೆ ಇದು ತಪ್ಪು. ೧ನೆಯ ರಾಜಮಲ್ಲನಿಂದೀಚೆಗೆ ಗಂಗ-ರಾಜರು ಸತ್ಯವಾಕ್ಯ ನೀತಿಮಾರ್ಗ ಎಂಬ ಬಿರುದುಗಳನ್ನು ಒಬ್ಬರಹಿಂದೊಬ್ಬರು ಕ್ರಮವಾಗಿ ಧರಿಸಿಕೊಂಡಿದ್ದರು. ಕೂಡಲೂರು ಶಾಸನದಲ್ಲಿ ಸತ್ಯವಾಕ್ಯ ಬೂತುಗನ ತರುವಾಯ ನೀತಿಮಾರ್ಗ ಮರುಳನೂ ಅವನಾದ ಬಳಿಕ ಸತ್ಯವಾಕ್ಯ ಮಾರಸಿಂಹನೂ ರಾಜ್ಯವಾಳಿದರೆಂದು ಬರೆದಿದೆ. ರಚ್ಚಗಂಗನು ಆಳಿದನೆಂದು ಎಲ್ಲಿಯೂ ಹೇಳಿಲ್ಲ. ಇದಲ್ಲದೆ ಅವನು ಆಳಿದುದೇ ನಿಜವಾಗಿದ್ದರೆ ಮಾರಸಿಂಹನಿಗೆ ನೀತಿಮಾರ್ಗ ಎಂಬ ಬಿರುದು ಬರಬೇಕಾಗಿತ್ತು. ರಚ್ಚಗಂಗನು ಪಟ್ಟಕ್ಕೆ ಬಂದಿದ್ದರೆ ಅವನು ಏನಿಲ್ಲೆಂದರೂ ಸು. ೧೮ ವರ್ಷದ ಪ್ರಾಯದವನಾಗಿದ್ದಿರಬೇಕು. ಮರುಳನ ತಾಯಿಯಾದ ರೇವಕನಿಮ್ಮಡಿಯನ್ನು ಕ್ರಿ. ಶ. ೯೩೬–೩೭ರಲ್ಲಿ ಬೂತುಗನು ಮದುವೆಯಾದನೆಂದು ಹಿಂದೆ ತೋರಿಸಿದ್ದೇವೆ. ಆದುದರಿಂದ ಕ್ರಿ. ಶ. ೯೬೩ಕ್ಕೆ ಮೊದಲು ಅಂದರೆ ಸು. ೨೬ ವರ್ಷಗಳ ಅವಧಿಯಲ್ಲಿ ಬೂತುಗನಿಗೆ ಪಟ್ಟಕ್ಕೆ ಬರುವ ವಯಸ್ಸಿನ ಮೊಮ್ಮಗನಿರುವುದು ಶಕ್ಯವಿಲ್ಲ.

ಈ ಕಾರಣಗಳಿಂದ ಮರುಳನ ತರುವಾಯ ಮಾರಸಿಂಹನೇ ಪಟ್ಟವೇರಿದನೆಂದು ಸಿದ್ಧವಾಗುತ್ತದೆ.

**ಬೂತುಗನ ಕಾಲದ ಮಹತ್ವದ ಲಿಪಿಗಳು :**

೧. ರೋಣ ಶಾಸನ.[1]— ಇದರ ಕಾಲವು ಶಕ ೮೬೪, ಶೋಭಕೃತ್, ವೈಶಾಖ ಶುದ್ಧ ೩, ಆದಿತ್ಯವಾರ (ಕ್ರಿ. ಶ. ೯೪೨, ಎಪ್ರಿಲ್ ೨೪). ಬೆಳ್ವೊಲ-೩೦೦, ಪುರಿಗೆಱೆ-೩೦೦, ಗಂಗವಾಡಿ-೯೬೦೦೦ ಪ್ರಾಂತಗಳನ್ನು ಬೂತುಗನು ಆಳುತ್ತಿದ್ದಾಗ ಪಂಪಯ್ಯನೆಂಬ ವೀರನು ಕಾದಿ ಮಡಿದನು. ಈ ಲಿಪಿಯಲ್ಲಿ ಬೂತುಗನು ರಾಷ್ಟ್ರಕೂಟ ೩ನೆಯ ಕೃಷ್ಣನ ಮಾಂಡಲಿಕನಾಗಿದ್ದನೆಂದು ಬರೆದಿದೆ.

೨. ಆತಕೂರು ಶಿಲಾಶಾಸನ.[2]—ಶಕ ೮೭೨, ಸೌಮ್ಯಸಂವತ್ಸರ. ೩ನೆಯ ಕೃಷ್ಣನು ತಕ್ಕೋಲದಲ್ಲಿ ಚೋಳರಾಜಾದಿತ್ಯನೊಡನೆ ಕಾದುವಾಗ ಬೂತುಗನು ಚೋಳನ ಅಂಬಾರಿಯನ್ನು ಹೊಕ್ಕು ಅವನೊಡನೆ ಹೋರಾಡಿ ಅವನನ್ನು ಕೊಂದನು. ಇದಕ್ಕೆ ಮೆಚ್ಚಿ ಕೃಷ್ಣನು ಬನವಸೆ-೧೨೦೦೦, ಬೆಳ್ವೊಲ-೩೦೦, ಪುರಿಗೆಱೆ-೩೦೦, ಕಿಸುಕಾಡು-೭೦, ಬಾಗೆನಾಡು-೭೦ ಪ್ರಾಂತಗಳನ್ನು ಬೂತುಗನಿಗೆ ಕೊಟ್ಟನು. ಬೂತುಗನು ತನ್ನ ಜೊತೆಗೆ ಶೌರ್ಯದಿಂದ ಯುದ್ಧಮಾಡಿದ ಸಗರವಂಶದ ಮಣಲೇರನಿಗೆ ಆತಕೂರು-೧೨ನ್ನೂ ಬೆಳ್ವೊಲದಲ್ಲಿದ್ದ ಕಾಡಿಯೂರನ್ನೂ ಬಾಳ್ಗಚ್ಚು ಕೊಟ್ಟನು. ಮಣಲೇರನಿಗೆ ವಲಭೀಪುರವರೇಶ್ವರ, ಇಱಿವ ಬೆಡಂಗ, ಬೂತುಗನಂಕಕಾಱ, ಸಗರತ್ರಿಣೇತ್ರ ಎಂಬ ಅನೇಕ ಬಿರುದುಗಳಿದ್ದವು.

೩. ನರೇಗಲ್ಲು ಶಾಸನ.[3] — ಶಕ ೮೭೩, ಸಾಧಾರಣ, ಪುಷ್ಯಶುದ್ಧ ೧೦, ಆದಿತ್ಯವಾರ. ಬೂತಾರ್ಯನು ರಾಷ್ಟ್ರಕೂಟ ೩ನೆಯ ಕೃಷ್ಣನ ಮಾಂಡಲಿಕನಾಗಿ ಗಂಗವಾಡಿ-೯೬೦೦೦ ಪ್ರಾಂತವನ್ನಾಳುತ್ತಿದ್ದಾಗ ಅವನ 'ಮನೋನಯನವಲ್ಲಭೆ' ಯಾದ ಪದ್ಮಬ್ಬರಸಿಯು ತಾನು ಕಟ್ಟಿಸಿದ ಜಿನಾಲಯಕ್ಕೆ ಭೂದಾನವನ್ನು ಮಾಡಿದಳು. ಅದೇ ಬಸದಿಗೆ ಮಾರಸಿಂಘಯ್ಯನು ಮಹೇಂದ್ರಪಂಡಿತನ ಅಂತೇವಾಸಿಯಾದ ವೀರಣಂದಿ

---

[1] *B. K.* No. 175 of 1926–27.
[2] *Ep. Ind.* Vol. VI, p. 53.
[3] *B. K.* No. 182 of 1926–27.

ಪಂಡಿತನ ಶಿಷ್ಯ ಚಂದ್ರನಂದಿ ಪಂಡಿತರ ಕಾಲಂಕರ್ಚ್ಚಿ ಭೂಮಿಯನ್ನು ಕೊಟ್ಟರು.

೪. ದನುಗೂರು ಶಾಸನ.[1]—ಶಕ ೮೮೨ ರೌದ್ರಸಂವತ್ಸರ ಆಶ್ವಯುಜಮಾಸ. ಸತ್ಯವಾಕ್ಯ ಗಂಗಗಾಂಗೇಯನು ಆ ಚಮುನಿಗೆ ಧನುಗೂರ ಗ್ರಾಮವನ್ನು ಕಲ್ನಾಡಾಗಿ ಕೊಟ್ಟನು. ಈ ಸತ್ಯವಾಕ್ಯ ಗಂಗಗಾಂಗೇಯನು ಬೂತುಗನೇ.

ಬೂತುಗನ ಕಡೆಯ ಮಗನಾದ ಮಾರಸಿಂಹನ ಆಳಿಕೆಯ ೫ನೆಯ ವರ್ಷವು ಶಕ ೮೯೦ ಪ್ರಭವಸಂವತ್ಸರವೆಂದೂ, ೧೦ನೆಯ ವರ್ಷವು ಅಂಗೀರಸ ಸಂವತ್ಸರ (=ಶಕ ೮೯೪) ವೆಂದೂ ಶಾಸನಗಳಿಂದ ತಿಳಿಯುತ್ತದೆ. ಇದರಿಂದ ಮಾರ ಸಿಂಹನ ಪಟ್ಟಬಂಧವು ಕ್ರಿ. ಶ. ೯೬೩-೬೪ ರಲ್ಲಿ ಆಯಿತೆಂದು ಸ್ಪಷ್ಟವಾಗುತ್ತದೆ. ರಾಷ್ಟ್ರಕೂಟ ೩ನೆಯ ಕೃಷ್ಣರಾಜನು ತಾನು ಉತ್ತರ ದಿಗ್ವಿಜಯಕ್ಕೆ ಹೋಗುವ ಸಮಯದಲ್ಲಿ ಮಾರಸಿಂಹನಿಗೆ ಪಟ್ಟಾಭಿಷೇಕಮಾಡಿದನೆಂದು ಕೂಡಲೂರು ಶಾಸನದಲ್ಲಿ ಬರೆದಿದೆ. ‘ಸಂತತಕ್ರಮಾಗತವಾದ ಗಂಗರಾಜ್ಯ ಲಕ್ಷ್ಮಿಯನ್ನು ಹೊಂದಲು ಯೋಗ್ಯನಾದವನೆಂದೂ, ಅತಿರೌದ್ರವಾದ ಸಂಗ್ರಾಮಗಳಲ್ಲಿ ಪ್ರಭೂತವಾದ ಗಜತುರಗ ಬಲದಿಂದ ಮತ್ತರಾಗಿದ್ದ ರಿಪುಗಳನ್ನು ಸಂಹಾರ ಮಾಡಿ ವೀರಾಗ್ರಣಿಯೆಂದು ಖ್ಯಾತಿಗೊಂಡಿದ್ದನೆಂದೂ ನಿಶ್ಚಲವಾದ ಪತಿಭಕ್ತಿ ಯುಳ್ಳವನೆಂದೂ ಉಪಕಾರಸ್ಮರಣೆಯನ್ನು ಮಾಡುತ್ತ ಅದನ್ನು ತೀರಿಸಬೇಕೆಂಬ ಸಂಕಲ್ಪವುಳ್ಳವನೆಂದೂ ತನ್ನಂತೆ ನಿಜರಾಜ್ಯವನ್ನು ವಹಿಸಲು ಶಕ್ತನೆಂದೂ ಬಗೆದು ಕೃಷ್ಣರಾಜನು ಮಾರಸಿಂಹನನ್ನು ಕ್ರಮಾಗತ ಸಿಂಹಾಸನದ ಮೇಲೆ ಕುಳ್ಳಿರಿಸಿದನು.’ ಮರುಳನ ಬಳಿಕ ಪಟ್ಟಕ್ಕೆ ಬಾಧ್ಯನಾದ ರಚ್ಚಗಂಗನು ಪ್ರಾಪ್ತವಯಸ್ಕನಾಗಿದ್ದಿಲ್ಲವಾದುದರಿಂದಾಗಲಿ ದುರ್ಬಲನಾದುದರಿಂದಾಗಲಿ ರಾಜ್ಯಸೂತ್ರಗಳನ್ನು ವಹಿಸಲಿಲ್ಲವೆಂದು ಊಹಿಸಬಹುದು.

ಮಾರಸಿಂಹನಿಗೆ ಕೃಷ್ಣನ ಉತ್ತರ ದಿಗ್ವಿಜಯದಲ್ಲಿ ‘ಗೂರ್ಜರಾಧಿರಾಜ’ ನೆಂಬ ಹೆಸರು ಬಂದಿತೆಂದು ಅವನ ಶ್ರವಣಬೆಳ್ಗೊಳದ ಚರಮಶಾಸನದಲ್ಲಿ[2] ಬರೆದಿದೆ. ಗಜತುರಗಗಳಿಂದ ಉನ್ಮತ್ತನಾಗಿದ್ದ ಅಶ್ವಪತಿಯ ಸೊಕ್ಕನ್ನು ಮುರಿಯಲು ಉತ್ತರ ದಿಗ್ವಿಜಯಕ್ಕೆ ಹೋಗುವಾಗ ಕೃಷ್ಣನು ಮಾರಸಿಂಹನ

---

[1] *Mysore Arch. Report.*

[2] *Ep. Ind.* Vol. V. p. 176

ಪಟ್ಟಬಂಧವನ್ನು ಮಾಡಿದನೆಂದು ಹೇಳಿದ್ದೇವೆ. ಗೂರ್ಜರರಾಜನು ಅಶ್ವಪತಿ ಯೆಂದು ಖ್ಯಾತನಾಗಿದ್ದನು. ಇವನನ್ನು ಸೋಲಿಸಲು ಕೃಷ್ಣನ ಸಂಗಡ ಮಾರಸಿಂಹನೂ ಹೋಗಿ ಗೂರ್ಜರರ ಗರ್ವಭಂಗವನ್ನು ಮಾಡಿ ಗೂರ್ಜರಾಧಿ ರಾಜನೆನಿಸಿಕೊಂಡಿರಬೇಕು. ಇವನು ಗಜಘಟೆಗಳಿಂದ ಗರ್ವಿತನಾಗಿದ್ದ ನೊಳಂಬಾಧಿರಾಜನನ್ನು ಸಮರದಲ್ಲಿ ಧ್ವಂಸಮಾಡಿ ನೊಳಂಬ ಕುಲಾಂತಕನೆಂಬ ಬಿರುದನ್ನು ಧರಿಸಿದನು. ಶಬರ ಪ್ರಧಾನನಾದ ನರಗನನ್ನೂ ಬಲಿಷ್ಠನಾದ ಅಲ್ಲನನ್ನೂ ಗೆದ್ದು ಓಡಿಸಿದನು. ವಿಂಧ್ಯಪರ್ವತದ ಸಮೀಪದಲ್ಲಿದ್ದ ಕಿರಾತ ರನ್ನೂ ಧಾತ್ರಿಯಲ್ಲಿ ಪ್ರಸಿದ್ಧನಾಗಿದ್ದ ವಜ್ಜಳನನ್ನೂ ಯುದ್ಧಗಳಲ್ಲಿ ಸೋಲಿಸಿ ದನು. ವನವಾಸಿ ದೇಶದ ರಾಜರನ್ನು ಗೆದ್ದು ಸಮಸ್ತ ವಸ್ತು ವಾಹನಾದಿ ಗಳನ್ನು ಸ್ವಾಧೀನಪಡಿಸಿಕೊಂಡನು. ಮಾಟೂರ ವಂಶಜನನ್ನು ಕಾಲಿಗೆ ಬೀಳುವಂತೆ ಮಾಡಿದನು. ವಿಂಧ್ಯಾಟವೀ ಸಮೀಪದಲ್ಲಿ ತಾಪೀನದಿಯ ದಂಡೆಯ ಮೇಲೆ ಉಚ್ಚಂಗಿ, ಗೋನೂರು, ಬನವಸೆದೇಶ, ಪಾವಸೆಯ ಕೋಟೆ ಮೊದಲಾದ ಅನೇಕ ಎಡೆಗಳಲ್ಲಿ ಶತ್ರುಗಳನ್ನು ಜಯಿಸಿದನು. ಇವನು ತನ್ನ ಭುಜಬಲದಿಂದ ಮಾನ್ಯಖೇಟವನ್ನು ಸಂರಕ್ಷಿಸಿ ಅಲ್ಲಿ ಚಕ್ರವರ್ತಿಯ ದಂಡನ್ನು ಪ್ರವೇಶಮಾಡಿಸಿದನು. ಪ್ರತಾಪದಿಂದ ಚೋಳ, ಚೇರ, ಪಾಂಡ್ಯ, ಪಲ್ಲವ ರನ್ನು ಬಗ್ಗುಬಡಿದನು. ಚಾಳುಕ್ಯಕುಲದ ರಾಜಾದಿತ್ಯನನ್ನು ನಾಶಮಾಡಿ ದನು. ವಿಕ್ರಮದಿಂದ ಇಂದ್ರರಾಜನಿಗೆ ಪಟ್ಟವನ್ನು ಕಟ್ಟಿದನು. ಮೇಲೆ ಹೇಳಿದ ಗೂರ್ಜರರಾಜನು ಮಹೀಪಾಲನ ಮಗನಾದ ವಿಜಯಪಾಲನಾಗಿರ ಬೇಕು. ಖೊಟ್ಟಿಗನ ಕಾಲದಲ್ಲಿ ಪರಮಾರ ಸೀಯಕನು ಕ್ರಿ. ಶ. ೯೭೧ ರಲ್ಲಿ ಮಾನ್ಯಖೇಟವನ್ನು ಆಕ್ರಮಿಸಿಕೊಂಡಿದ್ದನು.[1] ಮಾರಸಿಂಹನು ಬಹು ಪರಾ ಕ್ರಮದಿಂದ ಅವನನ್ನು ಹೊಡೆದಟ್ಟಿ ಮರಳಿ ತನ್ನ ಪ್ರಭುವಿಗಾಗಿ ಮಾನ್ಯಖೇಟ ದುರ್ಗವನ್ನು ಸ್ವಾಧೀನಪಡಿಸಿಕೊಂಡಿರಬೇಕು. ಮಾನ್ಯಖೇಟದಲ್ಲಿ ಉಂಟಾದ ಅರಾಜಕತೆಯ ಸಮಯದಲ್ಲಿ ಮಾಂಡಲಿಕರಾಗಿದ್ದ ವಿಂಧ್ಯಪರ್ವತದ ಶಬರರು ತಿರುಗಿಬಿದ್ದಿರಬಹುದು. ಕಲ್ಯಾಣದ ಚಾಳುಕ್ಯ ರಾಜ್ಯಸ್ಥಾಪಕನಾದ ತೈಲಪನು ಕ್ರಿ. ಶ. ೯೭೩ ರಲ್ಲಿ ರಾಷ್ಟ್ರಕೂಟ ಕಕ್ಕಲನನ್ನು ಸೋಲಿಸಿ[2] ಅವನ ರಾಜ್ಯ ವನ್ನು ಕಿತ್ತುಕೊಂಡ ಬಳಿಕ ಮಾರಸಿಂಹನು ಇಂದ್ರನನ್ನು ರಟ್ಟಸಿಂಹಾಸನದ ಮೇಲೆ ಕುಳ್ಳಿರಿಸಿ ಪ್ರಭುಮನೆತನವನ್ನು ಉಜ್ಜೀವಗೊಳಿಸಲು ಪ್ರಯತ್ನ

---

[1] ಗೂರ್ಜರರನ್ನು ಕುರಿತು ರಾಷ್ಟ್ರಕೂಟ ಪ್ರಕರಣದಲ್ಲಿ ನಾವು ಬರೆದ ಟಿಪ್ಪಣಿಯನ್ನು ನೋಡಿರಿ.

[2] ಗದುಗಿನ ಶಿಲಾಶಾಸನ ( *Ind. Ant.* Vol. XXI, p. 167 ).

ಮಾಡಿದನು. ಮಾರಸಿಂಹನಿಗಾಗಿ ಅವನ ಮಂತ್ರಿಯಾದ ಚಾವುಂಡರಾಯನು ವಜ್ಜಳನನ್ನು ಖೇಡಗ ಯುದ್ಧದಲ್ಲಿ ಸೋಲಿಸಿ 'ಸಮರಧುರಂಧರ,' ಎಂಬ ಬಿರುದನ್ನು ಪಡೆದನೆಂದು ಚಾವುಂಡರಾಯ ಪುರಾಣದಲ್ಲಿ ಬರೆದಿದೆ. ಶ್ರವಣಬೆಳ್ಗೊಳದ ಶಾಸನದಲ್ಲಿ ರಾಷ್ಟ್ರಕೂಟ ೪ ನೆಯ ಇಂದ್ರನ ಆಜ್ಞೆಯ ಮೇರೆಗೆ ಮಾರಸಿಂಹನು ವಜ್ಜಳನ ಮೇಲೆ ದಂಡೆತ್ತಿಹೋದಾಗ ಚಾವುಂಡರಾಯನು ತನ್ನ ಪ್ರಭುವಿನ ಪಕ್ಕದಲ್ಲಿ ನಿಂತು ಶತ್ರುವನ್ನು ಬೆದರಿಸಿ ಓಡಿಸಿದನೆಂದು ಹೇಳಿದೆ. ಖೇಡಗ ಯುದ್ಧದಲ್ಲಿ ಸೋತ ವಜ್ಜಳನು ಸಿಲಾಹಾರ ಮನೆತನದ ರಾಜನು.[1] ಇವನು ಪಾತಾಳಮಲ್ಲನ ತಮ್ಮನು. ಈ ಮನೆತನದ ಅರಸರು ಮೊದಲಿನಿಂದಲೂ ರಾಷ್ಟ್ರಕೂಟರ ಅಧೀನರಾಗಿದ್ದರೂ ಇವನು ರಾಷ್ಟ್ರಕೂಟರ ಬಲವು ಕುಗ್ಗುತ್ತಿರುವುದನ್ನು ನೋಡಿ ಪ್ರಬಲರಾಗುತ್ತಿದ್ದ ಪರಮಾರರ ಪಕ್ಷವನ್ನು ವಹಿಸಿದಂತೆ ತೋರುತ್ತದೆ.[2] ಆದುದರಿಂದಲೇ ಪರಮಾರರ ವಶದಲ್ಲಿದ್ದ ಖೇಡಗದಲ್ಲಿ ವಜ್ಜಳನಿಗೆ ರಾಷ್ಟ್ರಕೂಟರೊಡನೆ ಯುದ್ಧಮಾಡಲು ಅನುವು ದೊರೆಯಿತು. ಖೊಟ್ಟಿಗನ ಕಾಲದಲ್ಲಿ ಖೇಟಕವನ್ನು ಪರಮಾರ ಸೀಯಕನು ಆಕ್ರಮಿಸಿಕೊಂಡಿದ್ದನು. ಅದನ್ನು ತಿರುಗಿ ಸಂಪಾದಿಸಲು ಇಂದ್ರನು ಮಾರಸಿಂಹನೊಂದಿಗೆ ಗುಜರಾತಕ್ಕೆ ಸೈನ್ಯಸಮೇತನಾಗಿ ಹೋಗಿ ಶತ್ರುವನ್ನು ಮೊದಲು ಸೋಲಿಸಿರಬೇಕು. ಆದರೆ ಖೇಟಕವು ಕಡೆಗೆ ಪರಮಾರರ ಕೈಯಲ್ಲಿಯೇ ಉಳಿಯಿತೆಂಬುದು ಶಾಸನಗಳಿಂದ ತಿಳಿಯಬರುತ್ತದೆ.

ಮಾಟೂರವಂಶದ ಮಾಂಡಲಿಕರು ಕ್ರಿ. ಶ. ೯೩೯ ರಲ್ಲಿಯೇ ೩ನೆಯ ಕೃಷ್ಣನ ಅಧೀನರಾಗಿ ಬನವಸೆ ಪ್ರಾಂತವನ್ನಾಳುತ್ತಿದ್ದರು. ಶಿವಮೊಗ್ಗೆ ಜಿಲ್ಲೆಯ ಸೊರಬ ತಾಲೂಕಿನಲ್ಲಿ ಇವರ ಕೆಲವು ಶಾಸನಗಳು ಸಿಕ್ಕಿವೆ. ಈ

---

[1] ರಾಷ್ಟ್ರಕೂಟ ಪ್ರಕರಣದಲ್ಲಿ ನೋಡಿರಿ.

[2] ಚಿತ್ತೂರು ಜಿಲ್ಲೆಗೆ ಸೇರಿದ ಪುಂಗನೂರು ಸಂಸ್ಥಾನದಲ್ಲಿ ವಜ್ಜಳ ಅಥವಾ ವಜ್ಜಳದೇವನ ಕೆಲವು ಶಾಸನಗಳು ಸಿಕ್ಕಿವೆ. (Nos. 176, 178, 180, 182 of 1931-32). ಶಕ ೮೮೬ ರ ಒಂದು ಶಾಸನದಲ್ಲಿ (No. 180) ಅವನು ಪುಲಿನಾಡನ್ನಾಳುತ್ತಿದ್ದನೆಂದು ಬರೆದಿದೆ. ತಿಥಿ ನಿರ್ದೇಶವಿಲ್ಲದ ಕೆಲ ಲಿಪಿಗಳಲ್ಲಿ ಅವನು ೩ನೆಯ ಕೃಷ್ಣನ ಮಾಂಡಲಿಕನಾಗಿ ಪುಲಿನಾಡಿಗೆ ಅಧಿಪತಿಯಾಗಿದ್ದನೆಂದು ಹೇಳಿದೆ. ಇನ್ನೊಂದು ಶಾಸನದಲ್ಲಿ (No. 176 of 1931-32) ಅವನು ಪೃಥ್ವೀರಾಜ್ಯಂಗೆಯ್ಯುತ್ತಿದ್ದನೆಂದು ಬರೆದಿದೆ. ಇದರಿಂದ ವಜ್ಜಳನು ೩ನೆಯ ಕೃಷ್ಣನ ಮಾಂಡಲಿಕನಾಗಿದ್ದನೆಂದೂ ಪ್ರಾಯಃ ಅವನ ಮರಣಾನಂತರ ಸ್ವತಂತ್ರನಾಗಲು ಪ್ರಯತ್ನಿಸಿದನೆಂದೂ ಊಹಿಸಬಹುದು. ಖೇಡಗ ಯುದ್ಧದಲ್ಲಿ ಹೋರಾಡಿದ ವಜ್ಜಳನು ಇವನೇ ಆಗಿರಬಹುದು. ಖೇಡಗವು ಮಾನ್ಯಖೇಟವಾಗಿರಬಹುದೆಂದು ಹುಲ್ಷರು ಬರೆದಿದ್ದಾರೆ.

ವಂಶದ ಮಾಚಿಗನು ಶಕ ೮೬೧ ( ಕ್ರಿ. ಶ. ೯೩೮–೩೯ ), ಶಕ ೮೭೬ ( ಕ್ರಿ. ಶ. ೯೫೪ ) ರಲ್ಲಿಯೂ ಜಪನೃಶವಿು ಎಂಬವನು ಕ್ರಿ. ಶ. ೯೫೫ ರಲ್ಲಿಯೂ ಶಾಂತಿವರ್ಮನು ಕ್ರಿ. ಶ. ೯೫೮ ರಲ್ಲಿಯೂ, ಗಬ್ಬಿಂದರನು ಕ್ರಿ. ಶ. ೯೬೨, ೯೬೮ ರಲ್ಲಿಯೂ ಬನವಸೆ ನಾಡನ್ನಾಳುತ್ತಿದ್ದರು. ಶಾಂತಿವರ್ಮನು ಮತ್ತೆ ಕ್ರಿ. ಶ. ೯೭೨ ರಲ್ಲಿಯೂ ಚಟ್ಟಯ್ಯ ಇಂದರರೆಂಬ ಸಾಮಂತರು ಕ್ರಿ. ಶ. ೯೭೩, ೯೭೭ ರಲ್ಲಿಯೂ ಇದೇ ನಾಡನ್ನಾಳುತ್ತಿದ್ದರು. ಇದರಿಂದ ಬನವಸೆ ನಾಡು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಸಾಮಂತರ ಆಧಿಪತ್ಯಕ್ಕೆ ಒಳಪಟ್ಟಿತ್ತೆಂದು ಗೊತ್ತಾಗುತ್ತದೆ. ಹೀಗಿರಲು ಸುಮಾರು ಕ್ರಿ. ಶ. ೮೭೮ ರಿಂದ ೯೪೫ ರ ವರೆಗೆ ಬನವಸೆಯು ಚೆಲ್ಲಕೇತನ ಮನೆತನದವರ ಕೈಯಲ್ಲಿತ್ತೆಂದೂ ಅದು ಬೂತುಗನ ವಶಕ್ಕೆ ಬಂದಮೇಲೆಯೂ ಅದೇ ಮನೆತನದವರ ವಶದಲ್ಲಿಯೇ ಉಳಿದಿತ್ತೆಂದೂ ಬೂತುಗನ ಮರಣಾನಂತರ ಅಥವಾ ರಚ್ಚಗಂಗನ ಕಾಲದಲ್ಲಿ ಮಾಟೂರರು ಚೆಲ್ಲಕೇತನರಿಂದ ಕಿತ್ತುಕೊಂಡರೆಂದೂ ಕಡೆಗೆ ೨ನೆಯ ಮಾರಸಿಂಹನು ಇವರನ್ನು ಸೋಲಿಸಿ ಶರಣಾಗತರಾಗುವಂತೆ ಮಾಡಿದನೆಂದೂ ಫ್ಲೀಟರು ಹೇಳಿದ್ದಾರೆ.[1] ಆದರೆ ಬನವಸೆಯ ಮೇಲೆ ಮಾಟೂರರು ಕ್ರಿ. ಶ. ೯೩೮–೩೯ ರಲ್ಲಿಯೇ ಇದ್ದುದರಿಂದ ಬೂತುಗನ ಮರಣಾನಂತರ ಅವರು ಚೆಲ್ಲಕೇತನರಿಂದ ಈ ನಾಡನ್ನು ಕಿತ್ತುಕೊಂಡರೆಂಬುದು ತಪ್ಪು. ಮಾರಸಿಂಹನು ಸೋಲಿಸಿದ ಮಾಟೂರನು ಕ್ರಿ. ಶ ೯೭೨ ರಲ್ಲಿ ಬನವಸೆಯನ್ನಾಳುತ್ತಿದ್ದ ಶಾಂತಿವರ್ಮನೇ.

ಚಾವುಂಡರಾಯನ ಪುರಾಣದಲ್ಲಿ ಚಾವುಂಡರಾಯನು ಮಾರಸಿಂಹನ ಆಜ್ಞೆಯ ಮೇರೆಗೆ ಗೋನೂರ ರಣಾಂಗಣದಲ್ಲಿ ನೊಳಂಬರನ್ನು ಸೋಲಿಸಿ ವೀರ ಮಾರ್ತಂಡನೆಂಬ ಬಿರುದನ್ನು ಪಡೆದನೆಂದು ಬರೆದಿದೆ. ಕಿಬ್ಬನಹಳ್ಳಿ ಶಿಲಾ ಶಾಸನದಲ್ಲಿ ಮಾರಸಿಂಹನು ನೊಳಂಬರೆಲ್ಲರನ್ನು ಕೊಂದು ಗಂಗವಾಡಿ–೯೬೦೦೦ ವನ್ನು ಶಕ ೮೯೪ನೆಯ ಆಂಗಿರಸ ಸಂವತ್ಸರದಲ್ಲಿ ನಿರಾಕುಲವಾಗಿ ಆಳುತ್ತಿದ್ದನೆಂದು ಹೇಳಿದೆ. ಇವೆರಡೂ ಒಂದೇಪ್ರಸಂಗದಲ್ಲಿ ಆದ ವಿಕ್ರಮವನ್ನು ಸೂಚಿಸುತ್ತಿದ್ದರೆ ನೊಳಂಬರ ಧ್ವಂಸವು ಶಕ ೮೯೪ ( ಕ್ರಿ. ಶ. ೯೭೨–೭೩ ) ಕ್ಕೆ ಸ್ವಲ್ಪ ಕಾಲ ಮೊದಲು ಆಯಿತೆಂದು ಹೇಳಿದರೆ ತಪ್ಪಾಗದು. ಮಾರಸಿಂಹನಿಂದ ಪರಾಜಿತನಾದ ನೊಳಂಬನು ಶಕ ೮೮೫ ರಲ್ಲಿ ಆಳುತ್ತಿದ್ದ ೨ನೆಯ ಪೊಟಿಲ್ಚೋರನೋ ಶಕ ೮೯೯ ರಲ್ಲಿದ್ದ ವೀರಮಹೇಂದ್ರನೋ ಹೇಳಲಿಕ್ಕಾಗದು. 'ನೊಳಂಬ ಕುಲಾಂತಕ' ಎಂಬ ಬಿರುದಿನಿಂದ ಮಾರಸಿಂಹನು ಅನೇಕ ನೊಳಂಬರನ್ನು

---

[1] *Ep. Ind.* Vol. V, p. 172.

ನಾಶಗೊಳಿಸಿದ್ದನೆಂದು ಗೊತ್ತಾಗುತ್ತದೆ. ಮೇಲೆ ಹೇಳಿದ ಮುಖ್ಯ ಸಂತಾನದವರಲ್ಲದೆ ದಿಲೀಪನ ೨ನೆಯ ಮಗನಾದ ನೊಳಿಪಯ್ಯನೂ (ಶಕ ೮೮೮) ಅವನ ಮಗನಾದ ಅಯ್ಯಪದೇವನೂ ಈ ಕಾಲದಲ್ಲಿ ಗಂಗರೊಡನೆ ಹೋರಾಡಿ ಸೋತಿರಬಹುದು.

ಮಾರಸಿಂಹನಿಗೆ ಸತ್ಯವಾಕ್ಯ, ಗಂಗಕಂದರ್ಪ, ಗಂಗವಿದ್ಯಾಧರ, ಗಂಗಚೂಡಾಮಣಿ, ಗಂಗಮಂಡಲಿಕ, ಗಂಗವಜ್ರ, ಗಂಗರಸಿಂಹ, ಗಂಗರೊಳ್ಗಂಡ, ಗುತ್ತಿಯಗಂಗ, ನೊಳಂಬಾಂತಕ, ನೊಳಂಬಕುಲಾಂತಕ, ಚಲದುತ್ತರಂಗ, ಧರ್ಮಾವತಾರ, ಜಗದೇಕವೀರ, ಮಂಡಲಿಕತ್ರಿಣೇತ್ರ ಎಂದು ಅನೇಕ ಬಿರುದಗಳಿದ್ದವು. ಇವನಿಗೆ ಸತ್ಯವಾಕ್ಯರಾಜಮಲ್ಲ, ರಕ್ಕಸಗಂಗ, ಅರುವಳಿದೇವ ಎಂಬ ಮೂವರು ಮಕ್ಕಳಿದ್ದರು. ಇವನ ಮಂತ್ರಿಯ ಹೆಸರು ಚಾವುಂಡರಾಯ. ಇವನು ಬ್ರಹ್ಮಕ್ಷತ್ರಿಯ ಕುಲದಲ್ಲಿ ಹುಟ್ಟಿದವನು. ಅಜಿತಸೇನನ ಶಿಷ್ಯನು. ಇವನು ಮಾರಸಿಂಹನಿಗಾಗಿ ಖೇಡಗ ಯುದ್ಧದಲ್ಲಿ ವಜ್ಜಳನನ್ನು ಸೋಲಿಸಿದುದಕ್ಕಾಗಿ ಸಮರಧುರಂಧರನೆಂದೂ ಗೋನೂರಲ್ಲಿ ನೊಳಂಬರನ್ನು ಸೋಲಿಸಿದುದಕ್ಕಾಗಿ ವೀರಮಾರ್ತಂಡನೆಂದೂ ಉಚ್ಚಂಗಿಯಲ್ಲಿ ತೋರಿಸಿದ ಪರಾಕ್ರಮಕ್ಕಾಗಿ ರಣರಂಗಸಿಂಹನೆಂದೂ ಪ್ರಖ್ಯಾತನಾಗಿದ್ದನು. ಇವನು ಮುಂದೆ ಸತ್ಯವಾಕ್ಯ ರಾಜಮಲ್ಲನಿಗೂ ಮಂತ್ರಿಯಾಗಿದ್ದನು. ಆಗ ಶ್ರವಣಬೆಳ್ಗೊಳದಲ್ಲಿ ಅದ್ಭುತವಾದ ಗೊಮ್ಮಟವಿಗ್ರಹವನ್ನು ಪ್ರತಿಷ್ಠೆಮಾಡಿದನು. ಇವನೇ ಚಾವುಂಡರಾಯ ಪುರಾಣದ ಕರ್ತನು.

ಮಾರಸಿಂಹನು ಸತ್ತನೆಂಬ ಸುದ್ದಿಯು ಪಲ್ಲವಕುಲದ ಪಲ್ಲವಾದಿತ್ಯ, ನೊಳಂಬಾಧಿರಾಜ, ಚೋರಯ್ಯ ನೊಳಂಬರಿಗೆ ಶಕ ೮೯೬ನೆಯ ಭಾವಸಂವತ್ಸರದ ಆಷಾಢಮಾಸದಲ್ಲಿ (ಜೂನ-ಜುಲೈ ೯೭೪) ತಿಳಿಯಿತೆಂದು ಮೇಲಾಗಾಣಿಯ ಒಂದು ಶಾಸನದಲ್ಲಿ ಬರೆದಿದೆ. ಇವನ ಹೆಬ್ಬಾಳಶಾಸನದ ಕಾಲವು ಕ್ರಿ. ಶ. ೯೭೫ ಎಂದು ಬರೆದಿದ್ದರೂ ಮಾರಸಿಂಹನ ಜೀವಮಾನದಲ್ಲಿ ಮಾಡಿದ ದಾನವನ್ನು ಆಗ ಕಲ್ಲಮೇಲೆ ಕೊರೆದಿರಬೇಕು. ಪಂಚಲದೇವನ ಮುಳ್ಗುಂದ ಶಾಸನವು ಶಕ ೮೯೭ನೆಯ ಯುವಸಂವತ್ಸರ ಭಾದ್ರಪದ ಕೃಷ್ಣ ೨ ಬೃಹಸ್ಪತಿವಾರ ಕನ್ಯಾಸಂಕ್ರಾಂತಿಯ ದಿನ (ಕ್ರಿ. ಶ. ೯೭೫, ಅಗಸ್ಟ ೨೬, ಗುರುವಾರ) ಹುಟ್ಟಿದ್ದು. ಇದರಲ್ಲಿ ಚಲದುತ್ತರಂಗ, ಜಗದೇಕವೀರ, ನೊಳಂಬ ಕುಲಾಂತಕ (ಮಾರಸಿಂಹ)ನ ಪಾದಪದ್ಮೋಪಜೀವಿಯಾದ ಪಂಚಲದೇವನು ಪೆರ್ದೊರ್ಜಿತ ಮರ್ಯಾದೆಯಾದ ಗಂಗರಾಜ್ಯವನ್ನು ನಿರಾಕುಲವಾಗಿ ಆಳುತ್ತಿದ್ದನೆಂದು ಹೇಳಿದೆ. ಇವನು ಕ್ರಿ. ಶ. ೯೭೧ ರಲ್ಲಿ ಮಾರಸಿಂಹನ ಕೈಕೆಳಗೆ ಸೆಬ್ಬಿ-೩೦ ನ್ನೂ ಕ್ರಿ. ಶ. ೯೭೩ ರಲ್ಲಿ

'೯೬'– ನಾಡನ್ನೂ ಆಳುತ್ತಿದ್ದನು. ಪಂಚಲದೇವನಿಗೆ ಸತ್ಯವಾಕ್ಯ ಎಂಬ ಬಿರುದು ಮುಳ್ಗುಂದ ಶಾಸನದಲ್ಲಿ ಕೊಟ್ಟಿದೆಯೆಂದು ಫ್ಲೀಟರು ತಪ್ಪು ತಿಳಿದುಕೊಂಡಿದ್ದಾರೆ.[1] ಅಲ್ಲಿ ನಿರ್ದೇಶಿಸಲ್ಪಟ್ಟ ಸತ್ಯವಾಕ್ಯ ಎಂಬ ಬಿರುದು ಪಂಚಲನ ಒಡೆಯನಾದ ನೊಳಂಬಕುಲಾಂತಕನಿಗೆ ಅನ್ವಯಿಸುತ್ತದೆ. ಮಾರಸಿಂಹನ ಹಿರಿಯಮಗನಾದ ಸತ್ಯವಾಕ್ಯ ರಾಜಮಲ್ಲನು ಕ್ರಿ. ಶ. ೯೭೮ ರಲ್ಲಿ ಗಂಗರಾಜ್ಯವನ್ನಾಳುತ್ತಿದ್ದಾಗ 'ಅಂಣನ ಬಂಟ' ನಾದ ರಕ್ಕಸನು ಬೆದ್ದೊರೆಗರೆ ನಾಡಿಗೆ ಅಧಿಪತಿಯಾಗಿದ್ದನೆಂದು ಪೆಗ್ಗೂರ ಶಿಲಾಶಾಸನದಲ್ಲಿ[2] ಬರೆದಿದೆ. ದೊಡ್ಡ ಹೊಮ್ಮದ ಒಂದು ಲಿಪಿಯಲ್ಲಿ ಜಸದುತ್ತರಂಗನು ಕ್ರಿ. ಶ. ೯೭೭ ರಲ್ಲಿ ಆಳುತ್ತಿದ್ದನೆಂದು ಹೇಳಿದೆ. ಕೊತ್ತತ್ತಿಯ ಶಾಸನವು ಜಗದುತ್ತರಂಗ ರಾಜಮಲ್ಲನು ಶಕ ೮೯೯ ನೆಯ ಪ್ರಮಾದಿಸಂವತ್ಸರದಲ್ಲಿ ರಾಜ್ಯಭಾರಮಾಡುತ್ತಿದ್ದನೆಂದು ಹೇಳುತ್ತದೆ. ಆದರೆ ಶಕ ೮೯೯, ಈಶ್ವರಸಂವತ್ಸರ (ಕ್ರಿ. ಶ. ೯೭೭) ವಾಗಿತ್ತು. ಜಸದುತ್ತರಂಗ ಎಂಬ ಪದವನ್ನು ಜಗದುತ್ತರಂಗ ಎಂದು ಈ ಲಿಪಿಯಲ್ಲಿ ತಪ್ಪು ಓದಿದ್ದ ಪಕ್ಷದಲ್ಲಿ ದೊಡ್ಡ ಹೊಮ್ಮದ ಜಸದುತ್ತರಂಗನು ರಾಜಮಲ್ಲನಾಗಿರಬೇಕು. ಮೈಸೂರು ಜಿಲ್ಲೆಯ ಒಂದು ಶಾಸನದಲ್ಲಿ ಸತ್ಯವಾಕ್ಯ ಜಸದುತ್ತರಂಗನು ಶಕ ೮೯೮ ನೆಯ ಧಾತುಸಂವತ್ಸರದಲ್ಲಿ ರಾಜ್ಯಂಗೆಯ್ಯುತ್ತಿದ್ದನೆಂದು ಹೇಳಿರುವುದರಿಂದ ರಾಜಮಲ್ಲನು ಕ್ರಿ. ಶ. ೯೭೬ ರಲ್ಲಿಯೂ ಆಳುತ್ತಿದ್ದನೆಂದು ತಿಳಿಯಬಹುದು.

ಮಾರಸಿಂಹನಿಗೆ ಸತ್ಯವಾಕ್ಯ ಎಂಬ ಬಿರುದು ಇತ್ತೆಂದು ಮೇಲೆ ಹೇಳಿದ್ದೇವೆ. ಗಂಗಮನೆತನದಲ್ಲಿ ಆಳಿದ ರಾಜರು ಸತ್ಯವಾಕ್ಯ ನೀತಿಮಾರ್ಗ ಎಂಬ ಬಿರುದುಗಳನ್ನು ಅನುಕ್ರಮವಾಗಿ ಧರಿಸುತ್ತ ಬಂದಿರುವರು. ಈಗ ಸತ್ಯವಾಕ್ಯ ಮಾರಸಿಂಹನ ನಂತರ ಸತ್ಯವಾಕ್ಯ ಎಂಬ ಬಿರುದುಳ್ಳ ರಾಜನು ಬರುವುದು ಯುಕ್ತವಾಗಲಾರದು. ಆದುದರಿಂದ ಮಾರಸಿಂಹ ರಾಜಮಲ್ಲರ ನಡುವೆ ಒಬ್ಬ ನೀತಿಮಾರ್ಗನು ಸ್ವಲ್ಪಕಾಲವಾದರೂ ಆಳಿರಬೇಕು. ಇವನಾರೆಂಬುದು ನಮಗೆ ಗೊತ್ತಿಲ್ಲ.

೬ ನೆಯ ವಿಕ್ರಮಾದಿತ್ಯನ ಗದುಗಿನ ಶಾಸನದಲ್ಲಿ[3] ೨ ನೆಯ ತೈಲಪನು "ಯುದ್ಧದೊಳು ಪಂಚಲನ ತಲೆಯುಮಂ ಕೊಂಡು ಚಾಳುಕ್ಯ ರಾಜ್ಯಾ-

---

[1] *Ep. Ind.* Vol. VI, p. 259

[2] *Coorg Inscriptions*, No. 4.

[3] *Ind. Ant.* Vol. XXI, p. 167.

ಸ್ಪದಮುಂ ಕೈಕೊಂಡು ನಿಷ್ಕಂಟಕಮೆನಿಸಿದಂ" ಎಂದು ಬರೆದಿದೆ. ಇದು ಸು. ಕ್ರಿ. ಶ. ೯೭೬ ರಲ್ಲಿ ಜರುಗಿರಬಹುದು. ಪಂಚಲನು ತೈಲಪನನ್ನು ಏರಗೊಡದಂತೆ ಆಗಿಂದಾಗ್ಗೆ ಅವನನ್ನು ಪ್ರತಿಭಟಿಸುತ್ತಿದ್ದನೆಂದು 'ಚಾಳುಕ್ಯ ಪಂಚಾನನ' ಎಂಬ ಅವನ ಬಿರುದಿನಿಂದ ಹೇಳಬಹುದು. ತೈಲಪನು ಸಮಯ ವನ್ನು ಸಾಧಿಸಿ ಯುದ್ಧದಲ್ಲಿ ಇವನನ್ನು ಕೊಂದು ಗಂಗರಾಜ್ಯದ ಉತ್ತರ ಪಶ್ಚಿಮ ಭಾಗಗಳನ್ನು ಆಕ್ರಮಿಸಿಕೊಂಡನು. ಕ್ರಿ. ಶ. ೯೯೨ ರಲ್ಲಿ ಮಾಟೂರವಂಶದ ಶಾಂತಿವರ್ಮನು ತೈಲಪನ ಮಾಂಡಲಿಕನಾಗಿ ಸಾಂತಳಿಗೆ-೧೦೦೦, ಬೆಳ್ಗಹೆ ೭೦, ಎಡೆನಾಡು-೭೦, ತಂದವೂರ-೧೨, ಗೆದೆಯು-೧೨, ಮುಗುಂದ-೧೨, ಪುಲಿವಟ್ಟಿ-೧೨, ಕಲ್ಪತ್ತೆ-೭ ನಾಡುಗಳನ್ನು ಆಳುತ್ತಿದ್ದನೆಂದು ಹೆಜ್ಜೆಯ ಒಂದು ಲಿಪಿಯಿಂದ ಗೊತ್ತಾಗುತ್ತದೆ.

ಸತ್ಯವಾಕ್ಯ ರಾಜಮಲ್ಲನ ತರುವಾಯದಲ್ಲಿ ರಕ್ಕಸಗಂಗ ರಾಜಮಲ್ಲನು ರಾಜ್ಯಭಾರಮಾಡಿದನು. ಪೆಗ್ಗೂರ ಮತ್ತು ಶ್ರವಣಬೆಳ್ಗೊಳದ ಶಾಸನಗಳಲ್ಲಿ [1] ಉಕ್ತನಾದ 'ಅಂಣನಬಂಟ' ರಕ್ಕಸನು ಇವನೇ. ಇವನು ಕ್ರಿ. ಶ. ೯೭೮-೯೮೯ ರ ಮಧ್ಯದಲ್ಲಿ ಕೆಲವುಕಾಲ ಆಳಿರಬೇಕು. ಇವನ ಕೈಕೆಳಗೆ ಪುಳಿಗನೆಂಬವನು ನೊಳಂಬವಾಡಿ-೩೨೦೦೦ ಪ್ರಾಂತವನ್ನಾಳುತ್ತಿದ್ದನೆಂದು ತೆನ್ನಿಲಿ ಶಾಸನದಲ್ಲಿ [2] ಬರೆದಿದೆ. ನಾಗವರ್ಮನು ತನ್ನ ಛಂದೋಂಬುಧಿಯಲ್ಲಿ ರಕ್ಕಸಗಂಗನು ತನ್ನ ಪೋಷಕನೆಂದು ಹೇಳಿಕೊಂಡಿದ್ದಾನೆ. ಇವನಿಗೆ ಅರುಮುಳಿದೇವನೆಂಬ ಒಬ್ಬ ತಮ್ಮನಿದ್ದನು. ಈ ಅರುಮುಳಿದೇವನಿಗೆ ರಾಜ-ವಿದ್ಯಾಧರನೆಂಬ ಒಬ್ಬ ಮಗನಿದ್ದನೆಂದು ರಾಯಿಸರು ಹೇಳಿದ್ದಾರೆ. ಇವರ ವಿಷಯದಲ್ಲಿ ಯಾವ ಸಂಗತಿಗಳೂ ತಿಳಿದಿಲ್ಲ.

ಕ್ರಿ. ಶ. ೯೮೯ ಅಥವಾ ೯೯೨ ರಲ್ಲಿ ಗಂಗಮನೆತನದ ನೀತಿಮಾರ್ಗ ಪೆರ್ಮಾನಡಿ ರಾಜಮಲ್ಲನು ಪೃಥಿವೀರಾಜ್ಯಂಗೆಯ್ಯುತ್ತಿದ್ದನೆಂದು ಚಿಕ್ಕಮಗ ಳೂರ ಶಾಸನದಲ್ಲಿ ಬರೆದಿದೆ. ಚಾಮರಾಜನಗರದ ಒಂದು ಲಿಪಿಯಲ್ಲಿ [3] ನೀತಿಮಾರ್ಗ ಪೆರ್ಮಾನಡಿಯು ಶಕ ೯೨೧ ನೆಯ ವಿಕಾರಿ ಸಂವತ್ಸರದಲ್ಲಿ

[1] *Coorg Inscriptions*, No. 4. *Ep. Ind.* Vol. V, 176.
[2] *Ep. Carn.* Kolar Dist. Srinivasapur No. 59.
[3] *Ep. Carn.* Vol. III, Chamarajanagar 10.

(ಕ್ರಿ. ಶ. ೯೯೯) ರಾಜ್ಯಂಗೆಯ್ಯುತ್ತಿದ್ದನೆಂದು ಬರೆದಿದೆ. ಈ ನೀತಿಮಾರ್ಗನು ಚಿಕ್ಕಮಗಳೂರ ಶಾಸನದ ನೀತಿಮಾರ್ಗ ರಾಜಮಲ್ಲನೇ ಆಗಿರಬಹುದು. ೨ನೆಯ ತೈಲಪನು ಉತ್ತರಭಾಗವನ್ನಾಕ್ರಮಿಸಿಕೊಂಡಮೇಲೆ ಉಳಿದ ಗಂಗರಾಜ್ಯವೆಲ್ಲ ಇವನ ಕೈಯಲ್ಲಿದ್ದಿರಬೇಕು. ಇವನಿಗೂ ಸತ್ಯವಾಕ್ಯ ೪ನೆಯ ರಾಜಮಲ್ಲನಿಗೂ ಯಾವಸಂಬಂಧವಿತ್ತೆಂಬುದು ಗೊತ್ತಿಲ್ಲ. ಚೋಳಮನೆತನದ ೧ನೆಯ ರಾಜರಾಜನು ಗಂಗಪಾಡಿಯನ್ನು ಕಿತ್ತುಕೊಂಡನೆಂದು ಅವನ ೧೪ನೆಯ ವರ್ಷದ (ಕ್ರಿ. ಶ. ೯೯೮-೯೯) ಒಂದುಶಾಸನದಿಂದ ಗೊತ್ತಾಗುತ್ತದೆ. ಈ ಸಂಗತಿಯು ನೀತಿಮಾರ್ಗ ರಾಜಮಲ್ಲನ ಕಾಲದಲ್ಲಿ ನಡೆದಿರಬೇಕು.

**೨ನೆಯ ಮಾರಸಿಂಹನ ಮಹತ್ವದ ಶಾಸನಗಳು:**

೧. ಮಾರಸಿಂಹನ ಕೂಡಲೂರ ತಾಮ್ರಶಾಸನ.[1] — ಶಕ ೮೮೪ನೆಯ ರುಧಿರೋದ್ಗಾರಿ ಸಂವತ್ಸರದ ಚೈತ್ರಶುದ್ಧ ಪಂಚಮಿ ಬುಧವಾರದಂದು ಮಂಡಲಿಕ ತ್ರಿಣೇತ್ರನಾದ ಮಾರಸಿಂಹನು ವಾದಿಘಂಘಳಭಟ್ಟನಾದ ಮುಂಜಾರ್ಯನಿಗೆ ಪುನ್ನಾಡು-೬೦೦೦ ದ ಒಡಗರೆ-೩೦೦ ನಾಡಿನಲ್ಲಿದ್ದ ಬಾಗಿಯೂರ ಗ್ರಾಮವನ್ನು ಸ್ರುತಗುರುದಕ್ಷಿಣೆಯಾಗಿ ದಾನಮಾಡಿದನು. ರುಧಿರೋದ್ಗಾರಿಯು ಶಕ ೮೮೬ ಆಗುತ್ತೆಂದು ಸುಯೆಲ್ಲರು 'Sidhāntas and Indian Calender' ಎಂಬ ಪುಸ್ತಕದಲ್ಲಿ ಹೇಳಿದ್ದಾರೆ. ಔತ್ತರೀಯ ಗಣನೆಯಂತೆ ಶಕ ೮೮೫ ರುಧಿರೋದ್ಗಾರಿಯಾಗುತ್ತೆಂದೂ ಹೇಳಿದ್ದಾರೆ. ಸ್ವಾಮಿಕಣ್ಣು ಪಿಳ್ಳೆಯವರು ಸೂರ್ಯಸಿದ್ಧಾಂತದಲ್ಲಿ ಔತ್ತರೀಯ ಗಣನೆಯಂತೆ ರುಧಿರೋದ್ಗಾರಿಯು ಶಕ ೮೮೪ ಆಗುತ್ತೆಂದೂ ದಕ್ಷಿಣದ ಪದ್ಧತಿಯಲ್ಲಿ ಅದು ಶಕ ೮೮೫ ರಲ್ಲಿ ಬಂದಿತ್ತೆಂದೂ ಬರೆದಿದ್ದಾರೆ. ಸ್ವಾಮಿಕಣ್ಣು ಪಿಳ್ಳೆಯವರು ಹೇಳಿದಂತೆ ಶಕ ೮೮೪ ಔತ್ತರೀಯ ರುಧಿರೋದ್ಗಾರಿಯೆಂದು ತಿಳಿದರೆ ಈ ಶಾಸನದ ಕಾಲವು ಸರಿಯಾಗಿ ಕ್ರಿ.ಶ. ೯೬೨ ರಲ್ಲಿ ಬೀಳುತ್ತದೆ. ಆದರೆ ಆಗ ಮಾರಸಿಂಹನು ಇನ್ನೂ ಪಟ್ಟಕ್ಕೆ ಬಂದಿದ್ದಿಲ್ಲ. ದಕ್ಷಿಣದ ಪದ್ಧತಿಯ ಪ್ರಕಾರ ಇದರ ಕಾಲವು ಕ್ರಿ. ಶ. ೯೬೩ ಆಗುತ್ತದೆ. ವಾರವು ಮಾತ್ರ ಬುಧವಾರವಾಗಿರದೆ ಮಂಗಳವಾರವಾಗಿತ್ತು.

ಈ ಕಾಲದಲ್ಲಿ ವಾದಿ ಘಂಘಳನೆಂದು ಹೆಸರುಗೊಂಡ ಮುಂಜಾರ್ಯನು ಶಬ್ದಾಗಮ ತತ್ವವೇದಿಯೂ, ತರ್ಕಶಾಸ್ತ್ರದ ಮೂರೂ ಸಂಪ್ರ-

[1] *Mysore Arch Report*, 1921, pp. 18 ff.

ದಾಯುಗಳಲ್ಲಿ ಚತುರನೂ, ಲೋಕಾಯುತ ಸಾಂಖ್ಯಶಾಸ್ತ್ರಗಳಲ್ಲಿ ಪಂಡಿತನೂ ಆಗಿದ್ದನು. ವೇದಾರ್ಥವಿಚಾರದಲ್ಲಿ ಬುದ್ಧಿವಂತನೂ ಬೌದ್ಧಮತವನ್ನು ಚೆನ್ನಾಗಿ ಅರಿತವನೂ ಆಗಿದ್ದನು. ಜೈನಮತದಲ್ಲಿ ವಾದಿ ಘಂಘಳನೆಂದು ಖ್ಯಾತಿಯನ್ನು ಪಡೆದಿದ್ದನು. ಈತನು ಸ್ಯಾದ್ವಾದವನ್ನು ಪ್ರಚುರಗೊಳಿಸುತ್ತ ಅನ್ಯ ವಿದ್ವಾಂಸರನ್ನು ವಾದದಲ್ಲಿ ಜಯಿಸುತ್ತಿದ್ದನು. ಈತನು ಕವೀಶ್ವರನೂ ಒಳ್ಳೇ ವೈಯಾಕರಣಿಯೂ ಆಗಿದ್ದನು. ನಿಃಸಂಶಯವಾಗಿ ವಾದಾಂಶಗಳಿಲ್ಲದಂತೆ ವ್ಯಾಕರಣಪ್ರಕಾರವನ್ನುವ್ಯುತ್ಪಾದಿಸಿದ್ದನು. ಇದರಿಂದ ಇವನನ್ನು ಶಾಬ್ದಿಕರು ಯಾವಾಗಲೂ ಆಶ್ರಯಿಸುತ್ತಿದ್ದರು. ಇವನು ಪರಾಶರಗೋತ್ರದ ಚಳುಕಿವಡಚಿ ಚರಣದ ಶ್ರೀಧರಭಟ್ಟನ ಪೌತ್ರನೂ ಅಯ್ಯಪಭಟ್ಟನ ಪುತ್ರನೂ ಆಗಿದ್ದನು. ಶ್ರೀಧರಭಟ್ಟನು ವರಾಟದೇಶಕ್ಕೆ ತಿಲಕಪ್ರಾಯವಾಗಿದ್ದ ಪಿಪ್ಪಲಗ್ರಾಮದಿಂದ ಬಂದವನು. ಈತನು ಷಟ್ಕರ್ಮ್ಮನಿರತನು. ವೇದಾಂತೋಪನಿಷದರ್ಥಗಳನ್ನು ತಿಳಿದುಕೊಂಡು ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಿದ್ದನು. ಆಶ್ರಿತರಿಗೆ ಸ್ವರ್ಗಾಪವರ್ಗಗಳ ಹಾದಿಯನ್ನು ತೋರಿಸುತ್ತಿದ್ದನು. ಅಯ್ಯಪಭಟ್ಟನು ನಿತ್ಯನೈಮಿತ್ತಿಕ ಕರ್ಮಗಳಿಂದ ದೇವಪಿತೃಗಳನ್ನು ತರ್ಪಿಸುತ್ತಿದ್ದನು. ಈತನು ಸಮರಭೂಮಿಗಳಲ್ಲಿ ವರಾಟದೇಶದ ರಾಜನಿಗಾಗಿ ಅನೇಕ ಸಾಹಸಕೃತ್ಯಗಳನ್ನು ಮಾಡಿ ವೀರಾವತಾರನೆಂದು ಖ್ಯಾತನಾಗಿದ್ದನು. ಈ ವರ್ಣನೆಯನ್ನು ನೋಡಿದರೆ ಮುಂಜಾರ್ಯನ ಪಿತೃಪಿತಾಮಹರು ವೈದಿಕಮಾರ್ಗವನ್ನವಲಂಬಿಸಿದ ಬ್ರಾಹ್ಮಣರಾಗಿದ್ದರೆಂದೂ ಮುಂಜಾರ್ಯನು ಜೈನಮತದಲ್ಲಿ ಪ್ರವೃತ್ತಿಯುಳ್ಳವನಾಗಿದ್ದನೆಂದೂ ತೋರುತ್ತದೆ.

ಮುಂಜಾರ್ಯನು ಗಂಗ ಮತ್ತು ರಾಷ್ಟ್ರಕೂಟ ರಾಜರಿಂದ ಸನ್ಮಾನಿತನಾಗಿದ್ದನು. ಇವನು ಗಂಗಗಾಂಗೇಯನಾದ ಬೂತುಗನಿಗೆ ಸಾಹಿತ್ಯವಿದ್ಯೆಯಲ್ಲಿ ನೈಪುಣ್ಯವನ್ನು ಸಂಪಾದಿಸಿಕೊಟ್ಟಿದ್ದನು. ಮಾರಸಿಂಹನಿಗೆ ಶ್ರುತಗುರುವಾಗಿದ್ದನು. ರಾಷ್ಟ್ರಕೂಟ ವಲ್ಲಭರಾಜನ ಸೈನ್ಯದ ಅಧಿಕಾರಿಗಳು ಇವನ ರಾಜವಿದ್ಯೆಯ ಪ್ರಬೋಧಕ್ಕೆ ಬೆರಗಾಗಿ ಮನ್ನಣೆಯನ್ನು ಕೊಡುತ್ತಿದ್ದರು. ಇವನ ರಾಜಮಂತ್ರದ ಪ್ರಭಾವದಿಂದ ೩ನೆಯ ಕೃಷ್ಣರಾಜನು ನಾಲ್ಕುದಿಕ್ಕುಗಳಲ್ಲಿಯೂ ರಾಜ್ಯವನ್ನು ಹಬ್ಬಿಸಿದನು. ಇದಕ್ಕಾಗಿ ಚಕ್ರವರ್ತಿಯೂ ಅವನ ಅನೇಕ ಸಾಮಂತರೂ ಇವನನ್ನು ಗೌರವಿಸುತ್ತಿದ್ದರು.

೨. ಆರಣಿಶಾಸನ.— ಚಲದುತ್ತರಂಗ ನೊಳಂಬ ಕುಲಾಂತಕ ಪೆರ್ಮಾನಡಿಗಳು ಗಂಗವಾಡಿ–೯೬೦೦೦ ಪ್ರಾಂತವನ್ನು ನಿಷ್ಕಂಟಕಂಮಾಡಿ ನಿರಾಕುಲವಾಗಿ ಮಾಗಡಿನಾಡ ರಾಜಪೊಳಲ ಬೀಡಿನೊಳಿರ್ದು ಆಳುತ್ತಿದ್ದಾಗ ಮಹಾಮಾತ್ಯ ಮಾಬಲಯ್ಯನು ಆರಣೆಯೂರ ಕೆಳಗಣ ಬಿತ್ತುವಟ್ಟವನ್ನು ಬಿಟ್ಟನೆಂದು ಬರೆದಿದೆ. ಈ ಶಾಸನದ ಕಾಲವು ಪೆರ್ಮಾನಡಿಗಳ ಪಟ್ಟಂಗಟ್ಟಿದ ೧೦ನೆಯ ಆಂಗಿರಸ ಸಂವತ್ಸರದಲ್ಲಿ ಆಶ್ವಯುಜಮಾಸ ಪುಣ್ಣಮಿ ಸೋಮಗ್ರಹಣ ವಿಷುಸಂಕ್ರಾಂತಿ. ಇದರಿಂದ ಮಾರಸಿಂಹನ ಪಟ್ಟಬಂಧದ ಕಾಲವು ಕ್ರಿ. ಶ. ೯೬೩–೬೪ ಎಂದು ನಿರ್ಧಾರವಾಗುತ್ತದೆ.

---

*

# ಭಾಗ ೪—ನೊಳಂಬರು

ಮೊದಲು ನೊಳಂಬರನ್ನು ಗಂಗರ ಮಾಂಡಲಿಕರಾಗಿಯೇ ಇತಿಹಾಸದಲ್ಲಿ ಕಾಣುತ್ತೇವೆ. ಇವರಲ್ಲಿ ಮೊದಲನೆಯ ಅರಸನಾದ ಮಂಗಲನೊಂಬಾಧಿರಾಜನ ಕಾಲದಲ್ಲಿ ಇವರ ರಾಜ್ಯವಿಸ್ತಾರವೆಷ್ಟು ಇತ್ತೆಂಬುದು ಗೊತ್ತಿಲ್ಲ. ಚಾರು ಪೊನ್ನೇರನು ನೊಳಂಬಳಿಗೆ ಸಾಯಿರವನ್ನಾಳುತ್ತಿದ್ದಾಗ ಇವನ ಪತ್ನಿಯಾದ ಗವಗಣಬ್ಬೆಯು ಮುದರಿಕಲ್ಲನ್ನಾಳುತ್ತಿದ್ದಳೆಂದು ಒಂದು ಲಿಪಿಯಲ್ಲಿ ಹೇಳಿದೆ. ಈ ಶಾಸನವು ಚಳ್ಳಕೆರೆ ತಾಲೂಕಿ (ಚಿತ್ರದುರ್ಗ ಜಿಲ್ಹೆ) ನಲ್ಲಿ ಇರುವುದರಿಂದ ಆ ತಾಲೂಕಿನ ಕೆಲಭಾಗವು ನೊಳಂಬಳಿಗೆಯಲ್ಲಿ ಸೇರಿತ್ತೆಂದು ಗೊತ್ತಾಗುತ್ತದೆ. ಇದರ ಮಗ್ಗುಲಿನಲ್ಲಿರುವ ತುಮುಕೂರು ಜಿಲ್ಹೆಯ ಸೀರಾ ತಾಲೂಕಿನಲ್ಲಿಯೂ ಅನಂತಪುರ ಜಿಲ್ಹೆಯ ಹಿಂದುಪುರದಲ್ಲಿಯೂ ಪೊಳಲ್ಚೋರ ಮಹೇಂದ್ರರ ಶಿಲಾ-ಶಾಸನಗಳು ಸಿಕ್ಕುವುದರಿಂದ ಈ ಭಾಗಗಳೂ 'ಸಾವಿರ' ನಾಡಾದ ನೊಳಂಬಳಿಗೆಯಲ್ಲಿ ಸೇರಿರಬೇಕು. ಚಳ್ಳಕೆರೆ ತಾಲೂಕಿನ ದೊಡ್ಡ ಉಳವರ್ತಿಯಲ್ಲಿ ಚಾರುಪೊನ್ನೇರನ ತಂದೆಯಾದ ಸಿಂಹಪೋತನ ಲಿಪಿಗಳು ದೊರೆತಿವೆ. ಇದರಿಂದ ಸಿಂಹಪೋತನು ನೊಳಂಬಳಿಗೆಯ ಅಧಿಪತಿಯಾಗಿದ್ದನೆಂದು ಹೇಳಬಹುದು. ಮುಂದೆ ಈ ಸಣ್ಣ ರಾಜ್ಯವು ಬೆಳೆದು ನೊಳಂಬವಾಡಿ–೩೨೦೦೦ ಪ್ರಾಂತವೆಂದು ಹೆಸರುಗೊಂಡಿತು.

ನೊಳಂಬರು ತಾವು ಈಶ್ವರವಂಶಜನಾದ ಕಾಂಚೀಪತಿ ತ್ರಿಣಯಪಲ್ಲವನ ಸಂತತಿಯವರೆಂದು ಹೇಳಿಕೊಂಡಿದ್ದಾರೆ. ತೆಲುಗುಚೋಡರ ಮೂಲಪುರುಷನಾದ ತ್ರಿಣಯನಪಲ್ಲವನೂ ನೊಳಂಬರ ಪೂರ್ವಜನೂ ಒಬ್ಬನೇ ಎಂದು ತೋರುತ್ತದೆ. ಪೂರ್ವಚಳುಕ್ಯರ ಲಿಪಿಗಳು ಅಯೋಧ್ಯೆಯ ವಿಜಯಾದಿತ್ಯನು ದಕ್ಷಿಣಾಪಥಕ್ಕೆ ಬಂದು ಅಲ್ಲಿಯ ರಾಜನಾಗಿದ್ದ ತ್ರಿಲೋಚನಪಲ್ಲವನೊಂದಿಗೆ ಕಾದಿ ಮಡಿದನೆಂದೂ ಇವನಿಂದೀಚೆಗೆ ೫ನೆಯ ತಲೆಗೆ ಕುಬ್ಜವಿಷ್ಣುವರ್ಧನನು ರಾಜನಾದನೆಂದೂ ಹೇಳುತ್ತವೆ. ಕುಬ್ಜವಿಷ್ಣುವರ್ಧನನು ಕ್ರಿ. ಶ. ೬೧೫ ರಲ್ಲಿ ಪೂರ್ವ ಚಳುಕ್ಯಮನೆತನವನ್ನು ಸ್ಥಾಪಿಸಿದನೆಂದು ತಿಳಿದಿರುವುದರಿಂದ ತ್ರಿಲೋ-ಚನ (ತ್ರಿಣಯನ) ಪಲ್ಲವನ ಕಾಲವು ಕ್ರಿ. ಶ. ೫ನೆಯ ಶತಮಾನದ ಅಂತ್ಯಭಾಗವಾಗಿರಬೇಕು.[1] ಈ ತ್ರಿಣಯನ ಪಲ್ಲವನ ಕುಲದಲ್ಲಿ ನೊಂಬಾಧಿರಾಜ

---

[1] *Ep. Ind.* Vol. XI, p. 34.

ಮಂಗಲನು ಪ್ರಸಿದ್ಧಿಗೆ ಬಂದನು. ಇವನು ಕಿರಾತನೃಪತಿಯನ್ನು ಯುದ್ಧದಲ್ಲಿ ಸೋಲಿಸಿ ಶತ್ರುಗಳನ್ನು ಸಂಹರಿಸಿ ಚಂಡಿಕಾದೇವಿಯನ್ನು ತೃಪ್ತಿಪಡಿಸಿದನು. ಇವನು ಕರ್ಣಾಟರಿಂದ ವಿಶೇಷವಾಗಿ ಹೊಗಳಿಸಿಕೊಳ್ಳಲ್ಪಟ್ಟಿದ್ದನು. ವಿದ್ವಜ್ಜನರು ಇವನನ್ನು ಆಶ್ರಯಿಸಿದ್ದರು. ಸಿಂಹಪೋತನು ಗಂಗಮನೆತನದ ಶ್ರೀಪುರುಷನ (ಕ್ರಿ. ಶ. ೭೨೬–೭೮೮) ಮಾಂಡಲಿಕನಾಗಿದ್ದುದರಿಂದ ಅವನ ತಂದೆಯಾದ ಮಂಗಲರಾಜನ ಕಾಲದ ಕರ್ಣಾಟರೆಂದರೆ ಬಾದಾಮಿಯ ಚಳುಕ್ಯರು. ಇವರು ಕರ್ಣಾಟರೆಂದು ಹೆಸರುಗೊಂಡಿದ್ದರೆಂಬುದು ದಂತಿದುರ್ಗ್ಗನ ಸಾಮನಗಡ ಶಾಸನದಲ್ಲಿ (ಕ್ರಿ. ಶ. ೭೫೩) ಉಕ್ತವಾಗಿದೆ. ಮಂಗಲರಾಜನು ಎಲ್ಲಿ ಆಳುತ್ತಿದ್ದನೆಂಬುದು ಗೊತ್ತಿಲ್ಲ.

ಮಂಗಲರಾಜನ ಮಗನಾದ ಸಿಂಹಪೋತನು ನೊಳಂಬರಲ್ಲಿ ಮೊದಲು ಹೆಸರುಪಡೆದ ಅರಸನು. ಇವನ ಕಾಲವು ನಿರ್ಧಾರವಾಗಿಲ್ಲ. ಅದನ್ನು ನಿಶ್ಚಯಿಸಲು ಅವನ ಬಳಿಕ ಆಳಿದ ಕೆಲ ರಾಜರ ಆಳಿಕೆಯ ಅವಧಿಯನ್ನು ಗೊತ್ತು ಮಾಡಿಕೊಳ್ಳುವುದು ಅವಶ್ಯವಿದೆ. ಪೊಳಲ್ಚೋರನ ಕಿರಿಯಮಗನಾದ ಇಱಿವ ನೊಳಂಬ ನೊಳಿಪಯ್ಯನು ಶಕ ೮೨೦ ನೆಯ ಪಿಂಗಳ ಸಂವತ್ಸರದಲ್ಲಿ (ಕ್ರಿ. ಶ. ೮೯೭–೮೯೮) ರಾಜನಾಗಿದ್ದುದರಿಂದಲೂ ಅವನ ಅಣ್ಣನಾದ ಮಹೇಂದ್ರನ ಶಕ ೮೧೭ರ ಶಾಸನವೇ ಇದುವರೆಗೆ ದೊರೆತಿರುವ ಕಡೆಯ ಶಾಸನವಾದುದರಿಂದಲೂ ಅವೆರಡು ವರ್ಷಗಳ ಮಧ್ಯದಲ್ಲಿ ಅಂದರೆ ಸು. ಕ್ರಿ. ಶ. ೮೯೬ ರಲ್ಲಿ ಮಹೇಂದ್ರನು ಮಡಿದಿರಬೇಕು. ಶಕ ೮೦೦ (ಕ್ರಿ. ಶ. ೮೭೮) ರ ಹಿಂದೆ ಮಹೇಂದ್ರನ ಶಾಸನಗಳಾವುವೂ ಸಿಕ್ಕಿಲ್ಲ. ಶಕ ಕಾಲವನ್ನು ಕೊಟ್ಟಿರುವ ಪೊಳಲ್ಚೋರನ ಶಾಸನವೆಂದರೆ ಶಕ ೭೭೫ (ಕ್ರಿ. ಶ. ೮೫೩) ರ ಹಿಂದುಪುರ ಶಿಲಾಲಿಪಿಯೊಂದೇ. ಆದುದರಿಂದ ಕ್ರಿ. ಶ. ೮೫೩–೮೭೮ ರ ನಡುವೆ ಪೊಳಲ್ಚೋರನು ಸತ್ತು ಮಹೇಂದ್ರನು ಪಟ್ಟಕ್ಕೆ ಬಂದಿರಬೇಕು. ನಿಯಾಮಕ ಅಂಶಗಳಿಲ್ಲದಿರುವುದರಿಂದ ಈ ೨೫ ವರ್ಷಗಳ ಅವಧಿಯಲ್ಲಿ ಮೊದಲಿನ ೧೨ ವರ್ಷಗಳನ್ನು ಪೊಳಲ್ಚೋರನಿಗೂ ಉಳಿದುದನ್ನು ಮಹೇಂದ್ರನಿಗೂ ಕೊಟ್ಟರೆ ಪೊಳಲ್ಚೋರನ ಕಡೆಯ ವರ್ಷವೂ ಮಹೇಂದ್ರನ ಮೊದಲನೆಯ ವರ್ಷವೂ ಕ್ರಿ. ಶ. ೮೬೫–೬೬ ಆಗುತ್ತದೆ. ಪೊಳಲ್ಚೋರನು ೧ನೆಯ ರಾಜಮಲ್ಲನ (ಕ್ರಿ. ಶ. ೮೧೭–೮೫೫) ಮಗಳನ್ನು ಮದುವೆಯಾಗಿದ್ದುದರಿಂದಲೂ ಅವನ ಮತ್ತು ಅವನ ಮಗನಾದ ನೀತಿಮಾರ್ಗ ಎಱೆಗಂಗನ (ಕ್ರಿ. ಶ. ೮೫೫–೮೬೯) ಸಾಮಂತನಾಗಿದ್ದುದರಿಂದಲೂ ಇವನು ಹೆಚ್ಚುಕಾಲ ಆಳಿರಬಹುದು. ರಾಷ್ಟ್ರಕೂಟರಿಂದ ಗಂಗರಾಜ್ಯವನ್ನು ಕಿತ್ತುಕೊಳ್ಳುವಾಗ (ಕ್ರಿ. ಶ. ೮೧೭)

ರಾಚಮಲ್ಲನು ಪ್ರಬಲನಾಗಿದ್ದ ನೊಳಂಬ ಪೊಳಲ್ಚೋರನಿಗೆ ಮಗಳನ್ನು ಕೊಟ್ಟು ಸಖ್ಯವನ್ನು ಬೆಳೆಯಿಸಿದನೆಂದು ಮೇಲೆ ಹೇಳಿದ್ದೇವೆ. ಪೊಳಲ್ಚೋರನ ತಂದೆ ಯಾವ ಚಾರುಪೊನ್ನೇರನ ಚಿಕ್ಕ ಮಧುರೆ ಶಾಸನಗಳು ರಾಷ್ಟ್ರಕೂಟ ೨ನೆಯ ಗೋವಿಂದನ ಕಾಲದಲ್ಲಿ (ಸು. ಕ್ರಿ. ಶ. ೭೭೩–೭೪) ಹುಟ್ಟಿದುವು. ಕ್ರಿ. ಶ. ೭೭೩–೭೪ ಇವನ ಆಳಿಕೆಯ ಕಡೆಯ ಇಲ್ಲವೆ ನಡುವಿನ ವರ್ಷವೆಂದು ಭಾವಿಸಿದರೆ ಪೊಳಲ್ಚೋರನಿಗೆ ಇತಿಹಾಸದಲ್ಲೆಲ್ಲಿಯೂ ಕಾಣದಷ್ಟು ದೀರ್ಘವಾದ ಆಳಿಕೆಯನ್ನು ಕೊಡುವ ಪ್ರಸಂಗವು ಬರುತ್ತದೆ. ಆದುದರಿಂದ ಕ್ರಿ. ಶ. ೭೭೩–೭೪ ಅವನ ಮೊದಲನೆಯ ವರ್ಷವೆಂದು ತಿಳಿಯುವುದೇ ಯುಕ್ತವು. ಇವನಿಗೆ ವಾಡಿಕೆಯಂತೆ ೨೫ ವರ್ಷಗಳ ಆಳಿಕೆಯನ್ನು ಕೊಟ್ಟರೆ ಸು. ಕ್ರಿ. ಶ. ೮೦೦ ಇವನ ಕಡೆಯ ವರ್ಷವಾಗುತ್ತದೆ. ಅಲ್ಲಿಂದಾಚೆಗೆ ಕ್ರಿ. ಶ. ೮೬೫ ರ ವರೆಗೆ ಪೊಳಲ್ಚೋರನಾಳಿರಬೇಕು. ಈ ವಿವೇಚನೆಯಿಂದ ಸಿಂಹಪೋತನ ಕಡೆಯ ವರ್ಷವು ಕ್ರಿ. ಶ. ೭೭೩–೭೪ ಎಂದು ಸಿದ್ಧವಾದಂತಾಯಿತು. ಇವನಿಗೆ ೨೫ ವರ್ಷಗಳ ಅವಧಿಯನ್ನು ಕೊಟ್ಟರೆ ಸು. ಕ್ರಿ. ಶ. ೭೫೦ ಅವನ ಮೊದಲನೆಯ ವರ್ಷವಾಗುತ್ತದೆ, ಒಮ್ಮೆಗೇ ದಂಗೆಯೆಬ್ಬಿಸಿದ್ದ ದುಗ್ಗಮಾರ ಎಱೆಯಪ್ಪನ ಮೇಲೆ ಇವನು ಪೆರ್ಮಾನಡಿಯ ಆಜ್ಞೆಯ ಮೇರೆಗೆ ದಂಡೆತ್ತಿ ಹೋದನೆಂದು ದೊಡ್ಡ ಉಳವತ್ತಿಯ ಶಾಸನದಿಂದ ತಿಳಿಯುತ್ತದೆ. ಸಿಂಹಪೋತನ ಕಾಲದಲ್ಲಿ ಪೆರ್ಮಾನಡಿಯೆಂಬ ಬಿರುದಿದ್ದ ಅರಸನು ಗಂಗ ಶ್ರೀಪುರುಷನು.[1]

---

[1] ರಾಯಿಸರು ಇಲ್ಲಿ ಉಕ್ತನಾದ ಪೆರ್ಮಾನಡಿಯು ೨ನೆಯ ಶಿವಮಾರನೆಂದೂ ಅವನು ಪಟ್ಟಕ್ಕೆ ಬಂದೊಡನೆಯೇ ತಮ್ಮನಾದ ದುಗ್ಗಮಾರನು ಸಿಂಹಾಸನಕ್ಕಾಗಿ ಅಣ್ಣನ ಮೇಲೆ ದಂಡೆತ್ತಿ ಬಂದನೆಂದೂ ಬರೆದಿದ್ದಾರೆ. (*Mysore and Coorg from Inscriptions*, p. 40 n.). ಆದರೆ ಕ್ರಿ. ಶ. ೭೫೫–೭೬ ರ ಮಧ್ಯದಲ್ಲಿದ್ದ ಸಿಂಹಪೋತನಿಗೆ ಸು. ಕ್ರಿ ಶ. ೭೯೦ ರಲ್ಲಿ ಪಟ್ಟಕ್ಕೆ ಬಂದ ಶಿವಮಾರನು ಪ್ರಭುವಾಗಿರುವುದು ಅಸಂಭವವು. ಈ ಶಾಸನದ 'ನವರಾಜ್ಯಂಗೆಯ್ಯೆ' ಎಂಬುದರ ಅರ್ಥವು ಸ್ಪಷ್ಟವಿಲ್ಲ. ಕ್ರಿ. ಶ. ೭೨೬ ರಲ್ಲಿ ಪಟ್ಟಕ್ಕೆ ಬಂದ ಶ್ರೀಪುರುಷನ ಮೇಲೆ, ೧–೨ ವರ್ಷಗಳ ಅವಧಿಯಲ್ಲಿ ಅವನ ಮಗನಾದ ದುಗ್ಗಮಾರ ಎಱೆಯಪ್ಪನು ದಂಗೆಯೆಬ್ಬಿಸಬೇಕಾದರೆ ಆಗ ಶ್ರೀಪುರುಷನು ಏನಿಲ್ಲೆಂದರೂ ೩೦ ವರ್ಷದವನಾದರೂ ಇರಬೇಕಾಗುತ್ತದೆ. ಅವನು ೬೨ ವರ್ಷಗಳ ಕಾಲ ಆಳಿರುವುದರಿಂದ ಸಾಯುವ ಕಾಲದಲ್ಲಿ ಅವನಿಗೆ ೯೦–೯೨ ವರ್ಷಗಳು ಆಗಿದ್ದವೆಂದು ತಿಳಿಯಬೇಕಾಗುತ್ತದೆ. ಇದರಂತೆ ದುಗ್ಗಮಾರನ ದಂಗೆಯ ಕಾಲದಲ್ಲಿ ಸಿಂಹಪೋತನು ನೊಳಂಬ ಪ್ರಾಂತವನ್ನಾಳುತ್ತಿದ್ದಿರಬೇಕಾದುದರಿಂದ ಆ ಕಾಲಕ್ಕಿಂತ ಅಂದರೆ ಕ್ರಿ ಶ ೭೨೭–೨೮ ಕ್ಕಿಂತ ಮುಂಚೆಯೇ ಅವನು ರಾಜನಾಗಿರಬೇಕು. ಆಗ ಅವನ ಮೊದಲನೆಯ ವರ್ಷವು ಸು. ೭೨೫–೨೬ ಎಂದು ತಿಳಿದರೆ ಇವನ ಮೊಮ್ಮಗಳನ್ನು ಶ್ರೀಪುರುಷನು ಯಾವಾಗ ಮದುವೆಯಾದನೋ ಹೇಳಲಿಕ್ಕಾಗದು.

ದುಗ್ಗಮಾರ ಎಱೆಯಪ್ಪನು ಶ್ರೀಪುರುಷನ ಮಗನಾಗಿರಬೇಕು. ಸಿಂಹಪೋತನ ಮಗಳಾದ ನೊಳಂಬ ಮಾದವೆಯ ಮಗಳು ಪೆರ್ಮಾನಡಿಯ ಅರಸಿಯೆಂದೂ ಈ ನೊಳಂಬ ಮಾದವೆಯು ಸುಮಾರು ಕ್ರಿ. ಶ. ೭೭೦ ರಲ್ಲಿ ಚಾರುಪೊನ್ನೇರನ ಕೈಕೆಳಗೆ ಮುದರಿಕಲ್ಲನ್ನು ಆಳುತ್ತಿದ್ದಳೆಂದೂ ರಾಷ್ಟ್ರಕೂಟ ೨ನೆಯ ಗೋವಿಂದನ ಚಿಕ್ಕಮಧುರೆಯ ಲಿಪಿಯಿಂದ ಗೊತ್ತಾಗುತ್ತದೆ. ಈಕೆಯ ಮಗಳನ್ನು ಮದುವೆಯಾದ ಪೆರ್ಮಾನಡಿಯು ಮೇಲಿನ ಶಾಸನದ ಕಾಲದಲ್ಲಿ ಗಂಗರಾಜ್ಯವನ್ನಾಳುತ್ತಿದ್ದ ಶ್ರೀಪುರುಷನೇ ಆಗಿರಬೇಕು.

ಸಿಂಹಪೋತನಿಗೆ ಕಲಿನೊಳಂಬದಿ ಅರಸ ( ಕಲಿನೊಳಂಬಾಧಿರಾಜ ) ಎಂಬ ಬಿರುದು ಇದ್ದಿತು. ಇವನಿಗೆ ಚಾರುಪೊನ್ನೇರ ಪಲ್ಲವಾಧಿರಾಜನೆಂಬ ಮಗನೂ ಮಹಾದೇವಿಯರಸಿ ನೊಳಂಬ ಮಾದವೆ ಎಂಬ ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಇವನ ಶಾಸನಗಳೆಲ್ಲ ದೊಡ್ಡ ಉಳವತ್ತಿಯಲ್ಲಿ ಸಿಕ್ಕಿವೆ. ಇವುಗಳಲ್ಲೆಲ್ಲಿಯೂ ಕಾಲನಿರ್ದೇಶವಿಲ್ಲ. ಒಂದರಲ್ಲಿ ಸಿಂಹಪೋತನು ಅಮರಾಲಯಕ್ಕೆ ಹೋದನೆಂಬ ಸುದ್ದಿಯು ಕೊಟ್ಟಿದೆ.

ಚಾರುಪೊನ್ನೇರನು ( ಕ್ರಿ. ಶ. ೭೭೪–೮೦೦) ರಾಷ್ಟ್ರಕೂಟ ೨ನೆಯ ಗೋವಿಂದರಾಜನ ಮಾಂಡಲಿಕನಾಗಿ ನೊಳಂಬಳಿಗೆ–೧೦೦೦, ನಿಗ್ಗುಂದ-ನಾಡು–೩೦೦, ಇರಿಗಲ್ವಾಡಿ–೩೦೦, ಗಂಗವೂರು–೩೦, ಸೆಲ್ಲಗುಂಡಿ–೧೨ ನಾಡುಗಳನ್ನು ಆಳುತ್ತಿದ್ದನೆಂದು ಚಿಕ್ಕ ಮಧುರೆ ಶಾಸನದಿಂದ ತಿಳಿಯುತ್ತದೆ. ಶ್ರೀಪುರುಷನ ಕಾಲದಲ್ಲಿ ೧ನೆಯ ಕೃಷ್ಣನು ಕ್ರಿ. ಶ. ೭೬೮ ರಲ್ಲಿ ಮಣ್ಣೆಯ ಮೇಲೆ ಸೈನ್ಯದೊಂದಿಗೆ ಬಂದಿದ್ದುದು ಗೊತ್ತಿದೆ. ಆಗ ಅವನು ಮಣ್ಣೆಯ ಉತ್ತರಕ್ಕಿದ್ದ ಗಂಗರಾಜ್ಯವನ್ನೆಲ್ಲ ಆಕ್ರಮಿಸಿಕೊಂಡು ನೊಳಂಬರನ್ನು ತನ್ನ ಸಾಮಂತರನ್ನಾಗಿ ಮಾಡಿಕೊಂಡಿರಬೇಕು. ಆದುದರಿಂದಲೇ ಚಿಕ್ಕ ಮಧುರೆ ಶಾಸನದಲ್ಲಿ ಉಕ್ತವಾದ ನಾಡುಗಳೆಲ್ಲ ರಾಷ್ಟ್ರಕೂಟರ ವಶದಲ್ಲಿದ್ದುದು ಸಮಂಜಸವಾಗುತ್ತದೆ. ನೊಳಂಬಳಿಗೆ ಸಾವಿರವು ತುಮಕೂರು ಚಿತ್ರದುರ್ಗ ಅನಂತಪುರ ಜಿಲ್ಲೆಗಳ ಭಾಗಗಳನ್ನು ಒಳಕೊಂಡಿತ್ತು. ಇದಕ್ಕೆ ಹೊಂದಿ ಆಗ್ನೇಯ ದಿಕ್ಕಿನಲ್ಲಿ ಇರಿಗಲ್ವಾಡಿ–೩೦೦ ಇತ್ತೆಂದು ಮಧುಗಿರಿ ತಾಲೂಕಿನ ಶ್ರವಣಗುಡಿ ಶಾಸನಗಳಿಂದ ಊಹಿಸಬಹುದು. ಹಾಸನ ಜಿಲ್ಲೆಯ ಚನ್ನರಾಯ ಪಟ್ಟಣ ತಾಲೂಕಿನಲ್ಲಿ ದೊರೆತ ಶ್ರೀಪುರುಷನ ಒಂದು ಶಿಲಾಶಾಸನದಲ್ಲಿ ನಿಗ್ಗುಂದ ಅರಸನು ನಿಗ್ಗುಂದನಾಡು–೩೦೦ ನ್ನು ಆಳುತ್ತಿದ್ದನೆಂದು ಹೇಳಿದೆ. ದೇವರಹಳ್ಳಿ ತಾಮ್ರಶಾಸನದಿಂದ ಪೊನ್ನಳ್ಳಿ ಎಂಬ ಗ್ರಾಮವು ನಿಗ್ಗುಂದ ನಾಡಿನಲ್ಲಿತ್ತೆಂದು ಗೊತ್ತಾಗುತ್ತದೆ. ಈ ಪೊನ್ನಳ್ಳಿಯು ತಿಪಟೂರಿನ ಉತ್ತ



(Plate 15) ಶ್ರವಣಬೆಳ್ಗೊಳದ ಚಾವುಂಡರಾಯ ಬಸ್ತಿ

ರಕ್ಕಿದ್ದ ಹೊನ್ನವಳ್ಳಿಯು. ಇದರಿಂದ ಸಿಗ್ಗುಗಂದನಾಡು ಇರಿಗಲ್ವಾಡಿಯ ನೈಋತ್ಯದಲ್ಲಿ ತಿಪಟೂರು ಚನ್ನರಾಯಪಟ್ಟಣ ತಾಲೂಕುಗಳನ್ನು ಒಳಕೊಂಡಿತ್ತೆಂದು ಹೇಳಬಹುದು. ಬೈರೆಕೊಪ್ಪದ ವೀರಗಲ್ಲಿನಲ್ಲಿ ಅಳ್ಳವ್ಮ ಗಾವುಂಡರ ಮಗನು ಗಂಗವುರದ ತುರುಗೊಳ್ಳಿನಲ್ಲಿ ಮಡಿದನೆಂದು ಬರೆದಿರುವುದರಿಂದ ಗಂಗವುರ–೩೦ ಶಿವಮೊಗ್ಗೆಯ ಸಮೀಪದಲ್ಲಿದ್ದಿರಬೇಕು. ಈ ನಾಡುಗಳ ಸ್ಥಾನ ನಿರ್ಧಾರದಿಂದ ಕೃಷ್ಣನು ಗಂಗರಾಜ್ಯದ ಎಷ್ಟು ದೊಡ್ಡ ಭಾಗವನ್ನು ತೆಗೆದುಕೊಂಡಿದ್ದನೆಂಬುದು ಸ್ಪಷ್ಟವಾಗುತ್ತದೆ. ಆದರೆ ಕಳೆದುಹೋಗಿದ್ದ ರಾಜ್ಯವನ್ನು ಶ್ರೀಪುರುಷನು ಬೇಗನೆ ರಾಷ್ಟ್ರಕೂಟರಿಂದ ಕಿತ್ತುಕೊಂಡನೆಂಬುದಕ್ಕೆ ಆಧಾರಗಳುಂಟು. ಶಕ ೭೧೦ (ಕ್ರಿ. ಶ. ೭೮೮) ರಲ್ಲಿ ಶ್ರೀಪುರುಷನು ರಾಜ್ಯ-ಭಾರ ಮಾಡುತ್ತಿದ್ದನೆಂದು ಸೀರಾ ತಾಲೂಕಿನ ಹಲ್ಕೂರ ಶಿಲಾಶಾಸನದಲ್ಲಿ ಬರೆದಿರುವುದರಿಂದ ಈ ಶಾಸನವಿದ್ದ ಭಾಗವು ಕ್ರಿ. ಶ. ೭೮೮ಕ್ಕೆ ಮೊದಲೇ ಶ್ರೀಪುರುಷನ ವಶಕ್ಕೆ ಬಂದಿರಬೇಕು. ಹಲ್ಕೂರು ನೊಳಂಬಳಿಗೆ ಸಾಯಿರದಲ್ಲಿ ಮುಖ್ಯ ಪಟ್ಟಣವಾಗಿದ್ದ ಹೇಮಾವತಿಯಿಂದ ದಕ್ಷಿಣಕ್ಕೆ ಸುಮಾರು ೨೫ ಮೈಲುಗಳೊಳಗೆ ಇರುವುದರಿಂದ ಅದು ನೊಳಂಬಳಿಗೆಯಲ್ಲಿ ಸೇರಿರಬೇಕು. ಇರಿಗಲ್ವಾಡಿಯನ್ನು ಸ್ವಾಧೀನಪಡಿಸಿಕೊಳ್ಳದೆ ನೊಳಂಬಳಿಗೆಯನ್ನು ತೆಗೆದುಕೊಳ್ಳುವುದು ಸಾಧ್ಯವಿಲ್ಲದುದರಿಂದ ಶ್ರೀಪುರುಷನು ತನ್ನ ಕೈಬಿಟ್ಟುಹೋಗಿದ್ದ ಎಲ್ಲ ಭಾಗವನ್ನೂ ಕ್ರಿ. ಶ. ೭೮೮ ರೊಳಗಾಗಿ ಪುನಃ ಕಿತ್ತುಕೊಂಡಿರಬೇಕು. ಈ ಸಮಯದಲ್ಲಿ ನೊಳಂಬ ಅರಸನಾದ ಪಲ್ಲವಾಧಿರಾಜ ಚಾರುಪೊನ್ನೇರನು ತಿರುಗಿ ಗಂಗರ ಕೈಕೆಳಗೆ ಬಂದಿರಬೇಕು. ಇಲ್ಲಿಂದಾಚೆಗೆ ಕಡೆಯವರೆಗೆ ಅಂದರೆ ಕ್ರಿ. ಶ. ೯೭೨ರ ವರೆಗೆ ನೊಳಂಬರು ಗಂಗರ ಸಾಮಂತರಾಗಿಯೇ ಉಳಿದರು.

ಚಾರುಪೊನ್ನೇರನಿಗೆ ಪಲ್ಲವಾಧಿರಾಜ ಎಂಬ ಬಿರುದು ಇತ್ತು. ಇವನ ಹೆಂಡತಿಯ ಹೆಸರು ಗವಗಣಬ್ಬೆ. ಈಕೆಯು ಮುದರಿಕಲ್ಲನ್ನಾಳುತ್ತಿದ್ದಳೆಂದು ಚಿಕ್ಕಮಧುರೆಯ ಒಂದು ಶಾಸನದಿಂದ ಗೊತ್ತಾಗುತ್ತದೆ. ಇನ್ನೊಂದು ಶಾಸನದಲ್ಲಿ ಈಕೆಯ ಮಗನಾದ ಪಲ್ಲವಮಲ್ಲನು ಮುದರಿಕಲ್ಲು, ತೊಂಡೂರು, ಮುಳ್ಬರ್–೧೨, ಅಮ್ಮವಳ್ಳಿ–೧೨, ಕೊಟೂರು–೧೨, ಗಂಗವೂರ–೩೦ ಗಳನ್ನು ತನ್ನ ತಂದೆಯ ಕೈಕೆಳಗೆ ಆಳುತ್ತಿದ್ದಾಗ ಈಕೆಯು ಮುದರಿಕಲ್ಲಿನಲ್ಲಿ ಗವಗಣೇಶ್ವರವೆಂಬ ಶಿವಾಲಯವನ್ನು ಕಟ್ಟಿಸಿದಳೆಂದು ಹೇಳಿದೆ.

ಚಾರುಪೊನ್ನೇರನ ತರುವಾಯ ಅವನ ಮಗನಾದ ಪೊಳಲ್ಚೋರನು ಪಟ್ಟಕ್ಕೆ ಬಂದನು. ಇವನಿಗೆ ನೊಳಂಬಾಧಿರಾಜ ಎಂಬ ಬಿರುದು ಇದ್ದಿತೇ ಹೊರತು ಪಲ್ಲವಮಲ್ಲನೆಂಬ ಹೆಸರು ಇದ್ದುದು ತಿಳಿದಿಲ್ಲವಾದುದರಿಂದ ಇವನು ಪಲ್ಲವ-

ಮಲ್ಲನಿಂದ ಭಿನ್ನನಾಗಿರಬೇಕು. ಪಲ್ಲವಮಲ್ಲನ ಗತಿಯೇನಾಯಿತೆಂಬುದು ಗೊತ್ತಿಲ್ಲ.

ಪೊಳಲ್ಚೋರನು ಸು. ಕ್ರಿ. ಶ. ೮೦೦ ರಲ್ಲಿ ರಾಜನಾದನು. ಇವನು ೧ನೆಯ ರಾಚಮಲ್ಲನ ಸಾಮಂತನಾಗಿ ಆಳುತ್ತಿದ್ದನೆಂದು ಶಿವಮೊಗ್ಗೆ ತಾಲೂಕಿನ ಆಲ್ಬೂರು ಶಾಸನದಿಂದ ಗೊತ್ತಾಗುತ್ತದೆ.[1] ಈ ಗಂಗರಾಜನು ತನ್ನ ಮಗಳಾದ ಜಾಯಬ್ಬೆಯನ್ನು ಪೊಳಲ್ಚೋರನಿಗೆ ಕೊಟ್ಟು ಸಖ್ಯವನ್ನು ಬೆಳೆಯಿಸಿದ್ದನೆಂದು ಹೇಳಿದ್ದೇವೆ. ಇವನು ನೀತಿಮಾರ್ಗನ ಕೈಕೆಳಗೆ ಗಂಗಱುಸಾಸಿರವನ್ನಾಳುತ್ತಿದ್ದನು.[2] ಶಕ ೭೭೫ (ಕ್ರಿ. ಶ. ೮೫೩) ರ ಹಿಂದೂಪುರ ಶಾಸನದಲ್ಲಿ ಪೊಳಲ್ಚೋರನು ಕಂಚಿಯವರೆಗಿದ್ದ ರಾಜ್ಯವನ್ನಾಳುತ್ತಿದ್ದನೆಂದು ಬರೆದಿರುವುದರಿಂದ ಈ ಕಾಲಕ್ಕೆ ಮೊದಲೇ ಇವನು ತನ್ನ ರಾಜ್ಯವನ್ನು ವಿಸ್ತರಿಸಿರಬೇಕು. ೧ನೆಯ ರಾಚಮಲ್ಲನು ಕಂಚಿಯ ಮೇಲೆ ದಂಡೆತ್ತಿಹೋಗಿದ್ದನೆಂದು ಬೂದೀಕೋಟೆಯ ಲಿಪಿಯಲ್ಲಿ ಹೇಳಿದೆ. ಈ ಪ್ರಸಂಗದಲ್ಲಿ ಪೊಳಲ್ಚೋರನು ತನ್ನ ಪ್ರಭುವಿನ ಸಹಾಯಕ್ಕೆ ಹೋಗಿರಬೇಕು. ಮಾರ್ಗದಲ್ಲಿದ್ದ ಬಾಣರ ಮೇಲೆ ಪೊಂಪಲ್ಲನನ್ನು ಕಳುಹಿಸಿ ಬಾಣವಿದ್ಯಾಧರನನ್ನು (ಕ್ರಿ. ಶ. ೮೧೦–೮೫೯) ಸೋಲಿಸಿ ಪುಲಿನಾಡನ್ನು ವಶಪಡಿಸಿಕೊಂಡನು. ಇಲ್ಲಿಂದಾಚೆಗೆ ಬಾಣರಿಗೂ ನೊಳಂಬರಿಗೂ ಮೇಲೆ ಮೇಲೆ ಕಲಹಗಳು ನಡೆದು ಕಡೆಗೆ ಮಹೇಂದ್ರನು ಬಾಣಕುಲ ವಿಧ್ವಂಸನವನ್ನು ಮಾಡಿದನು.

ಪೊಳಲ್ಚೋರನಿಗೆ ಪೊಳಲ್ಚೋರ-ನೊಂಬ ಎಂಬ ಹೆಸರಿತ್ತೆಂದು ಬರಗೂರು ಹೇಮಾವತೀ ಲಿಪಿಗಳಿಂದ ಗೊತ್ತಾಗುತ್ತದೆ. ಇವನಿಗೆ ನೊಳಂಬಾಧಿರಾಜ ಎಂದು ಬಿರುದು ಇತ್ತು. ಪ್ರಾಯಿಕವಾಗಿ ಈ ಮನೆತನದ ಅರಸರೆಲ್ಲರಿಗೂ ಈ ಹೆಸರಿತ್ತೆಂದು ಲಿಪಿಗಳಿಂದ ಗೊತ್ತಿರುವುದರಿಂದ ಇದನ್ನು ವಿಶಿಷ್ಟ ಬಿರುದೆಂದು ಭಾವಿಸಿ ಪೊಳಲ್ಚೋರನಾಗಲಿ ಮಹೇಂದ್ರನಾಗಲಿ ಇದರಿಂದ ಸೂಚಿಸಲ್ಪಡುತ್ತಾನೆಂದು ತಿಳಿಯುವುದು[3] ತಪ್ಪು. ಪೊಳಲ್ಚೋರನಿಗೆ ಜಾಯಬ್ಬೆಯಲ್ಲದೆ ಕದಂಬ ಮನೆತನದ ದೀವಲಾಂಬೆಯೆಂಬ ಇನ್ನೊಬ್ಬ ಹೆಂಡತಿಯಿದ್ದಳು. ಇವನಿಗೆ ಜಾಯ

---

[1] *Ep. Carn.* Vol. VII, Tiptur, 47.

[2] ಮುಡಿವಾಳ ಶಾಸನ.

[3] *Madras Epigraphical Report* 1913; *Ep. Ind.* Vol. X, p. 59; Rice, *Mysore & Coorg from Inscriptions*, p. 55.

ಬ್ಬೆಯ ಹೊಟ್ಟೆಯಲ್ಲಿ ಮಹೇಂದ್ರನೂ ದೀವಬ್ಬರಸಿಯ ಹೊಟ್ಟೆಯಲ್ಲಿ ನೊಳಂಬಾಧಿರಾಜ ನೊಳಿಪಯ್ಯ ಇಜೀವನೊಳಂಬನೂ ಹುಟ್ಟಿದರು.

ಪೊಳಲ್ಚೋರನ ತರುವಾಯ ಅವನ ಮಗನಾದ ಮಹೇಂದ್ರಾಧಿರಾಜನು ಪಟ್ಟಕ್ಕೆ ಬಂದನು. ಬರಗೂರು ಮತ್ತು ಹೇಮಾವತೀ ಶಾಸನಗಳು ಇವನು ಚೋಳಿಅಂ ಮೊದಲಾದ ಅಶೇಷದಾಯಿಗರನ್ನು ನಿರ್ಮೂಲ ನಾಶಮಾಡಿ ಬರಗೂರಲ್ಲಿ ಬೀಡುಬಿಟ್ಟಿದ್ದನೆಂದು ಹೇಳುತ್ತವೆ. ಇದರಿಂದ ಚೋಳಿಅನು ನೊಳಂಬ ಕುಲಕ್ಕೆ ಸೇರಿದವನೆಂದೂ ಅವನು ಮಹೇಂದ್ರನ ಪಟ್ಟಬಂಧಕ್ಕೆ ಆತಂಕವನ್ನುಂಟು ಮಾಡಿದ್ದನೆಂದೂ ತಿಳಿಯಬಹುದು. ಮಧುಗಿರಿ ತಾಲೂಕಿನ ಒಂದು ಲಿಪಿಯಲ್ಲಿ ಚಲದಂಕಕಾಜಚೋಳಿಗನು ಪಲ್ಲವಕುಲತಿಲಕನೆಂದು ಹೇಳಿರುವುದರಿಂದ[1] ಇವನೇ ಮಹೇಂದ್ರನ ದಾಯಿಗನಾಗಿದ್ದಿರಬಹುದು. ಕೋಲಾರ ಜಿಲ್ಲೆಯ ಗೋರೀಬಿದನೂರು ತಾಲೂಕಿನ ಕೆಲವು ಶಾಸನಗಳಲ್ಲಿ[2] ಚೋಳಿಮಹಾರಾಜನೆಂಬ ಒಬ್ಬ ಅರಸನು ಉಕ್ತನಾಗಿದ್ದಾನೆ. ಅವುಗಳಲ್ಲಿ ಒಂದು ಶಾಸನದಿಂದ ಚೋಳಿ ಮಹಾರಾಜನ ಆಳು ಮಹೇಂದ್ರನೊಡನೆ ಕಾದಿದನೆಂದು ಊಹಿಸಬಹುದು. ಈ ಜಗಳವು ಮಹೇಂದ್ರನಿಗೂ ಅವನ ದಾಯಿಗನಾದ ಚೋಳಿಅನಿಗೂ ನಡೆದ ಯುದ್ಧವನ್ನು ಸೂಚಿಸಬಹುದು. ಕಡಪಾ ಜಿಲ್ಲೆಯ ತೆಲಗು ಚೋಳರ (ಕ್ರಿ. ಶ. ೮ನೆಯ ಶತಮಾನ) ಒಂದು ಶಾಖೆಯು ಹೇಮಾವತೀ ಸಿಡುಗಲ್ಲುಗಳ ಸಮೀಪದಲ್ಲಿ ಆಳುತ್ತಿದ್ದರೆಂದೂ ಈ ಚೋಳಿಅನು ಆ ಮನೆತನದವನಿದ್ದಿರಬಹುದೆಂದೂ ಕೃಷ್ಣಶಾಸ್ತ್ರಿಗಳು ಹೇಳಿದ್ದಾರೆ.[3] ಚಾರುಪೊನ್ನೇರನ ಕಾಲದಲ್ಲಿ ಒಬ್ಬ ಚೋಳಿಮಹಾರಾಜನಿದ್ದುದು ಮಧುಗಿರಿ ತಾಲೂಕಿನ ಶ್ರಾವಂಡನಪಳ್ಳಿ ಶಾಸನದಿಂದ ಗೊತ್ತಾಗುತ್ತದೆ.[4] ಇದರಿಂದ ಈ ದಾಯಿಗ ಚೋಳರು ಮೊದಲಿನಿಂದಲೂ ನೊಳಂಬವಾಡಿಯ ಒಂದು ಭಾಗದಲ್ಲಿದ್ದರೆಂಬುದು ಸ್ಪಷ್ಟವಾಗುತ್ತದೆ.

ಪೊಳಲ್ಚೋರನ ಕಾಲದಲ್ಲಿ ಬಾಣರೊಡನೆ ನಡೆದಿದ್ದ ಕಲಹವು ಬರಬರುತ್ತ ಹೆಚ್ಚುತ್ತಹೋಯಿತು. ನೊಳಂಬರ ವಶಕ್ಕೆ ಬಂದಿದ್ದ ಪುಲಿನಾಡನ್ನು ಬಾಣರು ಪ್ರಭುಮೇರುಪನ ಕಾಲದಲ್ಲಿ ಪುನಃ ತೆಗೆದುಕೊಂಡರು. ಈ ಸಂದರ್ಭದಲ್ಲಿ

---

[1] *Ep. Carn.* Vol. XII, Mi. No. 102.

[2] *Ibid.* Vol. X, Gōrībidanūr Nos. 72, 73, 75 etc.

[3] *Ep. Ind.* Vol. X, p. 60.

[4] *M. A. R.* 1918, p. 43.

ಅವರು ಗಂಗಜುಸಾಸಿರವನ್ನು ಆಕ್ರಮಿಸಿದಂತೆ ತೋರುತ್ತದೆ. ಆದರೆ ಮಹೇಂದ್ರನು ಕಳೆದುಹೋಗಿದ್ದ ಗಂಗಜುಸಾಸಿರವನ್ನು ಸ್ವಾಧೀನಪಡಿಸಿ ಕೊಂಡು ಪುನಃ ಪುಲಿನಾಡನ್ನು ಮುತ್ತಲಿಕ್ಕೆ ತನ್ನ ಸೈನ್ಯಾಧಿಕಾರಿಗಳಾದ ಕಾಡುಪಟ್ಟಿ ಮದುವರನ್ನು ಕಳುಹಿಸಿದನು. ಅವರು ಪುಲಿನಾಡಿನಲ್ಲಿದ್ದ ಪೆರ್ಮಾ ಡಿಯನ್ನು ಸುಟ್ಟುದನ್ನು ಕೇಳಿ ಪ್ರಭುಮೇರು ವಿಜಯಾದಿತ್ಯನು ಅವರನ್ನು ಹೊಡೆ ದೋಡಿಸಿದನು.

೧ನೆಯ ಪೃಥ್ವೀಪತಿಯ ಮಗನಾದ ನನ್ನಿಯ ಗಂಗನು ಕೊಂಗುಣಿಪಟ್ಟದ ಮೇಲಿದ್ದ ತನ್ನ ಹಕ್ಕನ್ನು ಸ್ಥಾಪಿಸಲಿಕ್ಕೆ ಮೈದುನನಾದ ಪ್ರಭುಮೇರುವಿನ ಸಹಾಯದಿಂದ ಗಂಗರಾಜನಾಗಿದ್ದ ೨ನೆಯ ರಾಚಮಲ್ಲನನ್ನು ಸೋಲಿಸಿ ತಳ- ಕಾಡನ್ನು ಆಕ್ರಮಿಸಿಕೊಂಡನು.[1] ಆದರೆ ವೀರಾಗ್ರಣಿಯಾದ ಮಹೇಂದ್ರನು ತನ್ನ ಪ್ರಭುವಿಗಾದ ಅಪಮಾನವನ್ನು ಸಹಿಸಲಾರದೆ ಸೈನ್ಯದೊಂದಿಗೆ ಸೋರೆ ಮಟಿಯಲ್ಲಿ ನನ್ನಿಯ ಗಂಗನನ್ನೂ ಬಾಣರನ್ನೂ ಎದುರಿಸಿ ಅವರನ್ನು ಹಿಂದಕ್ಕಟ್ಟಿ ಕೈಬಿಟ್ಟು ಹೋಗಿದ್ದ ತಳಕಾಡನ್ನು ತೆಗೆದುಕೊಂಡು ರಾಚಮಲ್ಲನ ಸಿಂಹಾಸನ ವನ್ನು ನಿಷ್ಕಂಟಕವಾಗಿ ಮಾಡಿದನು. ಇವನು ತನ್ನ ರಾಜ್ಯದ ಆಗ್ನೇಯ ದಿಕ್ಕಿ ನಲ್ಲಿ ಆಗಿಂದಾಗ ತೊಂದರೆಕೊಡುತ್ತಿದ್ದ ಬಾಣರನ್ನು ತಲೆಯೆತ್ತದಂತೆ ಮಾಡಿ ಮಹಾಬಲಿಕುಲ ವಿಧ್ವಂಸಕನೆಂದು ಪ್ರಸಿದ್ಧನಾದನು. ಕ್ರಿ. ಶ. ೮೯೩ ರ ಧರ್ಮಪುರೀ ಶಾಸನದಲ್ಲಿ ಮಹೇಂದ್ರನು ಮಹಾಬಲಿಕುಲ ವಿಧ್ವಂಸನಂಗೆಯ್ದು ರಾಜ್ಯಂಗೆಯ್ಯುತ್ತಿದ್ದನೆಂದು ಬರೆದಿರುವುದರಿಂದ ಈ ವಿಧ್ವಂಸನವು ಆಗ ತೀರ ಹೊಸದಾದ ಸಂಗತಿಯಾಗಿರಬೇಕು. ಹೀಗೆ ಪ್ರತಿಕಕ್ಷಿಗಳನ್ನೆಲ್ಲ ಜಯಿಸಿದ ಮೇಲೆ ಸ್ವತಂತ್ರನಾಗಬೇಕೆಂದು ಬಗೆದು ತನ್ನ ಪ್ರಭುವಾದ ಗಂಗರಾಜನನ್ನು ಲೆಕ್ಕಿಸದೆ ಹೋದನು. ಸಾವಿಮಾಯೂರು, ಹಿರಿಯೂರು, ಸೂಟೂರು ಯುದ್ಧ ಗಳಲ್ಲಿ, ೨ನೆಯ ರಾಚಮಲ್ಲನ ತಮ್ಮನಾದ ಬೂತುಗನು ಸೊಕ್ಕಿದ್ದ ಈ ನೊಳಂಬ ನನ್ನು ಸೋಲಿಸಿದನೆಂದು ಕೆರೆಗೋಡು ರಂಗಾಪುರಂ ಮೊದಲಾದ ಶಾಸನಗಳಲ್ಲಿ ಉಕ್ತವಾಗಿದೆ. ಈ ಜಗಳವು ೨ನೆಯ ಎಱೆಯಪ್ಪನ ಕಾಲದ ವರೆಗೂ ನಡೆದು ಕಡೆಗೆ ಅವನು ಘೋರವಾದ ಸಂಗ್ರಾಮದಲ್ಲಿ ಮಹೇಂದ್ರನನ್ನು ಕೊಂದು, ನೊಳಂಬವಾಡಿಯ ಮುಖ್ಯ ದುರ್ಗಗಳಾಗಿದ್ದ ಸೂಟೂರು, ನಾಡುಗಾಣಿ, ಮಿಡಿಗೆ, ಸೂಳಿಶೈಲೇಂದ್ರ, ತಿಪ್ಪೇರು, ಪೆಂಜೆಱು ಮೊದಲಾದ ಅಭೇದ್ಯವಾದ

---

[1] ಗಂಗ ಪ್ರಕರಣದಲ್ಲಿ ೧೭೫ನೆಯ ಪುಟವನ್ನು ನೋಡಿರಿ.

ದುರ್ಗಗಳನ್ನು ವಶಪಡಿಸಿಕೊಂಡನು.[1] ಶಕ ೮೨೦ ನೆಯ ಪೈಂಗಳ ಸಂವತ್ಸರದಲ್ಲಿ ನೊಳಿಪಯ್ಯನು ರಾಜ್ಯವಾಳುತ್ತಿದ್ದುದರಿಂದ ಮಹೇಂದ್ರನು ಅದಕ್ಕೆ ಮೊದಲೇ ಹತನಾಗಿರಬೇಕು. ಇವನ ಕ್ರಿ. ಶ. ೮೯೫ ರ ಒಂದು ಶಾಸನವು ದೊರೆತಿರುವುದರಿಂದ ಅವನ ಕೊಲೆಯು ಅವೆರಡು ವರ್ಷಗಳ ನಡುವೆ ಅಂದರೆ ಸು. ಕ್ರಿ. ಶ. ೮೯೬ ರಲ್ಲಿ ಜರುಗಿರಬೇಕು.

ಮಹೇಂದ್ರನಿಗೆ ಅನೇಕ ಜನ ಹೆಂಡಂದಿರಿದ್ದರು. ಗಂಗಮನೆತನದ ಗಾಮಬ್ಬೆಯೇ ಇವನ ಅಗ್ರಮಹಿಷಿ.[2] ಇವಳ ಹೊಟ್ಟೆಯಲ್ಲಿ ಅಯ್ಯಪದೇವನೆಂಬ ಮಗನು ಹುಟ್ಟಿದನು. ಸೀರಾದ ಒಂದು ಶಾಸನದಿಂದ ನೊಳಂಬಾಧಿರಾಜನಿಗೆ ಬಿಜಆಮಹಾದೇವಿ, ಪರಮಮಹಾದೇವಿ, ಅಕ್ಕಬ್ಬೆ, ದಾಮಬ್ಬೆ ಎಂದು ನಾಲ್ವರು ರಾಣಿಯರಿದ್ದರೆಂದು ಗೊತ್ತಾಗುತ್ತದೆ.[3] ಅವರಲ್ಲಿ ಬಿಜಆ-ಮಹಾದೇವಿಯು ಪೊಳಲಿನಾಡಲ್ಲಿದ್ದ ಒಲೆಯೂರು ಬರಗೂರುಗಳನ್ನು ಅಕ್ಕಬ್ಬೆಯು ಸಿಯುಪೂರನ್ನೂ ಪರಮಮಹಾದೇವಿಯು ಧರ್ಮಪೊಳಲನ್ನೂ ದಾಮಬ್ಬೆಯು ತ್ರೈಲೋಕ್ಯಪೊಳಲನ್ನೂ ನೊಳಂಬಾಧಿರಾಜನ ಅನುಮತಿಯಿಂದ ಆಳುತ್ತಿದ್ದರೆಂದು ಅಲ್ಲಿಯೇ ಹೇಳಿದೆ. ಈ ನೊಳಂಬಾಧಿರಾಜನು ರಾಯಿಸರು ಹೇಳುವಂತೆ ಮಹೇಂದ್ರನಾಗಿದ್ದಿರಬಹುದು.

ಮಹೇಂದ್ರನಿಗೆ ಅಹಿತರಜವ, ಅಮೋಘವಾಕ್ಯ ನೊಳಂಬನಾರಾಯಣ, ಎಂದು ಬಿರುದುಗಳಿದ್ದುವು. ಇವನು ಪರಮಮಾಹೇಶ್ವರನಾಗಿದ್ದನು. ಮಹಾದೇವರಿಗೆ ತನ್ನ ಅರಮನೆಯನ್ನು ನಿವೇದಿಸಿ ಅಲ್ಲಿ ಮಹೇಂದ್ರೇಶ್ವರ ದೇವಾಲಯವನ್ನು ಕಟ್ಟಿಸಿ ದೇವಾರ್ಚನೆ ಸತ್ರವೃತ್ತಿ ಜೀರ್ಣೋದ್ಧಾರಗಳಿಗಾಗಿ ಸೀರಾನಾಡೊಳಗಿನ ನಂದೂರನ್ನು ದಾನಮಾಡಿದನೆಂದು ಶಕ ೮೦೦ ( ಕ್ರಿ. ಶ. ೮೭೮ ) ರ ಸೀರಾ ತಾಲೂಕಿನ ಒಂದು ಲಿಪಿಯಲ್ಲಿ ಹೇಳಿದೆ. ದೀವಬ್ಬರಸಿಯು ನೊಳಿಪಯ್ಯನ ಕಾಲದಲ್ಲಿ, ಮಹೇಂದ್ರನ ಪರೋಕ್ಷಾರ್ಥವಾಗಿ ಆವನ್ಯದ ( ಆವನಿಯ ) ಲ್ಲಿ ನೊಳಂಬನಾರಾಯಣೇಶ್ವರ ದೇವಾಲಯವನ್ನೂ ಮಹೇಂದ್ರಕೋಳವನ್ನೂ ಪೊಟಿಲ್ಪೋರ ಮಂಗಲದಲ್ಲಿ ದೀವಬ್ಬೆ ಸಮುದ್ರವನ್ನೂ ಕಟ್ಟಿಸಿ ಅಲ್ಲಿ ವಿಷ್ಣುಗೃಹವನ್ನು ಮಾಡಿಸಿದಳೆಂದು ಆವನಿ ಶಾಸನದಿಂದ[4] ತಿಳಿಯುತ್ತದೆ.

1 ಕೂಡಲೂರು ತಾಮ್ರಶಾಸನ.

2 ಧರ್ಮಪುರಿ ಶಾಸನಗಳು, *M. E. R.* 1911, p. 65.

3 *Ep. Carn.* Vol. XII, Sira 24.

4 *Ep. Carn*, Mulbagal No. 38.

## ಇವನ ಮಹತ್ವದ ಶಾಸನಗಳು:—

೧. ಧರ್ಮಪುರೀ ಶಿಲಾಶಾಸನ:—[1] ನಿಧಿಯಣ್ಣ ಚಂದಿಯಣ್ಣರೆಂಬ ಇಬ್ಬರು ಸೆಟ್ಟಿಯರು ತಗಡೂರಲ್ಲಿ ಶಕ ೮೧೫ ನೆಯ ಪರಿಧಾವಿ ಸಂವತ್ಸರದ ಆಷಾಢ ಶುಕ್ಲ ಪಂಚಮೀ ಬೃಹಸ್ಪತಿವಾರದಂದು ಬಸದಿಯನ್ನು ಮಾಡಿಸಿ ಅದಕ್ಕೆ ದೇವಾರ್ಚನೆ ಜೀರ್ಣೋದ್ಧಾರಗಳಿಗಾಗಿ ನೊಳಂಬಮಹೇಂದ್ರನಿಂದ ಮೂಲಪಳ್ಳಿಯನ್ನು ಪಡೆದು ಅದನ್ನು ಮೂಲಸಂಘಸೇನಾನ್ವಯಾಗ್ರಗಣ್ಯ ಪೊಗರಿಯ ಗಣದ ವಿನಯಸೇನಸಿದ್ಧಾಂತದ ಭಟಾರರ ಶಿಷ್ಯರಾದ ಕನಕಸೇನ ಸಿದ್ಧಾಂತದ ಭಟಾರರಿಗೆ ಧಾರೆಯೆರೆದು ಕೊಟ್ಟರು. ಇಲ್ಲಿ ಕೊಟ್ಟಕಾಲವು ಗಣಿತಕ್ಕೆ ಸರಿಯಾಗಿಲ್ಲವೆಂದು ಜಾಕೋಬಿಯವರು ಹೇಳಿದ್ದಾರೆ. ಪರಿಧಾವಿ ಸಂವತ್ಸರವು ಕ್ರಿ. ಶ. ೮೯೨ ಆಗಿತ್ತು.

೨. ತಾಯಲೂರ ಶಾಸನ:—[2] ಸತ್ಯವಾಕ್ಯ ಪೆರ್ಮಾನಡಿಯ ಆಳಿಕೆಯ ೨೭ನೆಯ ವರ್ಷವಾದ ಶಕ ೮೧೭ (ಕ್ರಿ. ಶ. ೮೯೫)ರಲ್ಲಿ ನೊಳಂಬಾಧಿರಾಜನು ದೇವಾಲಯಕ್ಕೆ ಭೂದಾನವನ್ನು ಮಾಡಿದನು. ಸತ್ಯವಾಕ್ಯ ಪೆರ್ಮಾನಡಿಯು ೨ನೆಯ ರಾಚಮಲ್ಲನು. ನೊಳಂಬಾಧಿರಾಜನು ಮಹೇಂದ್ರನೇ.

ಮಹೇಂದ್ರನ ತರುವಾಯದಲ್ಲಿ ಅವನ ತಮ್ಮನಾದ ನೊಳಂಬಾಧಿರಾಜ ಇಱುವನೊಳಂಬನು ಪಟ್ಟಬದ್ಧನಾದನು. ಆವನಿಯ ಶಾಸನದಲ್ಲಿ ಇವನು 'ಕನೀಯನಂದನ' ನೆಂದು ವರ್ಣಿಸಲ್ಪಟ್ಟಿದ್ದಾನೆ. ಮದ್ದಗಿರಿ ತಾಲೂಕಿನ ಕೋಡ್ಲಾಪುರ ಶಾಸನದಲ್ಲಿ ಶಕ ೮೨೦ ನೆಯ ಪ್ಲವಂಗಳ ಸವಂತ್ಸರದಲ್ಲಿ ನೊಳಂಬಾಧಿರಾಜ ನೊಳಿಪಯ್ಯನು ಪೃಥಿವೀ ರಾಜ್ಯಂಗೆಯ್ಯುತ್ತಿದ್ದನೆಂದು ಬರೆದಿದೆ. ಇವನೇ ಮೇಲೆ ಹೇಳಿದ ಇಱುವನೊಳಂಬನಾಗಿರಬೇಕು. ಕ್ರಿ. ಶ. ೯೧೯ರ ಶಾಸನವೇ ಅಯ್ಯಪದೇವನ ಮೊದಲನೆಯ ಶಾಸನವಾದುದರಿಂದ ನೊಳಿಪಯ್ಯನ ಆಳಿಕೆಯು ಆ ಕಾಲಕ್ಕೆ ಮೊದಲೇ ಕೊನೆಗೊಂಡಿರಬೇಕು. ಇವನ ಆಳಿಕೆಯನ್ನು ಕುರಿತು ಹೆಚ್ಚಿನ ಸಂಗತಿಗಳಾವುವೂ ತಿಳಿಯಬಂದಿಲ್ಲ.

ಇಱುವನೊಳಂಬನಾದಮೇಲೆ ಅವನ ಅಣ್ಣನ ಮಗನಾದ ಅಯ್ಯಪದೇವನು ನೊಳಂಬವಾಡಿಯ ಅಧಿಪತಿಯಾದನು. ಶಕ ೮೪೧ನೆಯ ವರ್ಷದಲ್ಲಿ ಇವನ ಮಗನಾದ ಅಣ್ಣಿಗನು ಮಾಂಡಲಿಕನಾಗಿ ಆಳುತ್ತಿದ್ದನೆಂದು ಒಂದು ಶಾಸನದಿಂದ

[1] *Ep. Ind.* Vol. X, p. 63.

[2] *M. A. R.* 1919.

ತಿಳಿಯುತ್ತದೆ. ಎಱೆಯಪ್ಪನು ತನ್ನ ತಂದೆಯಾದ ಮಹೇಂದ್ರನನ್ನು ಕಾಳಿಗದಲ್ಲಿ ಕೊಂದಿದ್ದರೂ ಅಯ್ಯಪನು ಗತಿಗಾಣದೆ ಅವನೊಡನೆ ಸಖ್ಯದಿಂದಲೇ ಇದ್ದಂತೆ ತಿಳಿಯುತ್ತದೆ. ಪೂರ್ವಚಳುಕ್ಯ ಮನೆತನದ ೧ನೆಯ ಅಮ್ಮರಾಯನು ನೊಳಂಬ ರಾಜ್ಯದಲ್ಲಿ ತುಂಬೆಪಾಡಿಯವರೆಗೆ ದಂಡೆತ್ತಿಬರಲು ಎಱೆಯಪ್ಪನು ಅಯ್ಯಪನ ಸಹಾಯಕ್ಕಾಗಿ ನಾಗತ್ತರದಂಡನ್ನು ಕಳುಹಿಸಿದನೆಂದೂ ತುಂಬೆಪಾಡಿಯಲ್ಲಿ ಆವೆರಡೂ ಪಕ್ಷದವರಿಗೆ ಘೋರವಾದ ಯುದ್ಧವಾಗಿ ಅನೇಕ ವೀರರು ಮಡಿಯಲು ಎಱೆಯಪ್ಪನು ಇರುಗನಿಗೆ ನಾಗತ್ತರ ಪಟ್ಟವನ್ನು ಕಟ್ಟಿ ಬೆಂಪೂರು ಮೊದಲಾದ ೧೨ ಹಳ್ಳಿಗಳನ್ನು ಉಂಬಳಿಯಾಗಿ ಹಾಕಿಕೊಟ್ಟನೆಂದೂ ಬೇಗೂರು ಶಾಸನದಲ್ಲಿ ಬರೆದಿದೆ. ಈ ಯುದ್ಧದಲ್ಲಿ ಜಯಾಪಜಯಗಳು ಯಾರಿಗೆ ಬಂದವೆಂಬುದು ಹೇಳಿಲ್ಲ. ಆದರೆ ಈ ಕಲಹವು ಬೆಳೆಯುತ್ತಹೋಗಿ ಕಡೆಗೆ ೨ನೆಯ ಚಳುಕ್ಯ ಭೀಮನು ಅಯ್ಯಪನನ್ನು ಯುದ್ಧದಲ್ಲಿ ಕೊಂದನು. ಈ ಕೊಲೆಯು ಎಂದು ಸಂಭವಿಸಿತೆಂಬುದು ಗೊತ್ತಿಲ್ಲ. ಅಯ್ಯಪನು ಕ್ರಿ. ಶ. ೯೨೩ರಲ್ಲಿ ರಾಜ್ಯಭಾರಮಾಡುತ್ತಿದ್ದನೆಂದೂ ಶಕ ೮೫೩ (ಕಿ. ಶ. ೯೩೧)ರಲ್ಲಿ ಅಣ್ಣಿಗನು ರಾಜ್ಯವಾಳುತ್ತಿದ್ದನೆಂದೂ ಶಾಸನದಿಂದ ಗೊತ್ತಾಗುವುದರಿಂದ[1] ಅಯ್ಯಪನು ಕ್ರಿ. ಶ. ೯೨೩–೯೩೧ ರ ಮಧ್ಯದಲ್ಲಿ ಮಡಿದಿರಬೇಕು.

ಅಯ್ಯಪನಿಗೆ ಬೀರನೊಳಂಬ, ನನ್ನಿಗಾಶ್ರಯ, ನನ್ನಿಗ, ಏಕವಾಕ್ಯ[2] ಎಂಬ ಬಿರುದುಗಳಿದ್ದವು. ಇವನಿಗೆ ಗಂಗಮನೆತನದ ಪೊಲ್ಲಬ್ಬರಸಿ (ಪೊಲೆಯಬ್ಬೆ) ನಾಗಿಯಬ್ಬೆ ಎಂಬ ಇಬ್ಬರು ರಾಣಿಯರಿದ್ದರು. ಈ ನಾಗಿಯಬ್ಬೆಯ ತಾಯಿಯು ನಾರಾಯಣ ಅಬ್ಬೆಯೆಂದು ಬರಗೂರು ಶಾಸನದಲ್ಲಿ ಕೊಟ್ಟಿದೆ. ಇವನಿಗೆ ಅಣ್ಣಿಗ, ದಿಲೀಪ ಎಂಬ ಇಬ್ಬರು ಮಕ್ಕಳಿದ್ದರು.

ಅಣ್ಣಿಗನು ಶಕ ೮೪೧ (ಕ್ರಿ. ಶ. ೯೧೯) ರಲ್ಲಿ ಅಯ್ಯಪನ ಕೈಕೆಳಗೆ ಮಾಂಡಲಿಕನಾಗಿ ಆಳುತ್ತಿದ್ದನೆಂದು ಮೇಲೆ ಹೇಳಿದ್ದೇವೆ. ಇವನು ಪಟ್ಟಕ್ಕೆ ಬಂದಮೇಲೆ ಕಚ್ಚೆಯಗಂಗ ೩ನೆಯ ರಾಚಮಲ್ಲನೊಡನೆ ಯುದ್ಧಮಾಡಿದನೆಂದು ತಿಪಟೂರು ತಾಲೂಕಿನ ಮಾದಿಹಳ್ಳಿಯ ಶಾಸನದಿಂದ ತಿಳಿಯುತ್ತದೆ.[3] ಮಾರಸಿಂಹನ ಕೂಡಲೂರು ತಾಮ್ರಶಾಸನದಲ್ಲಿ ನೊಳಂಬ ಅಣ್ಣಿಗನಿಗೂ ರಾಚಮಲ್ಲನಿಗೂ ಕೊತ್ತಮಂಗಲದಲ್ಲಿ ಯುದ್ಧವಾಗಿ ಅಲ್ಲಿ ನೊಳಂಬನು ಪರಾಜಿತನಾಗಿ ಮೊರೆಹೊಕ್ಕನೆಂದು ಹೇಳಿದೆ. ಕೊತ್ತಮಂಗಲವು ಬಯಲ್ನಾಡಿನಲ್ಲಿತ್ತೆಂದು

---

1 ಅಬ್ಬಿನಹೊಳೆಯ ವೀರಗಲ್ಲು.

2 *M. A. R.* 1918

3 *Ep. Carn.* Vol. XII.

ಹೆಗ್ಗಡದೇವನ ಕೋಟೆಯ ಒಂದು ಲಿಪಿಯಿಂದ ಗೊತ್ತಾಗುತ್ತದೆ.[1] ಇದರಿಂದ ಅಣ್ಣಿಗನು ರಾಜಮಲ್ಲನಿಗೂ ಅವನ ತಮ್ಮನಾದ ಬೂತುಗನಿಗೂ ನಡೆದಿದ್ದ ಅಂತಃಕಲಹದ ಸಮಯವನ್ನು ಸಾಧಿಸಿ ಗಂಗರಾಜ್ಯದ ದಕ್ಷಿಣಭಾಗದಲ್ಲಿದ್ದ ಕೊತ್ತಮಂಗಲದವರೆಗೂ ನುಗ್ಗಿದಂತೆ ತೋರುತ್ತದೆ. ರಾಷ್ಟ್ರಕೂಟ ೩ನೆಯ ಕೃಷ್ಣನು ನೊಳಂಬ ಅಣ್ಣಿಗನನ್ನು ಸೋಲಿಸಿ ರಾಜಮಲ್ಲನನ್ನು ಕೊಂದು ಬೂತುಗನಿಗೆ ಗಂಗಪಟ್ಟವನ್ನು ಕಟ್ಟಿದನೆಂದು ಗೊತ್ತಿರುವುದರಿಂದ ಅಣ್ಣಿಗನು ರಾಜಮಲ್ಲನ ಸಹಾಯಕ್ಕಾಗಿ ರಾಷ್ಟ್ರಕೂಟನೊಡನೆ ಹೋರಾಡಿರಬೇಕು. ಈ ಯುದ್ಧವು ಬೂತುಗನು ಪಟ್ಟಕ್ಕೆ ಬರುವ ಮೊದಲು ಅಂದರೆ ಕ್ರಿ. ಶ. ೯೩೬ಕ್ಕಿಂತ ಮುಂಚೆ ನಡೆದಿರಬೇಕು. ಶಕ ೮೫೮ರಲ್ಲಿ (ಕ್ರಿ. ಶ. ೯೩೬) ಬೀರನೊಳಂಬ ಅಣ್ಣಯ್ಯದೇವನು ರಾಜ್ಯಭಾರಮಾಡುತ್ತಿದ್ದನೆಂದು ಅನಂತಪುರ ಜಿಲ್ಲೆಯ ಮಡಕಶಿರಾ ತಾಲೂಕಿನಲ್ಲಿದ್ದ ಗುನಿಮೊರುಬಾಗಲಿನ ಒಂದು ಶಾಸನದಿಂದ ತಿಳಿಯುತ್ತದೆ.[2] ನೊಳಂಬೇಶ್ವರ ದೇವಾಲಯದ ಮರುಣ ಶಿವಭಟಾರರೂ ಊರವರೂ ಗಾವುಂಡುಗಳೂ ಸೇರಿದ್ದಾಗ ಕೆಲವು ಕೆರೆಗಳ ಕೆಳಗಿದ್ದ ಭೂಮಿಗಳು ಹಂಚಲ್ಪಟ್ಟವೆಂದು ಇದರಲ್ಲಿ ಬರೆದಿದೆ.

ಅಣ್ಣಿಗನು ಚಳುಕಿ ಕುಲದ ಅತ್ತಿಯಬ್ಬರಸಿಯನ್ನು ಮದುವೆಯಾಗಿದ್ದನು. ಇವಳಿಗೆ ಇರುಳನೆಂಬ ಮಗನು ಜನಿಸಿದನು. ಇವನು ಶಕ ೮೫೩ನೆಯ ವಿರೋಧಿ (ಕ್ರಿ. ಶ. ೯೩೧) ಸಂವತ್ಸರದ ಧರ್ಮಪುರೀ ಲಿಪಿಯಲ್ಲಿ ಉಕ್ತನಾಗಿದ್ದಾನೆ.[3] ಇವನು ರಾಜನಾಗುವುದಕ್ಕಿಂತ ಮುಂಚಿತವಾಗಿಯೇ ಸತ್ತನೋ ಅಥವಾ ಸ್ವಲ್ಪ ಕಾಲ ಆಳಿದನೋ ಹೇಳಲಿಕ್ಕಾಗದು.

ಶಕ ೮೬೪ (ಕ್ರಿ. ಶ. ೯೪೨) ರಲ್ಲಿ ಅಯ್ಯಪದೇವನ ಕಿರಿಯ ಮಗನಾದ ಇರಿವನೊಳಂಬ–ದಿಲೀಪರಸನು ಆಳುತ್ತಿದ್ದುದರಿಂದ[4] ಇವನ ಪಟ್ಟಬಂಧವು ಶಕ ೮೫೮–೮೬೪ ರ ಮಧ್ಯದಲ್ಲಿ ಜರುಗಿರಬೇಕು. ಶಕ ೮೬೪, ೮೬೮, ೮೭೦, ೮೭೨ ಎಂಬ ಕಾಲವನ್ನು ಕೊಟ್ಟಿರುವ ಇವನ ನಾಲ್ಕು ಶಾಸನಗಳು ದೊರೆತಿವೆ.

---

[1] *Ep. Carn.* Vol. IV, Hg. 103.

[2] *M. E. R.* 1916, No. 759 of App. B. ಗುನಿಮೊರುಬಾಗಲಿನ ಶಾಸನದ ರಾಜನು ಬೀರನೊಳಂಬ [ನ ಮಗ] ನೆಂದು ಈ ರಿಪೋರ್ಟಿನಲ್ಲಿ ಬರೆದಿದೆ.

[3] ಈ ಶಾಸನವು ಇರುಳನದೆಂದು ೧೯೧೧ರ ಮದ್ರಾಸ ರಿಪೋರ್ಟಿನಲ್ಲಿ ಕೊಟ್ಟದೆ. ೧೯೧೭ ರ ರಿಪೋರ್ಟಿನಲ್ಲಿ ಇದು ಅಣ್ಣಿಗನ ಕಾಲದ ಶಾಸನವೆಂದು ತಿದ್ದಿ ಹೇಳಲ್ಪಟ್ಟದೆ.

[4] ಹೇಮಾವತೀ ಲಿಪಿ (*S. I. I.* Vol. VI, p. 199.)

ಇವುಗಳಲ್ಲಿ ಶಕ ೮೭೦ ನೆಯ ಕೀಲಕ ಸಂವತ್ಸರದ ಮಡಕಶಿರಾ ಶಾಸನದಲ್ಲಿ ಪೊನ್ನಯ್ಯನು ಬಲ್ಲಹನ ಆಜ್ಞೆಯ ಮೇರೆಗೆ ದಿಲೀಪನೊಳಂಬನ ಸೈನ್ಯವನ್ನು ಸೇರಿ ಗಜಾಂಕುಶ ಚೋಳನೊಡನೆ ಇಪಿಟಿಯಲ್ಲಿ ಯುದ್ಧಮಾಡಿ ಸತ್ತನೆಂದು ಬರೆದಿದೆ. ಶಕ ೮೭೦ ರಲ್ಲಿ ಆಳುತ್ತಿದ್ದ ಬಲ್ಲಹನು ರಾಷ್ಟ್ರಕೂಟ ೩ ನೆಯ ಕೃಷ್ಣನು. ಇದೇ ಸಮಯದಲ್ಲಿ ಇವನು ತಕ್ಕೋಲದಲ್ಲಿ ಚೋಳ ರಾಜಾದಿತ್ಯನೊಡನೆ ಯುದ್ಧಮಾಡಿದುದರಿಂದ ಗಜಾಂಕುಶ ಚೋಳನು ರಾಜಾದಿತ್ಯನಾಗಿರಬಹುದು. ಈ ಲಿಪಿಯಲ್ಲಿ ಪೊನ್ನಯ್ಯನು ೩೨೦೦೦ ನಾಡಿನ (ಅಂದರೆ ನೊಳಂಬವಾಡಿಯ) ಧಾನುಷ್ಕರಲ್ಲಿ ಅಗ್ರಗಣ್ಯನಾದ ಶಿವಯ್ಯನ ತಮ್ಮನೆಂದು ಹೇಳಿದೆ. ಇವನು ನೊಳಂಬ ಸೈನ್ಯದಲ್ಲಿ ಅಧಿಕಾರಿಯಾಗಿದ್ದಿರಬೇಕು. ಇವನನ್ನು ಬಲ್ಲಹನು ಆಜ್ಞಾಪಿಸಿದುದರಿಂದ ಇವನ ಪ್ರಭುವಾದ ನೊಳಂಬನು ಬಲ್ಲಹನ ಅಧೀನನಾಗಿದ್ದಿರಬೇಕು. ಕೃಷ್ಣನು ಅಣ್ಣಿಗನನ್ನು ಸೋಲಿಸಿದಾಗ ಅವನು ರಾಷ್ಟ್ರಕೂಟರ ಪ್ರಭುತ್ವವನ್ನು ಒಪ್ಪಿಕೊಂಡನೋ ಅಥವಾ ಅಣ್ಣಿಗನು ಉದ್ದಾಮನಾಗಿಯೇ ಉಳಿಯಲು ರಾಷ್ಟ್ರಕೂಟ ರಾಜನು ಅವನನ್ನು ವಿಪತ್ತಿಗೀಡುಮಾಡಿ ಅವನ ತಮ್ಮನಾದ ದಿಲೀಪನನ್ನು ನೊಳಂಬ ಸಿಂಹಾಸನದ ಮೇಲೆ ಕೂಡಿಸಿ ಅವನನ್ನು ತನ್ನ ಸಾಮಂತನನ್ನಾಗಿ ಮಾಡಿಕೊಂಡನೋ ಹೇಳಲಿಕ್ಕಾಗದು.

ದಿಲೀಪನಿಗೆ ಇಱುವನೊಳಂಬ, ಏಕವಾಕ್ಯ ಎಂಬ ಬಿರುದುಗಳಿದ್ದವು. ಕರ್ಪಣಪಲ್ಲೆ ಶಾಸನದಲ್ಲಿ [1] ಇಱುವನೊಳಂಬ ದಿಲೀಪನ ಮಗ ನನ್ನಿನೊಳಂಬನೆಂದೂ ಅವನ ಮಗನು ಪೊಳಲ್ಚೋರನೆಂದೂ ಕೊಟ್ಟಿದೆ. ಕಂಬದೂರು ಲಿಪಿಯಲ್ಲಿ [2] ಇಱುವನೊಳಂಬನ ಜ್ಯೇಷ್ಠ ಮಗನು ಚಲದಂಕಕಾರನೆಂದೂ ಅವನ ಮಗನು ಪೊಳಲ್ಚೋರನೆಂದೂ ಹೇಳಿದೆ. ಇದರಿಂದ ಕರ್ಪಣಪಲ್ಲೆ ಲಿಪಿಯ ನನ್ನಿ ನೊಳಂಬನೇ ಚಲದಂಕಕಾರನೆಂದು ಗೊತ್ತಾಗುತ್ತದೆ. ಶಕ ೮೭೩ ರಿಂದ ೮೮೮ ರ ವರೆಗಿನ ಕೆಲವು ಶಾಸನಗಳಲ್ಲಿ ಇಱುವನೊಳಂಬ ನೊಳಿಪಯ್ಯನು ರಾಜ್ಯವಾಳುತ್ತಿದ್ದನೆಂದು ಬರೆದಿದೆ. ಇದರಿಂದ ಶಕ ೮೭೨ ದಿಲೀಪನ ಕಡೆಯ ವರ್ಷವೆಂದು ನಿರ್ಣಯಿಸಬೇಕಾಗುತ್ತದೆ. ಇವನ ತರುವಾಯ ಶಕ ೮೭೩ ರಲ್ಲಿ ಆಳುತ್ತಿದ್ದ ಇಱುವನೊಳಂಬ ನೊಳಿಪಯ್ಯನು ದಿಲೀಪನ ಕಿರಿಯ ಮಗನಾಗಿರಬೇಕು. ಹೊಸಕೋಟೆ ತಾಲೂಕಿನ ಕೊಂಡರಹಳ್ಳಿ, ಚಿಂತಾಮಣಿ ತಾಲೂಕಿನ

---

[1] *M. E. R.* 1916, No. 728 of APP. B.

[2] *M. E. R.* 1906–7.

ಕುರುಬೂರುಗಳಲ್ಲಿ ದೊರೆತ ಇವನ ಲಿಪಿಗಳಲ್ಲಿ ಇವನಿಗೆ ಪಲ್ಲವರಾಮನೆಂಬ ಬಿರುದುಕೊಟ್ಟಿದೆ. ಕಂಬದೂರು ಲಿಪಿಯಲ್ಲಿ ಉಕ್ತವಾದ ಚಲದಂಕಕಾರ ಪಲ್ಲವರಾಮ ಎಂಬ ಬಿರುದುಗಳು ಒಬ್ಬನಿಗೇ ಅನ್ವಯಿಸುವುದಿಲ್ಲ. ಅವು ದಿಲೀಪನ ಇಬ್ಬರು ಮಕ್ಕಳನ್ನು ಸೂಚಿಸುತ್ತವೆಂದು ತಿಳಿಯಬೇಕು.

ನನ್ನಿನೊಳಂಬ ಇಱಿವ ನೊಳಂಬ ನೊಳಿಪಯ್ಯರಿಬ್ಬರೂ ಏಕಕಾಲದಲ್ಲಿ ನೊಳಂಬರಾಜ್ಯವನ್ನಾಳುತ್ತಿದ್ದರು. ನನ್ನಿನೊಳಂಬನ ಶಾಸನಗಳು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿಗೆ ಸೇರಿದ ಐಮಂಗಲದಲ್ಲಿಯೂ[1] ಅನಂತಪುರ ಜಿಲ್ಲೆಯ ಮಡಕಸಿರಾ ತಾಲೂಕಿಗೆ ಸೇರಿದ ಕಂಬುದೂರಲ್ಲಿಯೂ (ಶಕ ೮೮೭), ಕೋಲಾರ ಜಿಲ್ಲೆಯ ಮುಳ್ಬಾಗಿಲ ತಾಲೂಕಿಗೆ ಸೇರಿದ ಬಲ್ಲದಲ್ಲಿಯೂ[2] ( ಶಕ ೮೯೦ ) ದೊರೆತಿವೆ. ನೊಳಿಪಯ್ಯನ ಶಾಸನಗಳು ಚಿಂತಾಮಣಿ ತಾಲೂಕಿನ ಕುರುಬೂರು ( ಶಕ ೮೭೩ ) ಮುದ್ದಲಹಳ್ಳಿ ( ಶಕ ೮ [ ೭ ] ೮ ) ಗಳಲ್ಲಿಯೂ[3] ಮುಳ್ಬಾಗಿಲ ತಾಲೂಕಿನ ಬಲ್ಲ ( ಶಕ ೮೮೩ ) ದಲ್ಲಿಯೂ ಕೋಲಾರ ತಾಲೂಕಿನ ಒಂದು ಹಳ್ಳಿ ( ಶಕ ೮೮೮ ) ಯಲ್ಲಿಯೂ ಬೌರಿಂಗಪೇಟ ತಾಲೂಕಿನ ಬೇತಮಂಗಲದಲ್ಲಿಯೂ ಹೊಸಕೋಟೆ ತಾಲೂಕಿನ ಕೊಂಡರಹಳ್ಳಿಯಲ್ಲಿಯೂ ಮಡಕಸಿರಾ ತಾಲೂಕಿನ ಹೊನ್ನೇರಲಿಹಳ್ಳಿ ( ಶಕ ೮೮೫ ) ಹೇಮಾವತಿ ( ಶಕ ೮೮೮ ) ಗಳಲ್ಲಿಯೂ ಸಿಕ್ಕಿವೆ.

ಶಕ ೮೯೪ ನೆಯ ಆಂಗಿರಸ ಸಂವತ್ಸರದ ಕಿಬ್ಬನಹಳ್ಳಿ ಶಾಸನದಲ್ಲಿ ಮಾರಸಿಂಹನು 'ನೊಳಂಬರೆಲ್ಲರಂ ಕೊಂದು' ರಾಜ್ಯವಾಳುತ್ತಿದ್ದನೆಂದು ಬರೆದಿದೆ. ನೇರಲಿಗೆ ( ಅರಸೀಕೆರೆ ತಾಲೂಕು ) ಯ ಒಂದು ಲಿಪಿಯಲ್ಲಿ ಶಕ ೮೯೪ ನೆಯ ಪ್ರಜಾಪತಿ ಸಂವತ್ಸರದಲ್ಲಿ ( ಕ್ರಿ. ಶ. ೯೭೧–೭೨ ) ನೊಳಂಬ ಕುಲಾಂತಕ ಮಾರಸಿಂಹನು ಆಳುತ್ತಿದ್ದಾಗ ನೊಳಂಬರನ್ನು ಕಾದಿ ಗೆದ್ದು ರಣಾಂಗಣದಲ್ಲಿ ಮಡಿದ ಅಣ್ಣಪಸಯ್ಯನ ಮಗನಾದ ಬೂತುಗನಿಗೆ ಕಲ್ನಾಡುಗೊಟ್ಟ ಸಂಗತಿಯು ಬರೆದಿದೆ. ಈ ಯುದ್ಧದಲ್ಲಿ ಕಟ್ಟಾನೆಮಲ್ಲ, ಉತ್ತಿಗ, ನೊಳಿಪ, ಚಟ್ಟಿಗರೆಂಬ ನೊಳಂಬ ಕುಲದ ವೀರರು ಪ್ರತಿಕಕ್ಷಿಗಳಾಗಿದ್ದರೆಂದು ಅದೇ ಲಿಪಿಯಲ್ಲಿ ಹೇಳಿದೆ. ಇಲ್ಲಿ ಮಾರಸಿಂಹನು ನೊಳಂಬ ಕುಲಾಂತಕ ಎಂಬ ಬಿರುದನ್ನು ಧರಿಸಿರುವುದರಿಂದ ನೊಳಂಬ ಕುಲ ಧ್ವಂಸವು ಕ್ರಿ. ಶ. ೯೭೧–೭೨

---

1 *Ep. Carn.* Vol. XI, Hiriyūr 1.

2 *Ep. Carn.* Vol. X, Mulbagal 112.

3 *Ibid*, Chintāmani 49 and 143.

ಕ್ಕಿಂತ ಮೊದಲೇ ಜರುಗಿರಬೇಕು. ಆ ಮೇಲೆ ಚಿಕ್ಕಪುಟ್ಟ ನೊಳಂಬ ವೀರರು ತಮ್ಮ ಮನೆತನದ ಐಶ್ವರ್ಯವನ್ನು ಉಜ್ಜೀವಗೊಳಿಸುವ ಉದ್ದೇಶದಿಂದ ಗಂಗರೊಡನೆ ಹೋರಾಡಿ ಸೋತಂತೆ ತೋರುತ್ತದೆ. 'ನೊಳಂಬ ಕುಲಾಂತಕ' ಎಂಬ ಬಿರುದಿನಿಂದ ಮಾರಸಿಂಹನು ಅನೇಕ ನೊಳಂಬರನ್ನು ಕೊಂದನೆಂದು ಊಹಿಸಬಹುದು. ಈಗ ನನ್ನಿ ನೊಳಂಬ ನೊಳಿಪಯ್ಯರಿಬ್ಬರೂ ಆಳುತ್ತಿದ್ದುದ ರಿಂದ ಇವರನ್ನೇ ಮಾರಸಿಂಹನು ಸೋಲಿಸಿ ಕೊಂದಿರಬೇಕು. ಕ್ರಿ. ಶ. ೯೬೮ ರಲ್ಲಿ ನನ್ನಿ ನೊಳಂಬನು ಪೃಥ್ವೀರಾಜ್ಯಂಗೆಯ್ಯುತ್ತಿದ್ದುದರಿಂದ ನೊಳಂಬ ಕುಲ ನಿರ್ಮೂಲನವು ಕ್ರಿ. ಶ. ೯೬೮–೯೭೧ ರ ಮಧ್ಯದಲ್ಲಿ ಸಂಭವಿಸಿರಬೇಕು. ಮಾರಸಿಂಹನ ಆಳಿಕೆಯ ೭ ನೆಯ ವರ್ಷದ ತೊರವಳ್ಳಿ ಶಾಸನದಿಂದ ಗುತ್ತಿಯ ಗಂಗ (ಮಾರಸಿಂಹ) ನ ಬೆಸದೊಳ್ ಮಾಚಿಗನು ನೊಳಂಬಾಧಿರಾಜನೊಡನೆ ಕಾದಿ ಮಡಿದನೆಂದು ತಿಳಿಯುವುದರಿಂದ ಈ ಯುದ್ಧವು ಕ್ರಿ. ಶ. ೯೬೯–೭೦ ರಲ್ಲಿಯೇ ಆಗಿರಬೇಕೆಂದು ಸ್ಪಷ್ಟವಾಗುತ್ತದೆ. ಮೇಲೆ ಉಕ್ತನಾದ ನೊಳಿಪನು ನೊಳಿಪಯ್ಯನ ಹೆಸರನ್ನಿಟ್ಟುಕೊಂಡ ಒಬ್ಬ ಸೈನ್ಯಾಧಿಕಾರಿಯಾಗಿರಬಹುದು.

ಮಹೇಂದ್ರನು ಬಾಣರನ್ನು ಧ್ವಂಸಮಾಡಿದ ಮೇಲೆ ಅವರು ನೊಳಂಬರ ಅಧೀನರಾಗಿಯೇ ಉಳಿದಂತೆ ತೋರುತ್ತದೆ. ಬಲ್ಲದ ಒಂದು ಶಾಸನದಲ್ಲಿ ಮಹಾಬಲಿಕುಲೋದ್ಭವ ಸಾಂಬಯ್ಯನು ಇಱಿವನೊಳಂಬನ ಮಾಂಡಲಿಕನಾಗಿ ಶಕ ೮೮೩ ರಲ್ಲಿ ಬಿದಿರೂರಲ್ಲಿ ಆಳುತ್ತಿದ್ದನೆಂದು ಬರೆದಿದೆ. ವೈದುಂಬ ಶಿಖಾಮಣಿ ವಿಕ್ರಮಾದಿತ್ಯನ್ತಿರುವಯ್ಯನು ಏಕವಾಕ್ಯ ಇಱಿವನೊಳಂಬನ ಬೆಸದಿಂದ ವಿಜ-ಯಾದಿತ್ಯ ಮಂಗಲದ ಪಿರಿಯ ಕೆರೆಯ ಭಿನ್ನ ಪ್ರತಿಸಂಧಾನವನ್ನು ಮಾಡಿ ಕಯ್ವಾರದ ಮಹಾಜನರಿಗೆ ಬಿತ್ತುವಟ್ಟವನ್ನು ಕೊಟ್ಟನೆಂದು ಬೇತಮಂಗಲದ ಲಿಪಿಯಲ್ಲಿ ಹೇಳಿದೆ. ವಿಕ್ರಮಾದಿತ್ಯ ಎಂಬ ಬಿರುದುಳ್ಳ ತಿರುವಯ್ಯನೆಂಬ ವೈದುಂಬ ಮಾಂಡಲಿಕನು ರಾಷ್ಟ್ರಕೂಟ ೩ನೆಯ ಕೃಷ್ಣನ ಕೈಕೆಳಗೆ ತೊಂಡೈ ಮಂಡಲವನ್ನು ಆಳುತ್ತಿದ್ದನು. ನೊಳಂಬನ ಸಾಮಂತನಾಗಿದ್ದ ತಿರುವಯ್ಯನು ಇವನೇ ಆಗಿದ್ದಿರಬಹುದು. ತೊಂಡೈಮಂಡಲವು (ಉತ್ತರ ಆರ್ಕಾಡು ಜಿಲ್ಲೆ) ಬೇತಮಂಗಲದ ತೀರ ಸಮೀಪದಲ್ಲಿರುವುದರಿಂದ ಈ ಊಹೆಯು ಬಲಪಡುತ್ತದೆ.

ಪಂಚಲದೇವನ ಪೆರ್ಗ್ಗಡೆ ಪಡುವಗಱೆಯಯ್ನೂರರ ಭೋಗಪತಿ ಗುಂಡಯ್ಯನು ಅಯ್ಯಪಮಂಗಲ (ಐಮಂಗಲ) ವನ್ನು ಪೂರ್ವಮರ್ಯಾದೆ ದಪ್ಪಿ ಅಕ್ರಮಂಗೆಯ್ದನೆಂದೂ ತಿರುಗಿ ಶಕ ೮೯೨ ನೆಯ ಯುವಸಂವತ್ಸರದ ಕಾರ್ತ್ತಿಕ ಶುದ್ಧ ಏಕಾದಶೀ ಸೋಮವಾರದಂದು ಪೂರ್ವ ಮರ್ಯಾದೆಯನ್ನು

ಬಿಟ್ಟುಕೊಟ್ಟನೆಂದೂ ಐಮಂಗಲದ ಲಿಪಿಯಲ್ಲಿ ಬರೆದಿದೆ. ಈ ಅಯ್ಯಪಮಂಗಲವು ನನ್ನಿನೊಳಂಬನು ಬಿಟ್ಟಿದ್ದ ಬ್ರಹ್ಮದೇಯವೆಂದು ಅಲ್ಲಿಯೇ ಹೇಳಿದೆ. ಇದರಿಂದ ಮಾರಸಿಂಹನು ನೊಳಂಬರನ್ನು ಸೋಲಿಸಿದ ಮೇಲೆ ಅವರ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನೆಂದು ಹೇಳಬೇಕಾಗುತ್ತದೆ.

ನನ್ನಿನೊಳಂಬನ ಮಗನಾದ ಪೊಳಲ್ಚೋರನ ಲಿಪಿಗಳು ಸಿಕ್ಕಿಲ್ಲ. ಇವನ ಮಗನಾದ ವೀರಮಹೇಂದ್ರನ ಶಕ ೮೯೯ ರ ಎರಡು ಲಿಪಿಗಳು ರಾಯದುರ್ಗ ತಾಲೂಕಿನ ಕಲುಗೋಡಿನಲ್ಲಿಯೂ ಚಿಕ್ಕ ಬಳ್ಳಾಪುರ ತಾಲೂಕಿನ ಕಂದವಾರ ದಲ್ಲಿಯೂ ದೊರೆತಿವೆ. ಇವುಗಳಲ್ಲಿ ಇವನು ರಾಜ್ಯಂಗೆಯ್ಯುತ್ತಿದ್ದನೆಂದು ಉಕ್ತವಾಗಿದೆ. ಶಕ ೮೯೬ ರ ಮೇಲಾಗಾಣಿ ಶಾಸನದಲ್ಲಿ "ಪಲ್ಲವಾದಿತ್ಯ ನೊಳಂಬಾಧಿರಾಜಂ ಚೋರಯ್ಯ ನೊಳಂಬ"ರು ಸಾಯಿರವಿಸಿಯೂರಲ್ಲಿ (ಗುಡಿಯಾತಂ ತಾಲೂಕು, ಉತ್ತರ ಆರ್ಕಾಡು ಜಿಲ್ಲೆ) ಬೀಡು ಬಿಟ್ಟಾಗ ಮಾರಸಿಂಘ ಪೆರ್ಮ್ಮಾನಡಿಯು ಅತೀತನಾದ (ಸತ್ತ) ನೆಂಬ ಸುದ್ದಿಯನ್ನು ಕೇಳಿದರೆಂದು ಬರೆದಿದೆ. ಇಲ್ಲಿ ಉಕ್ತರಾದ ನೊಳಂಬರಾರೆಂಬುದು ಗೊತ್ತಿಲ್ಲ. ೨ನೆಯ ವೀರಮಹೇಂದ್ರನ ಮೊಮ್ಮಗನಾದ ೨ನೆಯ ಇಱಿವನೊಳಂಬನಿಗೆ ಪಲ್ಲವಾದಿತ್ಯ ಎಂಬ ಬಿರುದು ಇದ್ದುದರಿಂದ ತಾತನಾದ ವೀರಮಹೇಂದ್ರನಿಗೂ ಅದು ಇತ್ತೆಂದು ತಿಳಿದರೆ ಶಕ ೮೯೬ ರಲ್ಲಿ ಅವನು ಉತ್ತರ ಆರ್ಕಾಡು ಜಿಲ್ಲೆಯ ಒಂದು ಭಾಗದಲ್ಲಿ ಇದ್ದನೆಂದು ಊಹಿಸಬಹುದು. ಮಾರಸಿಂಹನು ಸಾಯುವ ವರೆಗೂ ಬಲಹೀನರಾಗಿದ್ದ ನೊಳಂಬರು ನಿರುಪಾಯರಾಗಿ ಸುಮ್ಮನಿದ್ದರು ಈ ಸಮಯದಲ್ಲಿ ನೀತಿಜ್ಞನಾದ ೨ನೆಯ ತೈಲನು ಗಂಗರಾಜ್ಯವನ್ನು ಕೈವಶ ಪಡಿಸಿಕೊಳ್ಳಲು ಅವರ ವೈರಿಗಳಾದ ನೊಳಂಬರ ಸಖ್ಯವನ್ನು ಬೆಳೆಯಿಸಿರ ಬಹುದು. ಕರ್ಷಣಪಲ್ಲೆಯ ಒಂದು ಶಾಸನದಲ್ಲಿ ಈ ಮಹೇಂದ್ರನು ಚೋಳ-ನಾಡ ಮೇಲೆ ದಂಡೆತ್ತಿ ಹೋಗಿ ಅದನ್ನು ಗೆದ್ದು ತಿರುಗಿ ಬರುವಾಗ ನೊಳಂಬ ವಾಡಿಯನ್ನು ಹೊಕ್ಕು ಗಂಗಱುಸಾಸಿರದಲ್ಲಿದ್ದ ಕೋಲಾರದಲ್ಲಿ ಬೀಡುಬಿಟ್ಟಿದ್ದು ಪುಲಿನಾಡಲ್ಲಿದ್ದ ಕಿಱಿಯ ಬೆಳಗಟೂರನ್ನು ಕೀರ್ತಿಗಾವುಂಡನಿಗೆ ಕೊಟ್ಟನೆಂದು ಬರೆದಿದೆ. ಶಕ ೯೨೦ ರ ಸೋಗಲ ಶಾಸನದಲ್ಲಿ ೨ನೆಯ ತೈಲನು "ಬಲವಚ್ಚೋಳ ಮಹೀಧರೇಂದ್ರ ಕುಲಿಶ" ನೆಂದು ವರ್ಣಿತನಾಗಿದ್ದಾನೆ. ಇದರಿಂದ ವೀರ-ಮಹೇಂದ್ರನು ತೈಲನ ಸಹಾಯಕ್ಕಾಗಿ ಚೋಳನಾಡ ಮೇಲೆ ಹೋಗಿದ್ದನೆಂದು ತಿಳಿಯಬಹುದು. ಈಗ ಇವನು ಚಳುಕ್ಯರಿಗೆ ಸಾಮಂತನಾಗಿದ್ದನೋ ಇಲ್ಲವೋ ಗೊತ್ತಿಲ್ಲ. ಆದರೆ ಇವನ ಮೊಮ್ಮಗನಾದ ಇಱಿವನೊಳಂಬನು ಶಕ ೯೩೩ ರಲ್ಲಿ ೫ನೆಯ ವಿಕ್ರಮಾದಿತ್ಯನ ಮಾಂಡಲಿಕನಾಗಿದ್ದನೆಂದು ಆಲೂರು

ಶಾಸನದಿಂದ ಗೊತ್ತಾಗುವುದರಿಂದ[1] ಮಹೇಂದ್ರನೇ ಪ್ರಬಲನಾಗಿದ್ದ ತೈಲನ ಪ್ರಭುತ್ವವನ್ನು ಒಪ್ಪಿಕೊಂಡು ಕಳೆದುಹೋಗಿದ್ದ ತನ್ನ ರಾಜ್ಯವನ್ನು ಸಂಪಾದಿಸಿಕೊಂಡಿರಬಹುದು. ತೈಲನ ಹಸ್ತಗತವಾಗಿದ್ದ ಬಳ್ಳಾರಿ ಜಿಲ್ಲೆಯಲ್ಲಿ ಮಹೇಂದ್ರನ ಶಕ ೮೯೯ ರ ಲಿಪಿಯು ಇರುವುದರಿಂದ ಆ ವರ್ಷಕ್ಕೆ ಮೊದಲು ಮಹೇಂದ್ರನು ತೈಲನ ಸಾಮಂತನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿ ಮಯಿದಮ್ಮರಸನು (ಮಹೇಂದ್ರನು) ಎಱೆಗಂಗನು ಎರಗೂರಲ್ಲಿ ಮಡಿದ ಸುದ್ದಿಯನ್ನು ಕೇಳಿದನೆಂದು ಬರೆದಿದೆ. ಈ ಎಱೆಗಂಗನಾರೆಂಬುದು ತಿಳಿದಿಲ್ಲ.

ವೀರಮಹೇಂದ್ರನ ಮಗನು ವಾಕ್ಯದೇವನೆಂದೂ ಅವನ ಮಗನು ಘಟಿಯಂಕಕಾರ ಪಲ್ಲವಾದಿತ್ಯ ಇಱಿವನೊಳಂಬನೆಂದೂ ನೇಲಪಲ್ಲಿಯ ಶಾಸನದಿಂದ ತಿಳಿಯುತ್ತದೆ.[2] ವಾಕ್ಯದೇವನನ್ನು ಕುರಿತು ಯಾವ ಸಂಗತಿಗಳೂ ಹೊರಬಿದ್ದಿಲ್ಲ. ಶಕ ೯೩೩ ರಲ್ಲಿ ೫ನೆಯ ವಿಕ್ರಮಾದಿತ್ಯನಿಗೆ ಘಟಿಯಂಕಕಾರ ಇಱಿವನೊಳಂಬನೆಂಬ ಒಬ್ಬ ಮಾಂಡಲಿಕನಿದ್ದನು. ವೀರಮಹೇಂದ್ರನ ಮೊಮ್ಮಗನಾದ ಇಱಿವನೊಳಂಬನಿಗೂ ಘಟಿಯಂಕಕಾರ ಎಂಬ ಬಿರುದು ಇದ್ದುದರಿಂದ ಇಬ್ಬರೂ ಒಂದೇ ಎಂಬುದರಲ್ಲಿ ಸಂದೇಹವಿಲ್ಲ. ಇವನು ಇಱಿವಬೆಡಂಗ ಸತ್ಯಾಶ್ರಯನ ಮಗಳನ್ನು ಮದುವೆಯಾಗಿದ್ದನು. ಇಱಿವನೊಳಂಬನು ಪಱಿವಿನಾಡಲ್ಲಿದ್ದ ಪೆನ್ನುಱುಪೊನ್ನೆ ಎಂಬಲ್ಲಿ ಬೀಡುಬಿಟ್ಟಾಗ ಪುಲಿನಾಡಲ್ಲ ಕೊಳತೂರ ಎಂಬ ಗ್ರಾಮಕ್ಕೆ ಪಲ್ಲವಾದಿತ್ಯಪುರವೆಂದು ಹೆಸರಿಟ್ಟು ಅದನ್ನು ಪಲ್ಲವಾದಿತ್ಯನೊಳಂಬ ಸೆಟ್ಟಿಗೆ ವೃಶ್ಯದತ್ತಿಯಾಗಿ ದಾನಮಾಡಿದನು. ಪಱಿವಿನಾಡು ನೊಳಂಬವಾಡಿಯ ಒಂದು ಭಾಗವಾಗಿತ್ತು. ಮೇಲಿನ ಲಿಪಿಯಿಂದ ಪುಲಿನಾಡೂ ಇವನ ಆಧಿಪತ್ಯಕ್ಕೊಳಪಟ್ಟಿತ್ತೆಂದು ಗೊತ್ತಾಗುತ್ತದೆ. ಇವನು ನೊಳಂಬವಾಡಿ–೩೨೦೦೦, ಕೋಗಳಿ–೫೦೦, ಬಲ್ಲಕುಂದೆ–೩೦೦, ಕುಕ್ಕನೂರು–೩೦, ಮಾಸಿಯ ವಾಡಿನಾಡೊಳಗೆ ೫ ಗ್ರಾಮಗಳನ್ನು ಆಳುತ್ತಿದ್ದನೆಂದು ಶಕ ೯೩೩ರ ಆಲೂರು ಶಾಸನದಲ್ಲಿ ಬರೆದಿದೆ.

ಹೀಗೆ ನನ್ನಿನೊಳಂಬನ ಸಂತತಿಯವರು ಜಾಣ್ಮೆಯಿಂದ ತಮ್ಮ ಕ್ರಮಾಗತ ರಾಜ್ಯವನ್ನುಳಿಸಿಕೊಂಡು ಚಾಳುಕ್ಯರ ಕೈಕೆಳಗೆ ಆಳುತ್ತಿದ್ದರು. ಇಱಿವನೊಳಂಬನೊಳಿಪಯ್ಯನ ಮಗ ಅಯ್ಯಪದೇವನು ಎಲ್ಲಿ ಯಾವ ಅಧಿಕಾರದಿಂದ

---

[1] *Ep. Ind.* Vol. XVI, p. 27.

[2] *M. E. R*, 1914.

ಆಳುತ್ತಿದ್ದನೆಂಬುದು ಶಾಸನಗಳಲ್ಲಿ ಹೇಳಿಲ್ಲ. ಶಕ ೯೨೦ ರ ಹೊಸಕೋಟೆ ಶಾಸನದಲ್ಲಿ ಅಯ್ಯಪದೇವನ ಮಗ ಗನ್ನರಸನು ಚೋಳ ಮನೆತನದ ರಾಜರಾಜನ ಮಾಂಡಲಿಕನಾಗಿ ದಳಿಗವಾಡಿಯನ್ನು ಆಳುತ್ತಿದ್ದನೆಂದು ಹೇಳಿದೆ. ಈ ಅಯ್ಯಪ ದೇವನು ನೊಳಂಬನೇ ಆಗಿರಬೇಕು. ಈ ಶಾಸನದಿಂದ ರಾಜರಾಜನು ಗಂಗ ರಾಜ್ಯದ ದಕ್ಷಿಣಭಾಗವನ್ನು ಕ್ರಿ. ಶ. ೯೯೮ಕ್ಕೆ ಮುಂಚೆಯೇ ಕೈವಶಪಡಿಸಿ ಕೊಂಡಿದ್ದನೆಂದು ಗೊತ್ತಾಗುತ್ತದೆ. ಅವನ ೧೪ನೆಯ ವರ್ಷದ (ಕ್ರಿ. ಶ. ೯೯೮) ಒಂದು ಲಿಪಿಯಲ್ಲಿ ರಾಜರಾಜನು ಗಂಗಪಾಡಿ, ನುಳಂಬಪಾಡಿ, ತಡಿಗಪಾಡಿ ಗಳನ್ನು ಗೆದ್ದಿದ್ದನೆಂದು ಬರೆದಿರುವುದರಿಂದ ಮೇಲಿನ ವಿಧಾನವು ಬಲಪಡುತ್ತದೆ. ಆದರೆ ರಾಜರಾಜನ ಈ ವಿಜಯದಲ್ಲಿ ತಥ್ಯಾಂಶವು ಸಂಪೂರ್ಣವಿಲ್ಲವೆಂದು ತೋರುತ್ತದೆ. ಚಳುಕ್ಯರು ಗಂಗವಾಡಿಯ ಉತ್ತರ ಭಾಗಕ್ಕೂ ನೊಳಂಬ ವಾಡಿ–೩೨೦೦೦ ಪ್ರಾಂತಕ್ಕೂ ಅಧಿಪತಿಗಳಾಗಿದ್ದರೆಂದು ಅವರ ಶಾಸನಗಳಿಂದ ತಿಳಿಯುವುದರಿಂದಲೂ ರಾಜರಾಜನ ಶಾಸನಗಳು ಹೊಸಕೋಟೆ ಚಿಂತಾಮಣಿ ತಾಲೂಕುಗಳಲ್ಲಿಯೇ ದೊರೆತಿರುವುದರಿಂದಲೂ ಅವನು ಗಂಗರಾಜ್ಯದ ದಕ್ಷಿಣ ಭಾಗವನ್ನು ಮಾತ್ರ ಆಕ್ರಮಿಸಿಕೊಂಡಿದ್ದನೆಂದು ಸ್ಪಷ್ಟವಾಗುತ್ತದೆ. ಹೀಗೆ ನೊಳಂಬರಾಜ್ಯವು ೧೦ನೆಯ ಶತಮಾನದ ಅಂತ್ಯದಲ್ಲಿ ಚಾಳುಕ್ಯ ಚೋಳ ರಾಜ್ಯ ಗಳಲ್ಲಿ ಸಮಾವಿಷ್ಟವಾಗಿ ತನ್ನ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡಿತು.

ನೊಳಂಬರ ವಂಶಾವಳಿಯನ್ನು ಓದುಗರ ಸೌಕರ್ಯಕ್ಕಾಗಿ ಇದರಡಿ ಯಲ್ಲಿ ಕೊಟ್ಟಿದ್ದೇವೆ.

---


ಈಶ್ವರವಂಶದ ತ್ರಿಣಯನ ಪಲ್ಲವ
ಮಂಗಲನೊಂಬಾಧಿರಾಜ
ಸಿಂಹಪೋತ
? — ೭೭೩-೭೪
ಚಾರುಪೊನ್ನೇರ ಪಲ್ಲವಾಧಿರಾಜ (ಗವಗಣಬ್ಬೆ)
(ಕ್ರಿ. ಶ. ೭೭೪—೮೦೦)
ಪೊಲಲ್ಚೋರ ನೊಂಬ ನೊಳಂಬಾಧಿರಾಜ
(ಕ್ರಿ ಶ. ೮೦೦—೮೭೫)
ಜಾಯಬ್ಬೆಯಿಂದ
ದೀವಲಾಂಬೆಯಿಂದ
ಮಹೇಂದ್ರಾಧಿರಾಜ
(ಗಂಗವಮನೆತನದ ಗಾವಬ್ಬೆ)
(ಕ್ರಿ. ಶ. ೮೭೫-೭೬—೮೯೭)
ನೊಳಂಬಾಧಿರಾಜ ನೊಳಿಪಯ್ಯ
(ಇರ್ಮಡಿವನೊಳಂಬ)
(ಕ್ರಿ. ಶ. ೮೯೮)
ಅಯ್ಯಪದೇವ, ನನ್ನಿಗ, ಬೀರನೊಳಂಬ
(ಗಂಗಮನೆತನದ ಪೊಲ್ಲಬ್ಬರಸಿ, ನಾಗಿಯಬ್ಬೆ)
(ಕ್ರಿ. ಶ. ೯೦೯, ೯೨೩)
ಅಣ್ಣಿಗ (ಕ್ರಿ. ಶ. ೯೩೧, ೯೩೭)
(ಚಳುಕ್ಯಮನೆತನದ ಅತ್ತಿಯಬ್ಬರಸಿ)
ಏಕವಾಕ್ಯ, ದಿಲೀಪರಸ, ಇರ್ಮಡಿವನೊಳಂಬ
(ಕ್ರಿ. ಶ. ೯೪೨, ೯೪೭, ೯೪೮, ೯೫೦)
ಇರುಳ (ರಾಜಕುಮಾರ)
(ಕ್ರಿ. ಶ. ೯೩೧)
(ಏಕತ್ರ)
ನನ್ನಿನೊಳಂಬ
ಇರ್ಮಡಿವನೊಳಂಬ ನೊಳಿಪಯ್ಯ
ಕ್ರಿ. ಶ. ೯೫೧—೯೬೯-೭೦)
(ಪರಿಯಬರಸಿ)
೨ನೆಯ ಪೊಲಲ್ಚೋರ
ಅಯ್ಯಪದೇವ
ವೀರಮಹೇಂದ್ರ ನೊಳಂಬಾಧಿರಾಜ
(ಕ್ರಿ. ಶ. ೯೯೭)
ಗನ್ನರಸ
(ಕ್ರಿ. ಶ. ೯೯೮)
ವಾಕ್ಯದೇವ
ಇರಿವನೊಳಂಬ, ಪಲ್ಲವಾದಿತ್ಯ, ಘಟಯಂಕಕಾರ
(ಕ್ರಿ. ಶ. ೧೦೧೧)

## ಬಾಣರು

ಬಾಣರು ಮಹಾಬಲಿ ( ಬಲಿಚಕ್ರವರ್ತಿ ) ಯ ಕುಲದಲ್ಲಿ ಹುಟ್ಟಿದವರು. ಇವರು ನಂದಗಿರಿನಾಥ, ಪಱಿವಿಪುರಾಧೀಶ್ವರರೆಂದು ವರ್ಣಿಸಲ್ಪಟ್ಟಿದ್ದಾರೆ. ೨ನೆಯ ಪೃಥ್ವೀಪತಿಯು ತಾನು ಪಱಿವಿಪುರಾಧೀಶ್ವರ ನಂದಗಿರಿನಾಥ, ವಸಿಷ್ಠ ಗೋತ್ರಕೃಷ್ಣಧ್ವಜ ಪೈಶಾಚಿಕ ದುಂದುಭಿಘೋಷಣ ವೃಷಭ ಲಾಂಛನನೆಂದು ತನ್ನ ಉದಿಯೇಂದಿರಂ ಶಾಸನದಲ್ಲಿ ಹೇಳಿಕೊಂಡಿದ್ದಾನೆ. ಇದರಿಂದ ಬಾಣರಿಗೆ ಈ ವಿಶೇಷಣಗಳು ಇದ್ದಿರಬೇಕೆಂದು ಊಹಿಸಬಹುದು. ಪೆರ್ಬಾಣ ಚೋಳ ಬಲ್ಲಿರಾಜು ಕೋಣಿದೆನ ಶಿಲಾಶಾಸನ ( ಶಕ ೧೦೭೩ ) ದಲ್ಲಿ ಇದೇ ರೀತಿಯಾಗಿ ವರ್ಣಿಸಲ್ಪಟ್ಟಿದ್ದಾನೆ.

ಮೊಟ್ಟಮೊದಲಿಗೆ ಬಾಣರು ಇತಿಹಾಸದಲ್ಲಿ ಬರುವುದು ಕದಂಬ ಕಾಕುತ್ಸ್ಥ ವರ್ಮನ ತಾಳಗುಂದ ಶಿಲಾಶಾಸನದಲ್ಲಿ. ಮಯೂರಶರ್ಮನು ಬೃಹದ್ಬಾಣ ರಿಂದ ಕಪ್ಪವನ್ನು ತೆಗೆದುಕೊಂಡನೆಂದು ಬರೆದಿದೆ. ಈ ಕಾಲದಲ್ಲಿ ಇವರ ರಾಜ್ಯವಾವುದಿತ್ತೆಂಬುದು ಗೊತ್ತಿಲ್ಲ. ಬಾಣವಿದ್ಯಾಧರನ ಗುಡಿಮಲ್ಲಂ ಶಿಲಾ ಶಾಸನಗಳಲ್ಲಿ[1] ಅವನ ರಾಜ್ಯವು "ವಡುಗವೞಿ ಮೇಱ್ಕು" "ವಡುಗವೞಿ ಯಿನ್ ಮೇಱ್ಕು" ಅಂದರೆ ವಡುಗವೞಿಯ ಪಶ್ಚಿಮಕ್ಕಿತ್ತೆಂದು ಕೊಟ್ಟಿದೆ. ಬಾಣರಾಜನಾದ ೩ನೆಯ ವಿಕ್ರಮಾದಿತ್ಯನ ಉದಿಯೇಂದಿರಂ ತಾಮ್ರಶಾಸನವು 'ಆಂಧ್ರಾತ್ ಪಥಃ ಪಶ್ಚಿಮತೋ ( ಕ್ಷಿತಿಃ )" ಎಂದು ಇದೇ ರಾಜ್ಯವನ್ನು ಕುರಿತು ಬರೆಯುತ್ತದೆ. ಮಯಿದವೊಳು ಪ್ರಾಕೃತ ಶಾಸನದಲ್ಲಿ ಆಂಧ್ರಪಥದ ರಾಜಧಾನಿಯು ಧಂ ಞ ಕ ಡ ( ಧಾನ್ಯಕಟಕ=ಅಮರಾವತಿ ) ಎಂದು ಬರೆದಿರು ವುದರಿಂದ ಆಂಧ್ರಪಥವು ದೇಶದ ಹೆಸರೆಂದು ಗೊತ್ತಾಗುತ್ತದೆ. ಆಂಧ್ರದೇಶವು ದ್ರವಿಡ ದೇಶದ ಉತ್ತರಕ್ಕಿದ್ದುದರಿಂದ 'ಆಂಧ್ರಪಥ'ವು ತಮಿಳುಭಾಷೆಯಲ್ಲಿ ವಡುಗವೞಿಯೆಂದು ಪ್ರಯೋಗಿಸಲ್ಪಟ್ಟಿತು. ತಿರುವಲ್ಲಂ ಪುಂಗನೂರು ಶಿಲಾಶಾಸನಗಳಲ್ಲಿ ವಡುಗವೞಿಯು ಪನ್ನಿಚ್ಛಾಸಿರ (೧೨೦೦೦) ದೇಶವೆಂದೂ ಮುಡಿಯನೂರು ತಾಮ್ರಪಟ್ಟಿಕೆಯಲ್ಲಿ ಆಂಧ್ರಮಂಡಲವು ೧೨೦೦೦ ದೇಶ ವೆಂದೂ ಬರೆದಿರುವುದರಿಂದ ಆಂಧ್ರಪಥವು ದೇಶದ ಹೆಸರೆಂಬ ವಿಧಾನವೇ ಒಪಪಡುತ್ತದೆ. ಬಾಣರಾಜ್ಯವು ಮೊದಲು ಆಂಧ್ರಪಥದ ಪಶ್ಚಿಮಕ್ಕಿದ್ದ

---

[1] ಈ ಪ್ರಕರಣವನ್ನು ಬರೆಯುವಾಗ ಎಪಿಗ್ರಾಫಿಯಾ ಇಂಡಿಕಾದ ಸಂಪುಟ ೧೧ರಲ್ಲಿ ಬಾಣರನ್ನು ಕುರಿತು ವೆಂಕಯ್ಯನವರು ಬರೆದ ಲೇಖವನ್ನೂ ಸಂಪುಟ ೧೭ರಲ್ಲಿ ಪ್ರಸಿದ್ಧವಾದ ಗುಡಿಮಲ್ಲಂ ತಾಮ್ರಶಾಸನದ ಮೇಲಿನ ಹುಲ್ಟ್ಸರಲೇಖವನ್ನೂ ವಿಶೇಷವಾಗಿ ಗಮನಿಸಿದ್ದೇವೆ.



(Plate 16) ಶ್ರವಣ ಬೆಳ್ಗೊಳದ ಗೊಮ್ಮಟೇಶ್ವರ

ನಾಡನ್ನು ಅಂದರೆ ದತ್ತಮಂಡಳ (Ceded Districts) ದ ಕೆಲಭಾಗಗಳನ್ನೊಳಗೊಂಡಿದ್ದಂತೆ ತೋರುತ್ತದೆ. ಮಯೂರಶರ್ಮ್ಮನು ಶ್ರೀಪರ್ವತದ ವರೆಗಿದ್ದ ದೇಶವನ್ನಾಕ್ರಮಿಸಿಕೊಂಡ ಮೇಲೆ ಬಾಣರಿಂದ ಕಪ್ಪವನ್ನೆತ್ತಿದುದರಿಂದ ಶ್ರೀಶೈಲದ ಮಗ್ಗುಲಿನ ಪ್ರಾಂತದಲ್ಲಿ ಬಾಣರು ಇದ್ದಿರಬೇಕು. ಆಗ ಈ ಭಾಗವು ಪಲ್ಲವರ ವಶದಲ್ಲಿದ್ದುದರಿಂದ ಬಾಣರು ಅವರ ಸಾಮಂತರಾಗಿ ಆಳುತ್ತಿದ್ದರೆಂದು ಹೇಳಬಹುದು. ೨ ನೆಯ ಪುಲಿಕೇಶಿಯು ಪಲ್ಲವರನ್ನು ಸೋಲಿಸಿ ಅವರ ರಾಜ್ಯದ ಉತ್ತರಭಾಗವನ್ನು ಸ್ವಾಧೀನಪಡಿಸಿಕೊಂಡಾಗ ಬಾಣರು ತೊಂಡೈಮಂಡಲ (ಉತ್ತರ ಆರ್ಕಾಡು ಜಿಲ್ಲೆ) ದಲ್ಲಿ ನೆಲಿಸಿದರು. ಈ ನಾಡು ಆಂಧ್ರ ದೇಶದ ಪಶ್ಚಿಮಕ್ಕಿರದಿದ್ದರೂ ಅದನ್ನು ತಮ್ಮ ರಾಜ್ಯದ ಮೊದಲನೆಯ ಹೆಸರಾದ ವಡುಗವಟಿಮೇಱ್ಕು ಅಥವಾ ವಡುಗವಟಿಯೆಂದೇ ಕರೆಯುತ್ತ ಬಂದರು. ಇದಕ್ಕೇ ಮುಂದೆ ಚೋಳರ ಕಾಲದಲ್ಲಿ ಪೆರುಂಬಾಣಪ್ಪಾಡಿ ಎಂಬ ಹೆಸರು ಬಂದಿತು. ಪಾಲಾರ ನದಿಯ ದಕ್ಷಿಣಕ್ಕಿದ್ದ ದಕ್ಷಿಣ ಪಿನಾಕಿನೀ ನದಿಯ ತೀರದ ದೇಶಕ್ಕೆ ೧೦ ನೆಯ ಶತಮಾನದಲ್ಲಿ ವಾಣಗೋಪ್ಪಾಡಿ ಅಥವಾ ವಾಣಗಪ್ಪಾಡಿ ಎಂಬ ಹೆಸರು ಇದ್ದಿತು. ೨ ನೆಯ ಪೃಥ್ವೀಪತಿಯು ವಶಕ್ಕೆ ಪೆರುಂಬಾಣಪ್ಪಾಡಿಯು ಪರಾಂತಕನ ಕಾಲದಲ್ಲಿ ಹೋದ ಮೇಲೆ ಬಾಣರು ಈ ದೇಶಕ್ಕೆ ಹೋಗಿ ನೆಲಿಸಿದುದರಿಂದ ಅದು ಆ ಹೆಸರನ್ನು ಹೊಂದಿರಬಹುದು.

ಈ ಮನೆತನದ ಲಿಪಿಗಳಿಂದ ಕೆಳಗಿನ ವಂಶವೃಕ್ಷವನ್ನು ಕೊಡಬಹುದು :—

**ಜಯನಂದಿವರ್ಮ್ಮ** (ಕ್ರಿ ಶ. ೭೫೮)
|
೧ ನೆಯ ವಿಜಯಾದಿತ್ಯ (ಕ್ರಿ. ಶ ೮೧೦)
|
ಮಲ್ಲದೇವ–ಜಗದೇಕಮಲ್ಲ
|
೧ ನೆಯ ವಿಕ್ರಮಾದಿತ್ಯ, ಬಾಣವಿದ್ಯಾಧರ, ಜಯಮೇರು.
| ಕ್ರಿ. ಶ. ೮೨೮, ೮೩೪, ೮೬೯)
೨ ನೆಯ ವಿಜಯಾದಿತ್ಯ, ವೀರಚೂಡಾಮಣಿ ಪ್ರಭುಮೇರು.
| (ಕ್ರಿ. ಶ. ೮೯೮, ೯೦೫, ೯೦೯)
೨ ನೆಯ ವಿಕ್ರಮಾದಿತ್ಯ
|
೩ ನೆಯ ವಿಜಯಾದಿತ್ಯ, ಪುಗಟ್ಟಿಪ್ಪರ ಗಂಡ
|
೩ ನೆಯ ವಿಕ್ರಮಾದಿತ್ಯ, ವಿಜಯಬಾಹು
(ಸು. ಕ್ರಿ. ಶ. ೯೫೯)

ಜಯನಂದಿವರ್ಮ್ಮನು 'ಆಂಧ್ರಾತ್‌ಪಥಃ ಪಶ್ಚಿಮತಃ . . ಕ್ಷಿತಿ' ಯನ್ನು ಆಳುತ್ತಿದ್ದನೆಂದು ಉದಿಯೇಂದಿರಂ ತಾಮ್ರಶಾಸನದಲ್ಲಿ ಬರೆದಿದೆ. ನಂದಿ-ವರ್ಮ್ಮ ಪಲ್ಲವಮಲ್ಲನ ೬೨ನೆಯ ವರ್ಷದ (ಕ್ರಿ. ಶ. ೭೫೮) ಶಾಸನದಲ್ಲಿ ಮಹಾಬಲಿಬಾಣರಾಯರು ಅವನ ಸಾಮಂತನಿದ್ದನೆಂದು ಹೇಳಿದೆ. ೧ನೆಯ ವಿಜಯಾದಿತ್ಯನು ದಂತಿವರ್ಮ್ಮನ ಆಳಿಕೆಯ ೪೯ನೆಯ ವರ್ಷದಲ್ಲಿ (ಕ್ರಿ.ಶ. ೮೧೦) ದ್ದುದರಿಂದ ಇಲ್ಲಿ ಉಕ್ತನಾದ ಮಹಾಬಲಿಬಾಣರಾಯನು ವಿಜಯಾದಿತ್ಯನ ತಂದೆಯಾದ ಜಯನಂದಿವರ್ಮ್ಮನಾಗಿರಬಹುದು. ಇವನು ತನ್ನ ಪ್ರಭುವಿನ ಹೆಸರನ್ನಿಟ್ಟುಕೊಂಡಂತೆ ತೋರುತ್ತದೆ. ವಿಜಯಾದಿತ್ಯನ ಮಗನಾದ ಮಲ್ಲದೇವನು ಎಷ್ಟು ವರ್ಷ ಆಳಿದನೆಂಬುದು ಗೊತ್ತಿಲ್ಲ. ಬಾಣ ವಿದ್ಯಾಧರನು ೩ನೆಯ ನಂದಿವರ್ಮ್ಮನ ೧೭, ೨೩ನೆಯ ವರ್ಷಗಳಲ್ಲಿ (ಕ್ರಿ. ಶ. ೮೨೮, ೮೩೪) ಯೂ ನೃಪತುಂಗನ ೨೪ನೆಯ ವರ್ಷ (ಕ್ರಿ. ಶ. ೮೬೯) ದಲ್ಲಿಯೂ ಆಳುತ್ತಿದ್ದುದರಿಂದ ಇವನು ಕ್ರಿ. ಶ. ೮೨೮ ಕ್ಕೆ ಮೊದಲು ಪಟ್ಟಕ್ಕೆ ಬಂದು ಸು. ಕ್ರಿ. ಶ. ೮೭೦ ರ ವರೆಗಾದರೂ ಆಳಿರಬೇಕು. ಇವನು ಗಂಗಮನೆತನದ ೧ನೆಯ ಪೃಥ್ವೀಪತಿಯ ಮಗಳಾದ ಕುಂದವ್ವೆಯನ್ನು ಮದುವೆಯಾಗಿದ್ದನು. ಇವನು ಈ ಮನೆತನದಲ್ಲಿ ಪ್ರಬಲನಾದ ರಾಜನು ಇವನ ಕಾಲದಲ್ಲಿ ಜರುಗಿದ ಸಂಗತಿಗಳನ್ನು ಗಂಗನೊಳಂಬ ಪ್ರಕರಣಗಳಲ್ಲಿ ವಿಸ್ತಾರವಾಗಿ ಕೊಟ್ಟಿದ್ದೇವೆ. ಪ್ರಭುಮೇರು ವಿಜಯಾದಿತ್ಯನ ಶಕ ೮೨೦, ೮೨೭, ೮೩೧ (ಕ್ರಿ. ಶ. ೮೯೮, ೯೦೫, ೯೦೯) ರ ಶಾಸನಗಳು ದೊರೆತಿವೆ. ಶಕ ೮೧೦ (ಕ್ರಿ. ಶ. ೮೮೮)ರಲ್ಲಿ ಒಬ್ಬ ಮಹಾಬಲಿ ವಾಣರಾಯನು ಇದ್ದನೆಂದು ತಮಿಳು ದೇಶದ ಒಂದು ಶಾಸನದಲ್ಲಿ ಬರೆದಿದೆ. ಬಾಣ ವಿದ್ಯಾಧರನ ಕಡೆಯ ವರ್ಷವು ಕ್ರಿ.ಶ. ೮೭೦ ಆಗಿರಬಹುದಾದುದರಿಂದ ಈ ಮಹಾಬಲಿ ವಾಣರಾಯನು ಅವನ ಮಗನಾದ ಪ್ರಭುಮೇರುವೇ ಆಗಿರಬೇಕು. ಇವನು ಬಹು ಪ್ರತಾಪಶಾಲಿಯು. ಗಂಗನೊಳಂಬರೊಡನೆ ಅನೇಕ ಸಲ ಹೋರಾಡಿದನು. ಆದರೆ ಅತಿ ಪ್ರಬಲನಾದ ನೊಳಂಬ ಮಹೇಂದ್ರನು ಸು. ಕ್ರಿ. ಶ. ೮೯೨ರಲ್ಲಿ ಇವನನ್ನು ಸೋಲಿಸಿ ಮಹಾಬಲಿ ಕುಲಧ್ವಂಸವನ್ನು ಮಾಡಿದನು. ಈ ಪ್ರಭುಮೇರು ವಿಜಯಾದಿತ್ಯನ ಗುಡಿಮಲ್ಲಂ ತಾಮ್ರಶಾಸನದಲ್ಲಿ ೨ನೆಯ ವಿಕ್ರಮಾದಿತ್ಯನು ತನ್ನ ತಂದೆಯ ಆಜ್ಞೆಯ ಮೇರೆಗೆ ಪೂರ್ವದಲ್ಲಿ ನಂದದತ್ತವಾದ ವಿಪ್ರಪೀಠ ಎಂಬ ಗ್ರಾಮವನ್ನು ಶಾಸ್ತ್ರಪಾರಗರಾದ ಬ್ರಾಹ್ಮಣರಿಗೆ ಪುನರ್ದತ್ತಿಯಾಗಿ ಕೊಟ್ಟನು. ಇವನ ಮಗನಾದ ವಿಜಯಾದಿತ್ಯನ ವಿಷಯವಾಗಿ ಯಾವ ಸಂಗತಿಗಳೂ ತಿಳಿದಿಲ್ಲ. ೩ನೆಯ ವಿಕ್ರಮಾದಿತ್ಯನು ಉದಿಯೇಂದಿರಂ ತಾಮ್ರಶಾಸನದಲ್ಲಿ ಕೃಷ್ಣರಾಜನ ಸಖನೆಂದು ವರ್ಣಿಸಲ್ಪಟ್ಟಿ

ದ್ದಾನೆ. ಇವನು ಕ್ರಿ. ಶ. ೯೦೯ ರಲ್ಲಿದ್ದ ಪ್ರಭುಮೇರುವಿನ ಮರಿಮಗನಾದುದರಿಂದ ಇಲ್ಲಿ ಉಕ್ತನಾದ ಕೃಷ್ಣರಾಜನು ರಾಷ್ಟ್ರಕೂಟ ಮನೆತನದ ೩ನೆಯ ಕೃಷ್ಣರಾಜ (ಕ್ರಿ. ಶ. ೯೪೦–೯೬೭) ನಾಗಿರಬೇಕು. ಗಂಗ ಮನೆತನದ ೨ನೆಯ ಪೃಥ್ವೀಪತಿಯು ೧ನೆಯ ಪರಾಂತಕನಿಂದ ಬಾಣಾಧಿರಾಜನೆಂಬ ಬಿರುದನ್ನು ಪಡೆದು ಅವನ ಕೈಕೆಳಗೆ ಬಾಣಮಂಡಲವನ್ನು ಕ್ರಿ. ಶ. ೯೧೫–೯೨೧ ರಲ್ಲಿ ಆಳುತ್ತಿದ್ದನು. ಪರಾಂತಕನು ಇಬ್ಬರು ಬಾಣರಾಜರನ್ನು ಸೋಲಿಸಿದ್ದನೆಂದು ೨ನೆಯ ಪೃಥ್ವೀಪತಿಯ ಉದಿಯೇಂದಿರಂ ಲಿಪಿಯಿಂದ ಗೊತ್ತಾಗುತ್ತದೆ. ಬಾಣರು ಪರಾಂತಕನ ಶತ್ರುವಾದ ರಾಷ್ಟ್ರಕೂಟ ೩ನೆಯ ಕೃಷ್ಣರಾಜನ ಮೊರೆ ಹೊಕ್ಕಿರಬೇಕು. ಕರಹಾಡ ಶಾಸನದಲ್ಲಿ (ಕ್ರಿ. ಶ. ೯೫೯) ಕೃಷ್ಣನು ಚೋಳನಿರ್ಮೂಲನದಲ್ಲಿ ತನಗೆ ಸಹಾಯಕರಾಗಿದ್ದ ಅನುಯಾಯಿಗಳನ್ನು ತಾನು ಗೆದ್ದಿದ್ದ ಚೋಳರಾಜ್ಯದ ಮೇಲೆ ನೇಮಿಸುವುದಕ್ಕಾಗಿ ಮೇಲ್ಪಾಡಿ (ಉತ್ತರ ಆರ್ಕಾಡು ಜಿಲ್ಲೆ) ಯಲ್ಲಿ ಬೀಡು ಬಿಟ್ಟಿದ್ದನೆಂದು ಬರೆದಿದೆ. ಈ ಪ್ರಸಂಗದಲ್ಲಿ ತನ್ನನ್ನು ಆಶ್ರಯಿಸಿದ್ದ ಬಾಣರಾಜನಾದ ೩ನೆಯ ವಿಕ್ರಮಾದಿತ್ಯನನ್ನು ಅವನ ರಾಜ್ಯದಲ್ಲಿ ಸ್ಥಾಪಿಸಿರಬಹುದು.

---